ತತ್ವಗ್ರಂಥಾವಳಿ

ಶ್ರೀಶಂಕರಾಚಾರ್ಯವಿರಚಿತ

# ವಿವೇಕಚೂಡಾಮಣಿ

ಸಂಸ್ಕೃತಮೂಲ, ಅನುವಾದ, ಟಿಪ್ಪಣಿ, ಸಾರ, ಪರಿಶಿಷ್ಟ
ಮುಂತಾದವುಗಳೊಡನೆ

ಬರೆದವರು :
ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು

ಕ್ರಮಾಂಕ ೬೩

ಪ್ರಕಾಶಕರು :

# ಬಿನ್ನಹ

ಅಧ್ಯಾತ್ಮಪ್ರಕಾಶಕಾರ್ಯಾಲಯದವರು ಬ್ರಹ್ಮೀಭೂತ ಶ್ರೀ ಶ್ರೀ ಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳವರ ಆಜ್ಞೆಯಂತೆ ಅವರ ಕನ್ನಡ ಕೃತಿಗಳನ್ನೆಲ್ಲ ಹೊಳೆನರಸೀಪುರದಲ್ಲಿಯೇ ಪುನರ್ಮುದ್ರಣಯೋಜನೆಗೆ ಒಳಪಡಿಸಿ ಪ್ರತಿವರ್ಷವೂ ಕೆಲಕೆಲವು ಗ್ರಂಥಗಳನ್ನು ಹೊರತರುತ್ತಿದ್ದಾರೆ. 1992ನೆಯ ವರ್ಷದ ಶ್ರೀಶ್ರೀ ಆರಾಧನೋತ್ಸವ-ದಿನದಿಂದಾರಂಭಿಸಿ 1993ನೇ ಆರಾಧನೋತ್ಸವದವರೆಗಿನ ಒಂದುವರ್ಷದ ಅವಧಿಯಲ್ಲಿ ಹದಿನೈದು ಗ್ರಂಥಗಳನ್ನು (ಒಟ್ಟು ಪುಟಸಂಖ್ಯೆ ೩,೪೯೪) ಹೊರತರಲಾಗಿದೆ. ಹೀಗೆ ಗ್ರಂಥಪ್ರಕಟನಸೇವೆಯು ಗುರುಕೃಪೆಯಿಂದ ಮುಂದುವರೆದಿದೆ. ಇದೇ ಯೋಜನೆಯಲ್ಲಿ ಈಗ ಮೂರನೆಯ ಬಾರಿಗೆ "ವಿವೇಕಚೂಡಾಮಣಿ" ಯು ಪುನರ್ಮುದ್ರಿತವಾಗಿ ವಾಚಕರ ಕರಕಮಲವನ್ನಲಂಕರಿಸುತ್ತಿದೆ.

ಈ ಗ್ರಂಥದ ವಿಷಯವಾಗಿ ತಿಳಿಸಬೇಕಾಗಿರುವ ಮುಖ್ಯ ವಿಷಯಗಳನ್ನು ಗ್ರಂಥಕರ್ತರು ತಮ್ಮ ಪೀಠಿಕೆಯಲ್ಲಿ ವಿಸ್ತಾರವಾಗಿ ಪ್ರಸ್ತಾಪಿಸಿರುತ್ತಾರೆ. ಆದ್ದರಿಂದ ಆ ವಿಷಯದಲ್ಲಿ ವಾಚಕರು ತಮ್ಮತಮ್ಮ ಅಭಿಪ್ರಾಯಗಳನ್ನು ರೂಪಿಸಿಕೊಳ್ಳಲು ಸ್ವತಂತ್ರರಾಗಿದ್ದಾರೆ. ಶ್ರೀಶ್ರೀಗಳವರ ಬರವಣಿಗೆಯಲ್ಲಿ ಯಾವದೇ ರೀತಿಯ ಬದಲಾವಣೆಯನ್ನೂ ಮಾಡದೆ ಹಿಂದಿನ ಮುದ್ರಣಗಳಂತೆಯೇ ಈ ಗ್ರಂಥವನ್ನೂ ಮುದ್ರಿಸಿ ಪ್ರಕಾಶಗೊಳಿಸಲಾಗಿದೆ.

ಈ ಗ್ರಂಥದ ಪ್ರಕಾಶನಕ್ಕೆ ಬೆಂಗಳೂರಿನ ಗುರುಭಕ್ತಮಹನೀಯರೊಬ್ಬರು ಹತ್ತುಸಾವಿರರೂಪಾಯಿಗಳನ್ನು ದಾನಮಾಡಿ ತಮ್ಮ ಹೆಸರನ್ನು ಪ್ರಕಟಿಸಬಾರದೆಂದು ತಿಳಿಸಿದ್ದಾರೆ. ಆ ಮಹನೀಯರ ಉಪಕಾರವನ್ನು ಸ್ಮರಿಸುತ್ತಾ ಸದ್ಗುರುಗಳು ಅವರಿಗೆ ಇತೋಪ್ಯತಿಶಯವಾದ ಅಭ್ಯುದಯನಿಃಶ್ರೇಯಸಫಲಗಳನ್ನು ದಯಪಾಲಿಸಲೆಂದು ಹಾರೈಸಲಾಗಿದೆ.

ಕಾರ್ಯಾಲಯದವರು ಇನ್ನೂ ಹತ್ತಾರುಗ್ರಂಥಗಳನ್ನು ಪುನರ್ಮುದ್ರಣ ಮಾಡಬೇಕಾದ ಹೊರೆಯನ್ನು ಹೊತ್ತಿರುತ್ತಾರೆ. ಉದಾರಮಹಾಶಯರುಗಳು ಈ ಗ್ರಂಥಸರಸ್ವತೀಸೇವೆಗೆ ಯಥೋಚಿತ ಸಹಾಯದ್ರವ್ಯವನ್ನು ನೀಡಿ ಪ್ರೋತ್ಸಾಹಿಸಬೇಕಾಗಿ ಸವಿನಯ ಪ್ರಾರ್ಥನೆ.

ವಾಚಕರು ಎಂದಿನಂತೆ ಈ ಗ್ರಂಥವನ್ನೂ ಆದರದಿಂದ ಬರಮಾಡಿಕೊಳ್ಳುವರೆಂದು ಆಶಿಸಲಾಗಿದೆ.

ಇತಿ– ಸಜ್ಜನವಿಧೇಯ,

ಹೊಳೆನರಸೀಪುರ, ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ,

ತಾ|| 1–8–1993. ಅಧ್ಯಾತ್ಮಗ್ರಂಥಾವಳಿಯ ಸಂಪಾದಕ.

# ಪೀಠಿಕೆ

---

## ಗ್ರಂಥದ ಹೆಚ್ಚುಗಾರಿಕೆ

ಶ್ರೀಶಂಕರಾಚಾರ್ಯರ ಕೃತಿಯೆಂದು ಪ್ರಸಿದ್ಧವಾಗಿರುವ ಪ್ರಕರಣಗಳಲ್ಲಿ ವಿವೇಕಚೂಡಾಮಣಿಗೆ ಒಂದು ಅಸಾಧಾರಣಸ್ಥಾನವುಂಟು. ಅದೇನೆಂದರೆ ಸಂಸ್ಕೃತದ ವೇದಾಂತಗ್ರಂಥಗಳನ್ನು ಓದುವದಕ್ಕೆ ಮೊದಲುಮಾಡುವವರು ಈ ಗ್ರಂಥವನ್ನು ಅವಶ್ಯವಾಗಿ ಓದುತ್ತಾರೆ. ಸಂಸ್ಕೃತವು ಬಾರದೆ ಇರುವವರೂ ಇದನ್ನು ಅನುವಾದಗಳ ಮೂಲಕ ಅರ್ಥಮಾಡಿಕೊಂಡು ಇದರ ಶ್ಲೋಕಗಳನ್ನು ಕಂಠಪಾಠಮಾಡಿಕೊಂಡು ಆಗಾಗ್ಗೆ ಉದಾಹರಿಸುತ್ತಾ ನಲಿಯುತ್ತಾರೆ. ಇದರ ಅನುವಾದಗಳು ಭರತಖಂಡದ ದೇಶಭಾಷೆಗಳಲ್ಲೆಲ್ಲ ಆಗಿರುತ್ತವೆ. ಇಂಗ್ಲಿಷಿನಲ್ಲಿಯೂ ಇದರ ಹಲವು ಅನುವಾದಗಳಾಗಿ ಪಾಶ್ಚಾತ್ಯರಿಗೂ ಸವಿಯನ್ನು ಕಾಣಿಸಿವೆ.

ಗ್ರಂಥವು ಹೀಗೆ ವೇದಾಂತದಲ್ಲಿ ಅಭಿರುಚಿಯುಳ್ಳವರ ಮನಸ್ಸನ್ನು ಹಿಡಿದಿಟ್ಟುಕೊಂಡಿರುವದಕ್ಕೂ ಹೊಸದಾಗಿ ಓದುವವರ ಚಿತ್ತವನ್ನು ಬಲುಬೇಗ ತನ್ನ ಕಡೆಗೆ ಸೆಳೆದುಕೊಳ್ಳುತ್ತಿರುವದಕ್ಕೂ ಅನೇಕ ಕಾರಣಗಳಿವೆ. ಅವುಗಳಲ್ಲಿ ಮುಖ್ಯವಾದವು ಯಾವವೆಂದರೆ: (೧) ಇದು ವೇದಾಂತದ ಒಟ್ಟುಸಿದ್ಧಾಂತವನ್ನೂ ಸಾಧನಗಳನ್ನೂ ಸ್ವಲ್ಪದರಲ್ಲಿ ಅಡಕಮಾಡಿ ಬೋಧಿಸುತ್ತಿರುವದು. (೨) ಇದರ ಭಾಷೆಯು ಸರಳವಾಗಿ ಶೈಲಿಯು ಮನೋಹರವಾಗಿ ಪದ್ಯಬಂಧವು ಮೃದುಮಧುರವಾದ ಶಬ್ದಗಳ ಜೋಡಣೆಯುಳ್ಳದ್ದಿರುವದು. (೩) ವಿಷಯಪ್ರತಿಪಾದನೆಯು ಮೆಟ್ಟಿಲುಮೆಟ್ಟಿಲಾಗಿ ತಿಳಿಯಬೇಕಾದ ಸಿದ್ಧಾಂತವನ್ನೂ ಮಾಡಬೇಕಾದ ಸಾಧನವನ್ನೂ ಪಡೆಯಬೇಕಾದ ಫಲವನ್ನೂ ಸಂದೇಹವಿಲ್ಲದಂತೆ ಸ್ಫುಟವಾಗಿ ಮನಗಾಣಿಸುವದು. (೪) ತರ್ಕದ ಶಬ್ದಗಳನ್ನು ಉಪಯೋಗಿಸದೆ, ಬಳಸಿರುವ ಪಾರಿಭಾಷಿಕಶಬ್ದಗಳನ್ನು ಅಲ್ಲಲ್ಲಿಯೇ ವಿವರಿಸುತ್ತಾ ಉತ್ತಮವಾದ ದೃಷ್ಟಾಂತಗಳಿಂದಲೂ ಯುಕ್ತ್ಯನುಭವಗಳ ಹೊಂದಿಕೆಯಿಂದಲೂ ಬಾಯಿಬಿಟ್ಟು ಹೇಳಿರುವ ಅಥವಾ ಒಂದೊಂದು ಶಬ್ದಗಳಿಂದ ಸೂಚಿಸಿರುವ ಪ್ರಮಾಣವಾಕ್ಯಗಳಿಂದಲೂ ವಿಷಯವನ್ನು ಹೆಚ್ಚುಹೆಚ್ಚಾಗಿ ಹಿಗ್ಗಿಸುತ್ತಾಹೋಗುವ ಪುನರುಕ್ತಿಗಳಿಂದಲೂ ಅತಿಗಹನವಾದ ವಿಚಾರಗಳೂ ಸುಲಿದ ಬಾಳೆಯಹಣ್ಣಿನಂತೆ ಸುಲಭವಾಗುವಂತೆ ಮಾಡಿರುವದು.

ವಿವೇಕಚೂಡಾಮಣಿಯ ಹಲವು ಶ್ಲೋಕಗಳು ಅಧ್ಯಾತ್ಮೋಪನಿಷತ್ತು, ಕುಂಡಿಕೋಪನಿಷತ್ತು, ಆತ್ಮೋಪನಿಷತ್ತು– ಎಂಬ ಮೂರು ಉಪನಿಷತ್ತುಗಳಲ್ಲಿ ಸೇರಿಕೊಂಡಿರುವದೊಂದು ಆಶ್ಚರ್ಯಕರವಾದ ದೃಶ್ಯ. ಈ ಶ್ಲೋಕಗಳ ಪಟ್ಟಿಯನ್ನು ಈ ಗ್ರಂಥದ ಕೊನೆಯಲ್ಲಿ ಮೂರನೆಯ ಪರಿಶಿಷ್ಟವಾಗಿ ಕೊಟ್ಟಿರುತ್ತದೆ.

ಅದನ್ನು ನೋಡಿದರೆ ವಿವೇಕಚೂಡಾಮಣಿಯ ಶ್ಲೋಕಸಂಖ್ಯೆಯ ಅನುಕ್ರಮವೂ ಉಪನಿಷದ್ವಚನಗಳ ಸಂಖ್ಯೆಯ ಅನುಕ್ರಮವೂ ಒಂದು ವ್ಯವಸ್ಥೆಯಿಂದ ಒಂದನ್ನೊಂದು ಅನುಸರಿಸಿಕೊಂಡಿರುವದು ಕಾಣಬರುತ್ತದೆ. ಉಪನಿಷತ್ತಿನಲ್ಲಿರುವ ಮಂತ್ರಗಳು ಸೋಪಾನಕ್ರಮದಿಂದ ವಿಚಾರವನ್ನು ಹೊರಪಡಿಸುವದಿಲ್ಲ; ಅವುಗಳಲ್ಲಿರುವ ಕೆಲವು ಪಾಠಾಂತರಗಳಿಗಿಂತ ವಿವೇಕಚೂಡಾಮಣಿಯ ಪಾಠವೇ ಹೆಚ್ಚು ಒಪ್ಪಾಗಿರುತ್ತದೆ ಈ ಶ್ಲೋಕಗಳನ್ನು ಬಿಟ್ಟರೆ ಉಪನಿಷತ್ತಿನಲ್ಲಿ–ಮುಖ್ಯವಾಗಿ ಆತ್ಮೋಪನಿಷತ್ತಿನಲ್ಲಿ*–ಉಳಿಯುವದು ಬಹು ಸ್ವಲ್ಪಭಾಗ. ಈ ಎಲ್ಲಾ ಕಾರಣಗಳಿಂದ ವಿವೇಕಚೂಡಾಮಣಿಯ ಶ್ಲೋಕಗಳೇ ಈ ಉಪನಿಷತ್ತುಗಳ ಭಾಗವಾಗಿ ಮಾರ್ಪಟ್ಟಿರಬೇಕೆಂದು ಕಲ್ಪಿಸಬೇಕಾಗುತ್ತದೆ. ಇದು ನಿಜವಾದರೆ ವಿವೇಕಚೂಡಾಮಣಿಯ ಮಹಿಮೆಯು ಬಲುಬೇಗ ಜನರಿಗೆ ಮನದಟ್ಟಾಗಿರಬೇಕೆಂದೂ ಅದರ ನೆರಳು ಅದರಿಂದೀಚೆಗೆ ಹೊರಕ್ಕೆ ಬಂದಿರುವ ವೇದಾಂತಗ್ರಂಥಗಳ ಮೇಲೆ ಬಲವಾಗಿ ಬಿದ್ದಿರಬೇಕೆಂದೂ ಊಹಿಸುವದು ಸ್ವಾಭಾವಿಕವಾಗುತ್ತದೆ ವೇದಾಂತಪ್ರಕರಣಗಳ ಬೆಳವಣಿಗೆಯನ್ನು ಐತಿಹಾಸಿಕದೃಷ್ಟಿಯಿಂದ ನೋಡಬೇಕೆನ್ನುವವರಿಗೆ ಇಲ್ಲಿ ಕೊಟ್ಟಿರುವ ತಿಳಿವಳಿಕೆಯು ಸ್ವಲ್ಪಮಟ್ಟಿಗಾದರೂ ಪ್ರಯೋಜನಕ್ಕೆ ಬರುವದೆಂದು ನಾನು ನಂಬಿರುತ್ತೇನೆ.

## ಗ್ರಂಥವನ್ನು ಬರೆದಿರುವವರು ಯಾರು ?

ಈ ಗ್ರಂಥವು ಶ್ರೀಶಂಕರಾಚಾರ್ಯರ ಕೃತಿಯೆಂದೇ ಎಲ್ಲೆಲ್ಲಿಯೂ ಪ್ರಸಿದ್ಧವಾಗಿದೆಯಷ್ಟೆ ? ಪ್ರಾರಂಭಶ್ಲೋಕದಲ್ಲಿ 'ಗೋವಿನ್ದಂ ಪರಮಾನನ್ದಂ ಸದ್ಗುರುಂ ಪ್ರಣತೋಽಸ್ಮ್ಯಹಮ್' ಎಂದು ಗೋವಿಂದಸದ್ಗುರುವಿಗೆ ನಮಸ್ಕಾರವನ್ನು ಹೇಳಿರುವದೂ ಕೊನೆಯಲ್ಲಿ 'ಏಷಾ ಶಂಕರಭಾರತೀ ವಿಜಯತೇ ನಿರ್ವಾಣಸಂದಾಯಿನೀ' (೪೭೭) ಎಂದು ಗ್ರಂಥವು ಶಂಕರರ ನುಡಿಯೇ ಎಂದು ಹೇಳಿರುವದೂ ಈ ಸಾಂಪ್ರದಾಯಿಕಪ್ರಸಿದ್ಧಿಯನ್ನೇ ಪುಷ್ಟಿಗೊಳಿಸುವಂತಿದೆ. ಆದರೆ ಹಲವು ಕಾರಣಗಳಿಂದ ಇದು ಪ್ರಸ್ಥಾನತ್ರಯಭಾಷ್ಯಗಳನ್ನು ಬರೆದಿರುವ ಭಾಷ್ಯಕಾರರ ಕೃತಿಯೇ ಎಂದು ಸಾರಿಹೇಳಲು ನಮಗೆ ಧೈರ್ಯವು ಸಾಲದು. ಇದು ಶ್ರೀಶಂಕರಭಗವತ್ಪಾದರದ್ದೆಂಬುದು ಈಗ್ಗೆ ಸರ್ವಜನಸಂಮತವಾಗಿದ್ದರೂ

* ಈ ಉಪನಿಷತ್ತುಗಳು ನಿರ್ಣಯಸಾಗರಮುದ್ರಣಾಲಯದಲ್ಲಿ ಪ್ರಕಟವಾಗಿರುವ ಅಷ್ಟೋತ್ತರಶತೋಪನಿಷತ್ತುಗಳ ಸಂಗ್ರಹದಲ್ಲಿವೆ. ಇವುಗಳಲ್ಲೊಂದಾದ ಆತ್ಮೋಪನಿಷತ್ತು ಆನಂದಾಶ್ರಮದಲ್ಲಿ ಸವ್ಯಾಖ್ಯಾನವಾಗಿ ಪ್ರಕಟವಾಗಿರುವ 'ಉಪನಿಷತ್ತುಗಳ ಸಮುಚ್ಚಯ'ದಲ್ಲಿಯೂ ಇದೆ ; ಆದರೆ ಅಲ್ಲಿ ವಿವೇಕಚೂಡಾಮಣಿಯ ಶ್ಲೋಕಗಳು ಇಲ್ಲವೇ ಇಲ್ಲ ! ಉಪನಿಷದ್ವ್ಯಾಖ್ಯಾತೃವಾದ ನಾರಾಯಣನೆಂಬಾತನ ಕಾಲಕ್ಕೆ ಉಪನಿಷತ್ತಿನಲ್ಲಿ ಇವು ಇರಲಿಲ್ಲವೆಂದೂ ಈಚೆಗೆ ಹೇಗೋ ಇವು ಸೇರಿಕೊಂಡಿರಬೇಕೆಂದೂ ಹೇಳದೆ ಗತ್ಯಂತರವಿಲ್ಲವಾಗಿದೆ.

ಈ ವಿಷಯಕ್ಕೆ ಸಂಶಯವನ್ನುಂಟುಮಾಡುವ ಕೆಲವು ಮುಖ್ಯವಾದ ಸಂಗತಿಗಳನ್ನು ಇಲ್ಲಿ ಉದಾಹರಿಸುತ್ತೇನೆ :

(೧) ಶ್ರೀಮಚ್ಛಂಕರಾಚಾರ್ಯರವರೇ ಬರೆದದ್ದೆಂದು ಅವರ ಬೆಂಬಳಿಯ ಶಿಷ್ಯರಾದ ಸುರೇಶ್ವರಾಚಾರ್ಯರು ಒಪ್ಪಿ ತಮ್ಮ ಗ್ರಂಥಗಳಲ್ಲಿ ಸಾಮತಿಗಾಗಿ ಪ್ರಮಾಣವಚನಗಳನ್ನು ಆರಿಸಿಕೊಂಡಿರುವ ಉಪದೇಶಸಾಹಸ್ರಿಯ ಗಡುಚಾದ ಪದ್ಯಶೈಲಿಗೂ ಇಲ್ಲಿರುವ ಸುಲಲಿತ ವಾದ ಪದ್ಯಶೈಲಿಗೂ ಬಹಳ ತಾರತಮ್ಯವು ಕಾಣಬರುತ್ತದೆ.

(೨) ಇಲ್ಲಿ ಬಳಸಿರುವ ಅನೇಕ ಪಾರಿಭಾಷಿಕಶಬ್ದಗಳೂ ವಚನವ್ಯಕ್ತಿಗಳೂ ಉಪದೇಶಸಾಹಸ್ರಿಯಲ್ಲಿಯೇ ಆಗಲಿ ಪ್ರಸ್ಥಾನತ್ರಯಭಾಷ್ಯದಲ್ಲಿಯೇ ಆಗಲಿ ಕಂಡು ಬರುವದಿಲ್ಲ. ಕೆಲವು ಶಬ್ದಗಳನ್ನು ಇಲ್ಲಿ ಉಪಯೋಗಿಸಿರುವ ಅರ್ಥದಲ್ಲಿ ಭಾಷ್ಯದಲ್ಲಿ ಉಪಯೋಗಿಸಿರುವದಿಲ್ಲ ; ಈ ಅರ್ಥಗಳು ಈಚಿನ ವೇದಾಂತಗ್ರಂಥಗಳಲ್ಲಿ ಪ್ರಚುರವಾಗಿ ರುತ್ತವೆ.

(೩) ಇಲ್ಲಿ ಉದಾಹರಿಸಿರುವ ಕೆಲವು ಪ್ರಮಾಣವಚನಗಳು ಶ್ರೀಶಂಕರಾ ಚಾರ್ಯರ ಭಾಷ್ಯದಲ್ಲಿ ಎಲ್ಲಿಯೂ ಉದಾಹರಿಸದಿರುವ ಹಲವು ಬಿಡಿ ಉಪನಿಷತ್ತುಗಳಿಂದ ಲೂ ವಾಸಿಷ್ಠರಾಮಾಯಣ, ಸೂತಸಂಹಿತೆ, ಭಾಗವತ– ಮುಂತಾದ ಗ್ರಂಥಗಳಿಂದಲೂ ತೆಗೆದುಕೊಂಡವುಗಳಾಗಿವೆ. ಇಲ್ಲಿರುವ ಕೆಲವು ಅಭಿಪ್ರಾಯಗಳು 'ಪರಮಾರ್ಥಸಾರ'ವೇ ಮುಂತಾದ ಇತ್ತೀಚಿನ ಗ್ರಂಥಗಳಲ್ಲಿ ಮಾತ್ರ ಕಂಡುಬರುವವಾಗಿವೆ.

(೪) ಇಲ್ಲಿ ಉಪಯೋಗಿಸಿರುವ ವೇದಾಂತಪ್ರಕ್ರಿಯೆಯು ಶಾಂಕರಸಿದ್ಧಾಂತದ ಅಸಾಧಾರಣಪ್ರಕ್ರಿಯೆಗಿಂತ ಭಿನ್ನವಾಗುವದಲ್ಲದೆ ಕೆಲವು ಮುಖ್ಯವಾದ ಅಂಶಗಳಲ್ಲಿ ಅದಕ್ಕೆ ವಿರುದ್ಧವಾಗಿರುವಂತೆಯೂ ಕಾಣುತ್ತದೆ.

ಮುಖ್ಯವಾಗಿ ಮೇಲೆ ಕಂಡ ಕಾರಣಗಳಿಂದ ಈ ಗ್ರಂಥವನ್ನು ಯಾರೋ ಇತ್ತೀಚಿನವರು ರಚಿಸಿರಬಹುದೆಂಬ ಊಹೆಗೆ ಅವಕಾಶವು ದೊರಕುತ್ತದೆ. ಈ ಊಹೆಯು ನನ್ನ ಹೃದಯದಲ್ಲಿ ಮಿಂಚಿದಂದಿನಿಂದ ಈ ಗ್ರಂಥದ ಶೈಲಿ, ಪ್ರಮಾಣ ವಚನಗಳು, ಪ್ರಕ್ರಿಯೆ– ಇವುಗಳನ್ನೇ ಬಳಸಿರುವ ವೇದಾಂತಿಲೇಖಕರು ಮತ್ತೆ ಯಾರಾದರೂ ಇದ್ದಾರೆಯೆ ?– ಎಂಬುದನ್ನು ತಿಳಿದುಕೊಳ್ಳುವ ಕುತೂಹಲವು ಸಹಜವಾಗಿ ತಲೆದೋರಿತು. ಈ ಸಂದರ್ಭದಲ್ಲಿ ಉಪನಿಷತ್ತುಗಳಿಗೂ ಬ್ರಹ್ಮ ಸೂತ್ರಕ್ಕೂ "ದೀಪಿಕೆ" ಎಂಬ ಹೆಸರಿನಿಂದ ವೃತ್ತಿಗಳನ್ನೂ ಭಗವದ್ಗೀತೆಗೆ 'ತಾತ್ಪರ್ಯಬೋಧಿನಿ' ಎಂಬ ವಿಸ್ತಾರವಾದ ವ್ಯಾಖ್ಯಾನವನ್ನೂ ಬರೆದಿರುವ ಶ್ರೀಶಂಕರಾನಂದರ ಹೆಸರು ಮೊದಲು ನೆನಪಿಗೆ ಬಂದಿತು. ಒಳಹೊಕ್ಕು ನೋಡಲಾಗಿ ವಿವೇಕಚೂಡಾಮಣಿಗೂ ಗೀತಾತಾತ್ಪರ್ಯಬೋಧಿನಿಗೂ ಇರುವ ಆಶ್ಚರ್ಯಕರವಾದ ಸಾಮರಸ್ಯವೂ ಸಾಮ್ಯವೂ ಮನದಟ್ಟಾಯಿತು. ಶಂಕರಾನಂ ದರು ಶಂಕರಾಂಶಸಂಭೂತರೆಂದೇ ಅನೇಕರು ಭಾವಿಸುತ್ತಾರೆ. ಅವರು ಗೀತಾತಾತ್ಪ ರ್ಯಬೋಧಿನಿಯ ಮಂಗಲಶ್ಲೋಕದಲ್ಲಿ 'ಆನಂದಾತ್ಮಸರಸ್ವತಿ'ಗಳು ತಮ್ಮ ಗುರುಗಳೆಂದು ಹೇಳಿಕೊಂಡಿರುತ್ತಾರೆ. ಅವರಿಗೇ 'ವಿದ್ಯಾಶಂಕರ'ರೆಂಬ ಬಿರುದು

ಇತ್ತೀಂದೂ ಕೆಲವರು ಕಲ್ಪಿಸಿರುತ್ತಾರೆ. ಇದನ್ನೆಲ್ಲಾ ಮನೆದಂದರೆ ವಿವೇಕಚೂಡಾಮಣಿಯ ಮಂಗಲಶ್ಲೋಕದಲ್ಲಿರುವ 'ಗೋವಿನ್ದಂ ಪರಮಾನನ್ದಂ' ಎಂಬುದು ಗೋವಿಂದಸ್ವರೂಪರಾದ ಆನಂದಾತ್ಮರ ಸ್ಮರಣೆಯಾಗಿರಬಹುದೆ ? ಕೊನೆಯಲ್ಲಿ 'ಏಷಾ ಶಂಕರಭಾರತೀ' ಎಂಬುದು 'ವಿದ್ಯಾಶಂಕರರ' ನುಡಿಯೆಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಿರಬಹುದೆ ? ಅಥವಾ ಮತ್ತೆ ಯಾರಾದರೂ ಗ್ರಂಥಕಾರರು ಶಂಕರರೆಂದೇ ಭಾವಿಸಿ ಬರೆದು ಸೇರಿಸಿರುವ ಗ್ರಂಥಪ್ರಶಂಸೆಯಾಗಿರಬಹುದೆ ? – ಎಂಬೀ ಶಂಕೆಯೊಂದು ಎದ್ದುಕೊಳ್ಳಬಹುದಾಗಿರುತ್ತದೆ. ಹೀಗೆ ಐತಿಹಾಸಿಕ ದೃಷ್ಟಿಯಿಂದ ಊಹಿಸುವಾಗ ಎಂಥೆಂಥ ಭಾರಿಯ ತಪ್ಪುಗಳು ಆಗುವ ಸಂಭವವಿದೆ ಎಂಬುದು ನನಗೆ ಚೆನ್ನಾಗಿ ತಿಳಿದಿರುವದರಿಂದ ಈ ನನ್ನ ಊಹೆಗೆ ಎಷ್ಟು ಬೆಲೆಯನ್ನು ಕೊಡಬಹುದೆಂಬುದನ್ನು ಇತಿಹಾಸಶೋಧಕರೇ ವಿಮರ್ಶಿಸಿ ನಿರ್ಣಯಿಸತಕ್ಕದ್ದಾಗಿದೆ.

ಆದರೆ ವಿವೇಕಚೂಡಾಮಣಿಗೂ ಶ್ರೀಶಂಕರಾನಂದರ ಗೀತಾತಾತ್ಪರ್ಯಬೋಧಿನಿಗೂ ಅತಿನಿಕಟವಾದ ಸಂಬಂಧವಿದೆಯೆಂಬುದು ಮಾತ್ರ ನನಗೆ ನಿಸ್ಸಂಶಯವಾಗಿಬಿಟ್ಟಿರುತ್ತದೆ. ನಾನು ಈ ತೀರ್ಮಾನಕ್ಕೆ ಬಂದಿರುವದಕ್ಕೆ ಕಾರಣಗಳಿವು ;

೧. ವಿವೇಕಚೂಡಾಮಣಿಯ ಭಾಷಾಶೈಲಿಯು ಗೀತಾತಾತ್ಪರ್ಯಬೋಧಿನಿಯ ಶೈಲಿಯಂತೆಯೇ ಇದೆ.

೨. ಇಲ್ಲಿ ಬಳಕೆಯಾಗಿರುವ ಪಾರಿಭಾಷಿಕಶಬ್ದಗಳೂ ವಚನವ್ಯಕ್ತಿಗಳೂ 'ಗೀತಾತಾತ್ಪರ್ಯಬೋಧಿನಿ'ಯಿಂದ ಹಲವು ಕಡೆಗಳಲ್ಲಿ ಅಚ್ಚಳಿಯದೆ ಅದೇ ರೀತಿಯಲ್ಲಿ ತೆಗೆದುಕೊಂಡು ಉಪಯೋಗಿಸಿಕೊಂಡಂತೆ ತೋರುತ್ತದೆ. ಕೆಲವು ಕಡೆಗಳಲ್ಲಿ ಕಾಣುವ ಅಲ್ಪಸ್ವಲ್ಪ ಮಾರ್ಪಾಡುಗಳೂ ಛಂದಸ್ಸಿನ ದೃಷ್ಟಿಯಿಂದಾದ ಆವಶ್ಯಕತೆಯಿಂದಾದವುಗಳಾಗಿವೆ. ಇಂಥ ಹಲವು ಶಬ್ದಗಳನ್ನು ಪ್ರಸ್ಥಾನತ್ರಯಭಾಷ್ಯದಲ್ಲಿ ಎಲ್ಲಿಯೂ ಉಪಯೋಗಿಸದೆ ಇರುವ ಅರ್ಥದಲ್ಲಿ ಇಲ್ಲಿ ಪ್ರಯೋಗಿಸಿರುವದು ಕಂಡುಬರುತ್ತದೆ ; ಅಂಥ ಶಬ್ದಗಳನ್ನು ಅಕಾರಾದಿಯಾಗಿ ವಿಂಗಡಿಸಿ ಶಬ್ದಾನುಕ್ರಮಣಿಕೆಯಲ್ಲಿ ಸೇರಿಸಿ ಅರ್ಥವಿಶೇಷವನ್ನು ತಿಳಿಸಿರುತ್ತೇನೆ.

೩. ವಿವೇಕಚೂಡಾಮಣಿಯಲ್ಲಿ ಉದಾಹರಿಸಿರುವ ಅಥವಾ ಸೂಚಿಸಿರುವ ಅಮೃತಬಿಂದೂಪನಿಷತ್ತು, ಅಮೃತನಾದ, ನೃಸಿಂಹೋತ್ತರತಾಪನೀಯ, ಕೈವಲ್ಯ –ಮುಂತಾದ ಬಿಡಿ ಉಪನಿಷತ್ತುಗಳು ಶಾಂಕರಭಾಷ್ಯದಲ್ಲಿ ಎಲ್ಲಿಯೂ ಉದಾಹೃತವಾಗಿಲ್ಲ ; ಗೀತಾತಾತ್ಪರ್ಯಬೋಧಿನಿಯಲ್ಲಿ ಭಾಷ್ಯಕಾರರು

ಉದಾಹರಿಸದೆ ಇರುವ ಇಂಥ ಹಲವು ಉಪನಿಷತ್ತುಗಳನ್ನು ಪ್ರಮಾಣ ವಾಗಿ ತೆಗೆದುಕೊಂಡಿದೆ.

೮. ಸೂತಸಂಹಿತೆ, ವಾಸಿಷ್ಠರಾಮಾಯಣ, ಪರಮಾರ್ಥಸಾರ– ಈ ಗ್ರಂಥಗಳನ್ನು ಶಂಕರಾಚಾರ್ಯರು ತಮ್ಮ ಯಾವ ಭಾಷ್ಯದಲ್ಲಿಯೂ ಸೂಚಿಸಿಕೂಡ ಇರುವದಿಲ್ಲ; ಆದರೆ ವಿವೇಕಚೂಡಾಮಣಿಯಲ್ಲಿ ಸೂತ ಸಂಹಿತೆ, ಪರಮಾರ್ಥಸಾರಗಳ ಅರ್ಥವನ್ನು ಅಲ್ಲಲ್ಲಿ ತೆಗೆದುಕೊಂಡಿರುತ್ತದೆ. ಇಷ್ಟೇ ಅಲ್ಲ. ವಾಸಿಷ್ಠಸೂತಸಂಹಿತೆಗಳ ಪ್ರಭಾವಕ್ಕೆ ಒಳಗಾಗಿರುವ ಈ ಗ್ರಂಥಕರ್ತರು ಅವುಗಳ ವಿಚಾರಸರಣಿಯನ್ನೇ ಅಲ್ಲದೆ ಶೈಲಿಯನ್ನೂ ಅನುಕರಿಸುವದಕ್ಕೆ ಹೋಗಿರುವದು ಅಲ್ಲಲ್ಲಿ ಕಂಡುಬರುತ್ತದೆ. ಗೀತೆಯ ವ್ಯಾಖ್ಯಾನದಲ್ಲಿ ಇಂಥ ಗ್ರಂಥಗಳನ್ನೂ ವಚನಗಳನ್ನೂ ಅಡಿಗಡಿಗೆ ಉದಾ ಹರಿಸಿರುವ ಶಂಕರಾನಂದರೇ ವಿವೇಕಚೂಡಾಮಣಿಯ ಕರ್ತರಾಗಿರಬಹು ದೆಂಬ ತರ್ಕಕ್ಕೆ ಇದೂ ಒಂದು ಪೋಷಕಸಾಮಗ್ರಿಯಾಗಿದೆ. ಪರಿಶಿಷ್ಟ ದಲ್ಲಿರುವ ಪ್ರಮಾಣವಾಕ್ಯಗಳ ಸೂಚಿಕೆಯಿಂದ ಇದನ್ನು ಓದುಗರು ಮನಗಾಣಬಹುದಾಗಿದೆ.

೫. ಎಲ್ಲಕ್ಕೂ ಮಿಗಿಲಾಗಿ ವಿವೇಕಚೂಡಾಮಣಿಯ ವೇದಾಂತಪ್ರಕ್ರಿಯೆಯೂ ಗೀತಾತಾತ್ಪರ್ಯಬೋಧಿನಿಯ ಪ್ರಕ್ರಿಯೆಯೂ ಸ್ವಲ್ಪ ಹೆಚ್ಚುಕಡಿಮೆ ಎಲ್ಲಾ ಬಗೆಯಲ್ಲಿಯೂ ಒಂದಕ್ಕೊಂದಕ್ಕೆ ಸರಿಯಾಗಿ ಹೊಂದಿಕೊಳ್ಳುತ್ತವೆ. ಇದೇ ರೀತಿಯಲ್ಲಿ ಭಾಷ್ಯದ ಪ್ರಕ್ರಿಯೆಗೂ ಈ ಪ್ರಕರಣದ ಪ್ರಕ್ರಿಯೆಗೂ –ಇಷ್ಟು ಸ್ವರಸವಾಗಿ– ಹೊಂದುಗಡೆಯಾಗುವದು ಸಾಧ್ಯವೇ ಇಲ್ಲ.

## ವಿವೇಕಚೂಡಾಮಣಿಯ ವೇದಾಂತಪ್ರಕ್ರಿಯೆ

ಈ ಪ್ರಕರಣದಂತೆ ವೇದಾಂತೋಪದೇಶದ ಸಾರವನ್ನು ಗ್ರಂಥದ ಕೊನೆಯಲ್ಲಿ ಹಿಂಡಿಟ್ಟಿರುತ್ತೇನೆ. ಪ್ರಕರಣವನ್ನು ಬೇರೆಬೇರೆಯ ವಿಭಾಗಗಳಾಗಿ ವಿಂಗಡಿಸಿ ಅಲ್ಲಿಗಲ್ಲಿಗೆ ತಕ್ಕಂತೆ ತಲೆಬರಹಗಳನ್ನು ಕೊಟ್ಟಿರುತ್ತೇನೆ. ಗೀತಾತಾತ್ಪರ್ಯ ಬೋಧಿನಿಯಲ್ಲಿ ಶಂಕರಾನಂದರು ಚರ್ಚಿಸಿರುವ ಪ್ರಮುಖವಿಷಯಗಳನ್ನೊಳ ಗೊಂಡಿರುವ ಕೆಲವು ಗ್ರಂಥಭಾಗಗಳನ್ನು ಎರಡನೆಯ ಪರಿಶಿಷ್ಟವಾಗಿ ಸೇರಿಸಿರುವ ದಲ್ಲದೆ ವಿವೇಕಚೂಡಾಮಣಿಯ ಅಭಿಪ್ರಾಯವನ್ನು ಹೋಲಿಕೆಯಿಂದ ನಿರ್ಧರಿಸುವದಕ್ಕೆ ಅನುಕೂಲವೆಂದು ಕಂಡುಬಂದ ಗೀತಾತಾತ್ಪರ್ಯಬೋಧಿನಿಯ ಸ್ಥಾನಗಳನ್ನು ಅಧ್ಯಾಯಶ್ಲೋಕಸಂಖ್ಯೆಗಳ ರೂಪದಲ್ಲಿ ಈ ಗ್ರಂಥದ ಆಯಾ ಶ್ಲೋಕದ ಕೆಳಗೇ ಅಡಿಯಲ್ಲಿ ಟಿಪ್ಪಣಿಯಾಗಿ ಸೇರಿಸಿರುತ್ತೇನೆ. ಈ ಸಾಮಗ್ರಿ ಯನ್ನೆಲ್ಲ ಸಾವಧಾನವಾಗಿ ಉಪಯೋಗಿಸಿಕೊಳ್ಳುವ ವಾಚಕರಿಗೆ ವಿವೇಕ ಚೂಡಾಮಣಿಯೂ ಗೀತಾತಾತ್ಪರ್ಯಬೋಧಿನಿಯೂ ಒಬ್ಬರ ಕೈವಾಡವೇ

ಎಂಬುದು[1] ನಿರಾಧಾರವಾದ ಕಲ್ಪನೆಯಲ್ಲವೆಂಬುದು ನನಗೆದಟ್ಟಾಗುವಂದೆಂದು ನನ್ನ ನಂಬಿಕೆ.

ವಿವೇಕಚೂಡಾಮಣಿಗೂ ಗೀತಾತಾತ್ಪರ್ಯಬೋಧಿನಿಗೂ ಸಮಾನ ವಾಗಿರುವ ಪ್ರಕ್ರಿಯೆಯನ್ನು ಅತಿಸಂಗ್ರಹವಾಗಿ ಹೇಳಿದರೆ ಇಷ್ಟಾಗುವದು :

೧. ಅಪ್ರತಿಬದ್ಧವಾದ ಬ್ರಹ್ಮಾತ್ಮೈಕ್ಯಜ್ಞಾನವುಂಟಾದ ಹೊರತು ಮುಕ್ತಿಯೊಗುವದಿಲ್ಲ. ಮುಕ್ತಿಗೆ ನೇರಾಗಿ ಕರ್ಮಾದಿಗಳ ಉಪ ಯೋಗವಿಲ್ಲ ; ಆದ್ದರಿಂದ ಅಧಿಕಾರಿಯಾದವನು ಸರ್ವಕರ್ಮಸಂನ್ಯಾಸ ವನ್ನು ಮಾಡಿ ಸದ್ಗುರುವಿನಲ್ಲಿ ವೇದಾಂತವಿಚಾರವನ್ನು ಮಾಡಬೇಕು.

೨. ಬ್ರಹ್ಮಾತ್ಮೈಕತ್ವಜ್ಞಾನವುಂಟಾಗುವದಕ್ಕೆ ಶ್ರವಣಮನನಗಳಿಂದ ಮಹಾ ವಾಕ್ಯದ ಪದಾರ್ಥಶೋಧನವನ್ನು ಮಾಡುವದು ಅವಶ್ಯ. ಅವಸ್ಥಾ ತ್ರಯಕ್ಕೆ ಸಾಕ್ಷಿಯಾಗಿರುವ ಮತ್ತು ಪಂಚಕೋಶವಿಲಕ್ಷಣನಾಗಿರುವ ಆತ್ಮನೇ ತ್ವಂಪದಾರ್ಥ, ಅನಿರ್ವಚನೀಯವಾದ ಮಾಯೆಯ ಮೂಲಕ ಸಕಲಜಗತ್ತಿಗೂ ಕಾರಣವಾಗಿರುವ ಸಚ್ಚಿದಾನಂದಸ್ವರೂಪಬ್ರಹ್ಮವೇ ತತ್ಪದಾರ್ಥ– ಎಂದು ತತ್ತ್ವಂಪದಾರ್ಥಗಳನ್ನು ಶೋಧನೆಮಾಡಿಕೊಂಡ ಬಳಿಕ ಜಹದಜಹಲ್ಲಕ್ಷಣೆಯಿಂದ 'ತತ್ತ್ವಮಸಿ' ಮುಂತಾದ ಮಹಾವಾಕ್ಯಗಳಿಂದ ಬೋಧಿತವಾಗಿರುವ ಬ್ರಹ್ಮಾತ್ಮೈಕತ್ವವನ್ನು ಪಡೆದುಕೊಳ್ಳಬೇಕು.

೩. ವಾಕ್ಯಶ್ರವಣಮಾತ್ರದಿಂದಲೇ ಅಪರೋಕ್ಷಜ್ಞಾನವುಂಟಾಗ ಲಾರದು.[2] ವಾಕ್ಯಾರ್ಥವನ್ನು ಅರಿತುಕೊಂಡರೂ ಜ್ಞಾನಕ್ಕೆ ಪ್ರತಿಬಂಧಕ ವಾಗಿ ಅನಾದ್ಯವಿದ್ಯಾವಾಸನೆಯಿಂದ ದೇಹೇಂದ್ರಿಯಾದಿಗಳಲ್ಲಿ ನಾನು ನನ್ನದೆಂಬ ಭಾವವೂ ಅಹಂಕಾರವೇ ತಾನೆಂಬ ತಪ್ಪುತಿಳಿವಳಿಕೆಯೂ ಇದರಿಂದಾದ ವಿಷಯಚಿಂತನೆಯೂ ಇರುತ್ತವೆ. ಆದ್ದರಿಂದ ಶಮದಮಾದಿ ಗಳಿಂದೊಡಗೂಡಿ ತೀವ್ರವೈರಾಗ್ಯ ತೀವ್ರಮುಮುಕ್ಷುತೆಗಳನ್ನುಳ್ಳವನಾಗಿ

---

1. ಶಂಕರಾನಂದರ "ಗೀತಾತಾತ್ಪರ್ಯಬೋಧಿನಿ"ಯು ಅನೇಕ ಕಾರಣಗಳಿಂದ ಜಿಜ್ಞಾಸುಗಳು ಪರಿಶೀಲನೆಮಾಡತಕ್ಕ ಗ್ರಂಥವಾಗಿದೆ. ಅದನ್ನು ಸಮೂಲವಾಗಿ ಕನ್ನಡಿಸಿ ಚಿಕಿತ್ಸಾದೃಷ್ಟಿಯಿಂದ ವಿಮರ್ಶಿಸುವ ಸಂಸ್ಕರಣವೊಂದು ವೇದಾಂತವಿಚಾರದ ಇತಿಹಾಸದ ದೃಷ್ಟಿಯಿಂದ ಆತ್ಯವಶ್ಯವೆಂದು ನನ್ನ ಭಾವನೆ.

2. ಇದಕ್ಕೆ ವಿರುದ್ಧವಾಗಿ ಹೇಳಿರುವ ಉಪದೇಶದ ಉಕ್ತಿಯೂ ಗೀತಾತಾತ್ಪರ್ಯ ಬೋಧಿನಿಯಲ್ಲಿ ಕಂಡುಬರುತ್ತದೆ. ಅಪರೋಕ್ಷಜ್ಞಾನಿಯು ಸಿದ್ಧನೆಂದೂ ಸಾಧಕನೆಂದೂ ಎರಡು ವಿಧ; ಸಾಧಕನಾದವನಿಗೆ ನಿದಿಧ್ಯಾಸನವನ್ನು ವಿಧಿಸಿದೆ–ಎಂಬದು ಶಂ. ಗೀ. ೩.೧೭ರಲ್ಲಿ ಹೇಳಿದೆ. ಅವನಿಗೆ ಲೋಕಸಂಗ್ರಹಾರ್ಥಕ್ರಮದಲ್ಲಿ ಅಧಿಕಾರವಿಲ್ಲವೆಂದೂ ಪರೋಕ್ಷಜ್ಞಾನಿಗೆ ಅದರಲ್ಲಿ ಅಧಿಕಾರವೆಂದೂ ಒಂದು ಅಭಿಪ್ರಾಯವನ್ನು ಅಲ್ಲಿ ವ್ಯಕ್ತಪಡಿಸಿದೆ.

ಆತ್ಮಸ್ವರೂಪವನ್ನೇ ನಿದಿಧ್ಯಾಸನ(ಧ್ಯಾನ)ಮಾಡುತ್ತಿದ್ದು ಭ್ರಮರಕೀಟ ನ್ಯಾಯದಿಂದ ಬ್ರಹ್ಮಸ್ವರೂಪವನ್ನು ಪಡೆದು ಅಲ್ಲಿಯೇ ನೆಲೆನಿಲ್ಲುವದೆಂಬ ನಿರ್ವಿಕಲ್ಪಸಮಾಧಿಯಿಂದ ಬ್ರಹ್ಮಾತ್ಮೈಕ್ಯಜ್ಞಾನವನ್ನು ಪೂರ್ಣವಾಗಿ ಪಡೆದುಕೊಳ್ಳಬೇಕು. ಈ ರೀತಿಯಲ್ಲಿ ಸಮಾಧಿಯ ಮೂಲಕವಾಗಿ ಮನೋಲಯ, ಅಹಂಕಾರನಾಶ, ವಾಸನಾತ್ಯಾಗ – ಇವನ್ನು ಸಂಪೂರ್ಣ ವಾಗಿ ಸಾಧಿಸಿದವನೇ ಜ್ಞಾನವು ಯಾವ ಪ್ರತಿಬಂಧವೂ ಇಲ್ಲದೆ ದೊರೆತು, ದೃಢವಾಗಿ, ಪಕ್ವವಾಗಿ, ಸರ್ವಾತ್ಮಭಾವನೆಂಬ ಫಲವನ್ನು ಕೊಡುವದು.

೪. ಅಪರೋಕ್ಷಜ್ಞಾನಿಗೆ ಶರೀರಾಭಿಮಾನವಿರುವದಿಲ್ಲ. ಅವನು ಯಾವಾಗಲೂ ಆತ್ಮಾನಂದವನ್ನನುಭವಿಸುತ್ತಾ ಬ್ರಹ್ಮದಲ್ಲಿಯೇ ಉಪರತನಾಗಿರು ತ್ತಾನೆ. ಜ್ಞಾನವು ದೃಢವಾಗಿರುವದರಿಂದ 'ಸ್ಥಿತಪ್ರಜ್ಞ'ನೆಂದೂ ಬದು ಕಿರುವಾಗಲೇ ದೃಶ್ಯಬಂಧದಿಂದ ಸಂಪೂರ್ಣವಾಗಿ ಬಿಡುಗಡೆಹೊಂದಿರು ವದರಿಂದ 'ಜೀವನ್ಮುಕ್ತ'ನೆಂದೂ ಅವನಿಗೆ ಹೆಸರು. ಅವನಿಗೆ ಸಂಚಿತ ಕರ್ಮವು ನಾಶವಾಗಿಹೋಗಿರುತ್ತದೆ; ಆಗಾಮಿಕರ್ಮದ ಲೇಪವಿರು ವದಿಲ್ಲ; ಆಭಾಸರೂಪದಿಂದ ತೋರುವ ದೇಹಕ್ಕೆ ಕಾರಣವಾಗಿ ಪ್ರಾರಬ್ಧ ಕರ್ಮವು ಇರುವದೆಂದು ಬಾಹ್ಯದೃಷ್ಟಿಯಿಂದ ಹೇಳಬೇಕಾದರೂ ಅವನು ಯಾವಾಗಲೂ ಬ್ರಹ್ಮರೂಪದಿಂದಲೇ ಇರುತ್ತಾನಾದ್ದರಿಂದ ಅವನ ದೃಷ್ಟಿ ಯಿಂದ ದೇಹವೂ ಇಲ್ಲ, ಪ್ರಾರಬ್ಧವೂ ಇಲ್ಲ. ಹೀಗೆನ್ನುವದಕ್ಕೆ ಶಾಸ್ತ್ರ, ಗುರೂಕ್ತಿ, ತನ್ನ ಅನುಭವ– ಈ ಮೂರೂ ಪ್ರಮಾಣಗಳು.

೫. ಈ ರೀತಿಯಲ್ಲಿ ಬ್ರಹ್ಮಸ್ವರೂಪದಲ್ಲಿ ನಿಂತಾತನು ಬ್ರಹ್ಮಾನಂದವನ್ನನು ಭವಿಸುತ್ತಾ ಬಾಲೋನ್ಮತ್ತಪಿಶಾಚವಂತೆ ವ್ಯವಹರಿಸುತ್ತಾ, ಪರೇಚ್ಛೆಯಿಂದ ಬಂದೊದಗಿದ ವಿಷಯಗಳನ್ನು ಅನುಭವಿಸುತ್ತಲೂ ಅಧಿಕಾರಿಗಳಾದ ಶಿಷ್ಯರಿಗೆ ತತ್ತ್ವವನ್ನುಪದೇಶಿಸುತ್ತಲೂ ಕಾಲವನ್ನು ಕಳೆದು ಉಪಾಧಿ ಯಾದ ಶರೀರವು ಬಿದ್ದಬಳಿಕ ಒಡೆದ ಗಡಿಗೆಯೊಳಗಿನ ಆಕಾಶವು ಮಹಾ ಕಾಶದಲ್ಲಿ ಸೇರುವಂತೆ ಬ್ರಹ್ಮದಲ್ಲಿಯೇ ಬೆರೆತು 'ವಿದೇಹಮುಕ್ತಿ' ಯನ್ನು ಹೊಂದುತ್ತಾನೆ. ಅವನು ಆ ಬಳಿಕ ಎಂದಿಗೂ ಸಂಸಾರಕ್ಕೆ ಮರಳಿ ಬರುವದಿಲ್ಲ.

## ಶಾಂಕರಪ್ರಕ್ರಿಯೆಗೂ ಈ ಪ್ರಕ್ರಿಯೆಗೂ ತಾರತಮ್ಯ

ಈಗ ಈ ಶಂಕರಾನಂದರ ಪ್ರಕ್ರಿಯೆಯನ್ನು ಭಾಷ್ಯಕಾರರ ಪ್ರಕ್ರಿಯೆಗೆ ಹೋಲಿಸಿ ನೋಡಬಹುದಾಗಿರುತ್ತದೆ. ಈ ಹೋಲಿಕೆಯಿಂದ ನಮಗೆ ಮುಖ್ಯ ವಾಗಿ ಇಷ್ಟು ಭೇದಗಳು ಕಂಡುಬರುತ್ತವೆ :

೨. ಸ್ಥೂಲಶರೀರಸೂಕ್ಷ್ಮಶರೀರಗಳೇ ಅಲ್ಲದೆ ಅವ್ಯಕ್ತವೆಂಬ 'ಕಾರಣಶರೀರ'ವೊಂದು ಇರುವದೆಂದೂ (೧೧೯, ೧೨೦)[1] ಅದೇ ತ್ರಿಗುಣಾತ್ಮಕವಾದ ಅನಿರ್ವಚನೀಯವಾದ ಪರಮೇಶ್ವರಾಶ್ರಯವಾದ ಮಾಯಾಶಕ್ತಿಯೆಂದೂ (೧೦೭), ಅದು 'ಸುಷುಪ್ತಿ'ಯಲ್ಲಿದ್ದುಕೊಂಡಿರುವದೆಂದೂ (೧೨೦), ಅದಕ್ಕೆ ಆವರಣವಿಕ್ಷೇಪರೂಪವಾದ ಶಕ್ತಿಗಳೆರಡಿವೆಯೆಂದೂ (೧೧೦, ೧೧೩)– ಹೇಳಿರುವದು ಈ ಪ್ರಕ್ರಿಯೆಗೆ ಅಸಾಧಾರಣವಾದದ್ದು ಇದು ಶಾಂಕರಭಾಷ್ಯದಲ್ಲಿ ಎಲ್ಲಿಯೂ ಕಂಡುಬರುವದಿಲ್ಲ[2]

೩. ಬ್ರಹ್ಮವು ಜಗತ್ಕಾರಣವೆಂದೂ ಸಚ್ಚಿದಾನಂದರೂಪವೆಂದೂ ಶ್ರುತಿಯ ಆಧಾರದಿಂದ ತಿಳಿಸಿ 'ತತ್ತ್ವಮಸಿ' ಎಂಬ ಮಹಾವಾಕ್ಯದಿಂದ ಜ್ಞಾನವುಂಟಾದಮೇಲೂ ವಾಸನಾತ್ಯಾಗವೇ ಮುಂತಾದ ಕರ್ತವ್ಯವು ಉಳಿದಿರುತ್ತದೆ (೩೬೫) ಎಂದಿರುವದು ಮಂಡಮಿಶ್ರರೇ ಮುಂತಾದವರ ಪ್ರಕ್ರಿಯೆಗೆ ಹತ್ತಿರವಾಗಿರುತ್ತದೆ. ಇದಂತೂ ಶಾಂಕರಭಾಷ್ಯದಲ್ಲಿಯೇ ಇಲ್ಲ.

೪. ಅಪರೋಕ್ಷಜ್ಞಾನವು ನಿರ್ವಿಕಲ್ಪಕಸಮಾಧಿಯಲ್ಲಿಯೇ ಯಾವ ಪ್ರತಿಬಂಧಕವೂ ಇಲ್ಲದೆ ಉಂಟಾಗುವದೆಂದಿರುವದು (೪೫೦-೪೬೪) ಶಾಂಕರಭಾಷ್ಯದಲ್ಲಿ ಎಲ್ಲಿಯೂ ಕಾಣುವದಿಲ್ಲ. ಇದೊಂದು ಬಗೆಯ ಯೋಗವನ್ನು ಅಪೇಕ್ಷಿಸುವ ಪ್ರಕ್ರಿಯೆ. ಒಂದಾನೊಂದು ವಿಶೇಷಾನುಭವವುಳ್ಳವರಿಗೆ ಮಾತ್ರವೇ ಅಪ್ರತಿಬದ್ಧಜ್ಞಾನವುಂಟಾಗುವದೆಂಬ ಈ ವಾದವು ವಾಕ್ಯಜ್ಞಾನದಿಂದಲೇ ಜಿಜ್ಞಾಸುವು ಕೃತಕೃತ್ಯನಾಗಬಹುದೆಂಬ ಶಾಂಕರ ಸಿದ್ಧಾಂತಕ್ಕೆ ವಿರುದ್ಧವೇ ಆಗಿರುತ್ತದೆ.

೫. ಬ್ರಹ್ಮವೊಂದೇ ಸತ್ಯವು, ಪ್ರಪಂಚವು ಮಿಥ್ಯೆ–ಎಂಬುದನ್ನು ತೋರಿಸುವ ಶಾಂಕರಭಾಷ್ಯದ ಅವಸ್ಥಾತ್ರಯಪ್ರಕ್ರಿಯೆಯು ಇಲ್ಲಿಲ್ಲ. ಸುಷುಪ್ತಿಯಲ್ಲಿ ಯಾವ ಪ್ರಪಂಚವೂ ಕಾಣುವದಿಲ್ಲವೆಂದು ಒಂದುಕಡೆ (೨೩೩) ಹೇಳಿದ್ದರೂ ಅಲ್ಲಿ ಅವ್ಯಕ್ತವೆಂಬ ಕಾರಣಶರೀರವು ಇರುವದೆಂದು ಮತ್ತೊಂದು ಕಡೆ (೧೨೦) ಹೇಳಿರುವದು ಪರಸ್ಪರವಿರುದ್ಧೋಕ್ತಿಯಾಗಿರುವದಲ್ಲದೆ ಪ್ರಪಂಚಮಿಥ್ಯಾತ್ವವಾದಕ್ಕೆ ಅಡ್ಡಿಯೂ ಆಗಿರುತ್ತದೆ.

೬. ನಿರ್ವಿಕಲ್ಪಸಮಾಧಿಯನ್ನು ಪಡೆದವರು ಪುನರಾವೃತ್ತಿರಹಿತವಾದ ವಿದೇಹಕೈವಲ್ಯವನ್ನು ಪಡೆಯುವರೆಂಬ ವಾದವು ಶಾಂಕರಪ್ರಕ್ರಿಯೆಯಲ್ಲಿಲ್ಲ. ಜ್ಞಾನದಿಂದಲೇ 'ಸದ್ಯೋಮುಕ್ತಿ'ಯಾಗುವದೆಂದು ಭಾಷ್ಯಗಳಲ್ಲಿ

1. ಹೀಗೆ ಡೊಂಕನೆಯ ಕಂಸದಲ್ಲಿ ಹಾಕಿರುವವು ಈ ಪ್ರಕರಣದ ಶ್ಲೋಕಸಂಖ್ಯೆಗಳು

2. ಅವ್ಯಕ್ತವು–ರಜ್ಜುಜ್ಞಾನದಿಂದ ಸರ್ಪಭ್ರಮೆಯು ನಾಶವಾಗುವಂತೆ–ಬ್ರಹ್ಮಜ್ಞಾನದಿಂದ ನಾಶವಾಗುವದೆಂದು ೧೧೦ನೆಯ ಶ್ಲೋಕದಲ್ಲಿ ಬರೆದಿದೆ ; ಇದರಿಂದ ಮಾಯೆಯು ಅವಿದ್ಯಾಕಲ್ಪಿತವೆಂಬ ಶಾಂಕರಪ್ರಕ್ರಿಯೆಯನ್ನು ಪ್ರಕಾರಾಂತರದಿಂದ ಒಪ್ಪಿದಂತೆ ಆಗಿರುತ್ತದೆ

ಹೇಳಿದೆಯೇ ಹೊರತು ವಿವೇಕಚೂಡಾಮಣಿ, ತಾತ್ಪರ್ಯಬೋಧಿನಿಗಳಂತೆ ವಿದೇಹಮುಕ್ತಿಯನ್ನು[1] ಹೊಗಳಿ ಅದಕ್ಕಾಗಿ ಸಮಾಧಿಯನ್ನು ಭಾಷ್ಯಪ್ರಸ್ಥಾನದಲ್ಲಿ ಎಲ್ಲಿಯೂ ಉಪದೇಶಿಸುವದಿಲ್ಲ. ಸಮಾಧಿಯಲ್ಲಿ ಒಂದು ಸಲ ಲೀನವಾದ ವೃತ್ತಿಯು ಮತ್ತೆ ಎದ್ದುಕೊಳ್ಳದಿರುವದೇ ಉಪರತಿಯ ಪರಮಾವಧಿ ಎಂದು (೪೨೨) ವಿವೇಕಚೂಡಾಮಣಿಯಲ್ಲಿ ಹೇಳಿದೆ. ಜ್ಞಾನಸಂಸಿದ್ಧನಾದವನು ಏಳನೆಯ ಭೂಮಿಕೆಯಲ್ಲಿರುವದರಿಂದ ಆವನು ಉಪದೇಶಮಾಡಲಾರನೆಂದು (ಶಂ.ಗೀ. ೧೮.೬೮) ತಾತ್ಪರ್ಯಬೋಧಿನಿಯಲ್ಲಿ ಒಪ್ಪಿರುತ್ತದೆ. ಆದ್ದರಿಂದ ಅದ್ವೈತದ ಪರಮಾನುಭವವನ್ನು ಉಪದೇಶಮಾಡುವ ಗುರುವೇ ಇಲ್ಲ – ಎಂಬವರ ಆಕ್ಷೇಪಕ್ಕೆ ಈ ವಾದದಲ್ಲಿ ಎಡೆಯುಂಟಾಗಿರುತ್ತದೆ. ನಿದಿಧ್ಯಾಸನವು ಬ್ರಹ್ಮಜ್ಞಾನಕ್ಕೆ ಕಾರಣವೇ ಹೊರತು ಜ್ಞಾನವಾದಮೇಲೆ ಮಾಡತಕ್ಕ ಸಾಧನವಲ್ಲವೆಂಬುದು ಶಾಂಕರಪ್ರಕ್ರಿಯೆ ; ಅಲ್ಲಿ ಜ್ಞಾನನಿಷ್ಠೆಯೆಂದರೆ ಅದ್ವೈತಜ್ಞಾನದ ನಿಲುಗಡೆಯೇ ಹೊರತು ಇಲ್ಲಿನಂತೆ ಅನುಷ್ಠೇಯವಾದ ಸಾಧನವಲ್ಲ, ಸಮಾಧಿಗೆ ಅಂಗವೂ ಅಲ್ಲ

## ಗ್ರಂಥದಿಂದಾಗುವ ಪ್ರಯೋಜನ

ಗ್ರಂಥವು ಶಂಕರಾಚಾರ್ಯರ ಕೃತಿಯೆಂದು ನಂಬುವದಕ್ಕೆ ಹೀಗೆ ಅಡ್ಡಿಗಳಿದ್ದಮಾತ್ರದಿಂದ ಅದರ ಯೋಗ್ಯತೆಯೇನೂ ಕುಂದಿಲ್ಲವೆಂಬುದನ್ನು ವಾಚಕರು ನೆನಪಿನಲ್ಲಿಡಬೇಕು. ನಾವು ಮೊದಲೇ ಹೇಳಿರುವಂತೆ ವಿವೇಕಚೂಡಾಮಣಿಯು ಸರ್ವತ್ರ ಜನಾನುರಾಗವನ್ನು ಸಂಪಾದಿಸಿಕೊಂಡಿರುವದೇ ಅದರ ಮೇಲ್ಮೆಗೆ ಬೇಕಾದಷ್ಟು ಸಾಕ್ಷಿಯಾಗಿರುತ್ತದೆ. ಇಲ್ಲಿ ಹೇಳಿರುವ ಆತ್ಮಾನಾತ್ಮವಿವೇಚನೆಯು ಉತ್ಕೃಷ್ಟವಾದ ಯುಕ್ತಿಗಳ ಬೆಂಬಲವುಳ್ಳದಾಗಿದೆ. ಸುಷುಪ್ತಿಯಲ್ಲಿ ಯಾವ ಭೇದವೂ ಕಾಣುವದಿಲ್ಲವೆಂತಲೂ ಅಲ್ಲಿ ಆತ್ಮನು ಸುಖಸ್ವರೂಪನಾಗಿರುತ್ತಾನೆಂತಲೂ ಹೇಳಿರುವದಕ್ಕೇ ಬೆಲೆಯನ್ನು ಕೊಟ್ಟು ಕಾರಣಶರೀರವಾದವನ್ನು ಅಸಡ್ಡೆಮಾಡಿದರೆ ಕೂಡಲೆ ಮಂಗಳಕರವಾದ ವೇದಾಂತಸಿದ್ಧಾಂತವೇ ಕೈವಶವಾಗುತ್ತದೆ. ಆತ್ಮವಿಷಯಕವಾಕ್ಯಶ್ರವಣವನ್ನು ಮಾಡಿದಮಾತ್ರದಿಂದಲೇ ತತ್ತ್ವಜ್ಞಾನವನ್ನು ಪಡೆದುಕೊಳ್ಳಬಹುದಾದ ಬಹುಸ್ವಲ್ಪಸಂಖ್ಯೆಯ ಉತ್ತಮಾಧಿಕಾರಿಗಳನ್ನು ಬಿಟ್ಟರೆ

---

1 ವಿದೇಹಮುಕ್ತಿಗೆ ಸಮಾಧಿಯು ಸಾಧನವೆಂಬುದು ತಾತ್ಪರ್ಯಬೋಧಿನಿಯಲ್ಲಿ ಪಲ್ಲವಿಯಂತೆ ಮತ್ತೆ ಮತ್ತೆ ಬರುತ್ತಾ ಇರುತ್ತದೆ. ನಿದಿಧ್ಯಾಸನವೆಂಬುದು ಸಮಾಧಿಗೆ ಅಂಗವೆಂದೂ ಸಮಾಧಿಯಿಂದಲೇ ಸಾಕ್ಷಾತ್ಕಾರಜ್ಞಾನವೆಂದೂ ಹೇಳುವ 'ವೇದಾಂತಸಾರ'ವೇ ಮುಂತಾದ ವೇದಾಂತಪ್ರಕರಣಗಳು ಈಗ ಎಲ್ಲೆಲ್ಲಿಯೂ ಪ್ರಚಾರದಲ್ಲಿರುತ್ತವೆ–ಎಂಬುದು ವಾಚಕರಿಗೆ ಹೊಸ ಸುದ್ದಿಯೇನೂ ಅಲ್ಲ.

ಮಿಕ್ಕವರನೇಕರು ಧ್ಯಾನಕ್ರಮದಿಂದ ದೃಶ್ಯವಿಲಯವನ್ನು ಮಾಡಿಕೊಂಡು ಆತ್ಮಾನಂದವನ್ನು ಸವಿಯುವದಕ್ಕೆ ಇಲ್ಲಿ ಹೇಳಿರುವ ಸಾಧನಕ್ರಮವನ್ನು ಉಪಯೋಗಿಸಿಕೊಳ್ಳಬಹುದಾಗಿದೆ. ವಾಕ್ಯಾರ್ಥಜ್ಞಾನವು ಚೆನ್ನಾಗಿ ಅಳವಡುವದಕ್ಕೆ ಇಲ್ಲಿ ಹೇಳಿರುವ ಅಹಂಕಾರತ್ಯಾಗ, ವಾಸನಾತ್ಯಾಗ–ಮುಂತಾದ ಸಾಧನೆಗಳನ್ನು ಮುಮುಕ್ಷುಗಳು ಉಪಯೋಗಿಸಿಕೊಳ್ಳಬಹುದಾಗಿದೆ. ಹೀಗೆ ಈ ಚಿಕ್ಕ ಪ್ರಕರಣದಲ್ಲಿ ಮುಮುಕ್ಷುಗಳಿಗೆ ಲಾಭದಾಯಕವಾದ ಅನೇಕ ವಿಚಾರಗಳು ದೊರೆಯುತ್ತಿವೆ.

## ಈ ಸಂಸ್ಕರಣದ ವಿಶೇಷಗಳು

ಇಂಥ ಗ್ರಂಥವು ಮಿಕ್ಕ ದೇಶಭಾಷೆಗಳಲ್ಲಿರುವಂತೆ ಕನ್ನಡದಲ್ಲಿಯೂ ಇರಬೇಕಾದದ್ದು ಆತ್ಯವಶ್ಯವಷ್ಟೆ. ಆದರೂ ಈ ಭಾಷೆಯಲ್ಲಿ ಇದನ್ನು ಸರಿಯಾಗಿ ಶುದ್ಧಪಾಠಗಳಿಂದೊಡಗೂಡಿ ಓದುಗರಿಗೆ ಬೇಕಾದ ಸೌಕರ್ಯಗಳನ್ನು ಒದಗಿಸಿಕೊಡುವ ಪ್ರಯತ್ನವು ಈವರೆಗೆ ನಡೆದಿರುವದಿಲ್ಲ. ಈ ಮುಂಚೆ ಆಗಿದ್ದ ಒಂದೆರಡು ಅನುವಾದಗಳು ಈಗ ಸುಲಭವಾಗಿ ದೊರೆಯುವದಿಲ್ಲ; ಒಂದುವೇಳೆ ಅವುಗಳ ಪುನರ್ಮುದ್ರಣವಾದರೂ ಈಗಿನ ಜಿಜ್ಞಾಸುಗಳಿಗೆ ಬೇಕಾದ ಎಲ್ಲಾ ಸೌಕರ್ಯಗಳೂ ಅವುಗಳಲ್ಲಿರುವದಿಲ್ಲ. ಈ ಕೊರತೆಯನ್ನು ಹೋಗಲಾಡಿಸಿ ಒಂದು ಶುದ್ಧಸಂಸ್ಕರಣವನ್ನು ಹೊರಕ್ಕೆ ತರಬೇಕೆಂದು ಅನೇಕರು ಬಯಸಿದಂತೆ ಈ ಗ್ರಂಥವನ್ನು ಈಗಿನ ರೂಪದಲ್ಲಿ ಬೆಳಕಿಗೆ ಹಿಡಿದಿರುತ್ತೇನೆ. (೧) ಗ್ರಂಥವನ್ನು ಹತ್ತು ಖಂಡಗಳಾಗಿ ಒಡೆದು ಖಂಡಗಳ ಪ್ರಭಾಗಗಳನ್ನು ವಿಂಗಡಿಸಿ ತಕ್ಕಂತೆ ತಲೆಬರಹಗಳನ್ನು ಜೋಡಿಸಿರುವದು ; (೨) ಶ್ಲೋಕಸಂಖ್ಯೆಯ ಅನುಕ್ರಮವನ್ನು ಅರ್ಥಕ್ಕನುಗುಣವಾಗಿ ಮಾರ್ಪಡಿಸಿರುವದು; (೩) ಶ್ಲೋಕಾರ್ಥವನ್ನು ಚೆನ್ನಾಗಿ ಮನದಟ್ಟುಮಾಡಿಕೊಳ್ಳುವದಕ್ಕೆ ಅನುಕೂಲವಾಗುವಂತೆ ಅಡಿಟಿಪ್ಪಣಿಯನ್ನು ಬರೆದು ಸಮಾನಾರ್ಥಕವಾದ ಶಂಕರಾನಂದರ ಗೀತಾತಾತ್ಪರ್ಯಬೋಧಿನಿಯ ಭಾಗಗಳನ್ನು ಗೀತೆಯ ಅಧ್ಯಾಯಶ್ಲೋಕಗಳ ಪರಾಮರ್ಶಸಮೇತ ಸೂಚಿಸಿರುವದು ; (೪) ಗ್ರಂಥದ ಸಾರವನ್ನು ಸ್ವಲ್ಪದರಲ್ಲಿ ತಿಳಿಸಿಕೊಟ್ಟಿರುವದು ; (೫) ಗ್ರಂಥದ ಕೊನೆಯಲ್ಲಿ ಶ್ಲೋಕಗಳ ಅನುಕ್ರಮಣಿಕೆಯನ್ನು ಕೊಟ್ಟಿರುವದು ; (೬) ಪ್ರಮಾಣವಾಕ್ಯಗಳ ಸೂಚಿಕೆ, ತಾತ್ಪರ್ಯಬೋಧಿನಿಯಿಂದ ಆರಿಸಿದ ಕೆಲವು ಭಾಗಗಳು, ಉಪನಿಷದ್ವಾಕ್ಯಗಳು, ಶಬ್ದಗಳ ಅಕ್ಷರಾನುಕ್ರಮಣಿಕೆ ಇವುಗಳನ್ನೊಳಗೊಂಡ ಪರಿಶಿಷ್ಟವನ್ನು ಜೋಡಿಸಿರುವದು– ಇವಿಷ್ಟೂ ಈ ಸಂಸ್ಕರಣದ ವಿಶೇಷಗಳಾಗಿವೆ.

ಈ ನನ್ನ ಅಲ್ಪಪ್ರಯತ್ನವು ವೇದಾಂತಜಿಜ್ಞಾಸುಗಳಿಗೂ ಗ್ರಂಥವಿಮರ್ಶಕರಿಗೂ ಸ್ವಲ್ಪವಾದರೂ ಪ್ರಯೋಜನಕಾರಿಯಾದರೆ ನಾನು ಧನ್ಯನು.

ಅನುವಾದಕ.

# ವಿಷಯಗಳ ಪರಿವಿಡಿ

ವಿಶೇಷ : ಇಲ್ಲಿ ಕಂಸಗಳಲ್ಲಿ ಹಾಕಿರುವದು ಶ್ಲೋಕಗಳ ಸಂಖ್ಯೆ.

## ೯. ಆತ್ಮಸಾಕ್ಷಾತ್ಕಾರದ ಫಲ



## ೧೦. ಪ್ರಕರಣದ ಉಪಸಂಹಾರ



## ಪರಿಶಿಷ್ಟ

# ಸಂಕೇತಗಳ ವಿವರಣೆ

| ಸಂಕೇತ | ವಿವರಣೆ |
|---|---|
| ಅ. | ಅಷ್ಟೇಕರ್ ಕಂಪೆನಿಯ ಮುದ್ರಿತಪುಸ್ತಕದ ಪಾಠ |
| ಅ. ನಾ. | ಅಮೃತನಾದೋಪನಿಷತ್ತು |
| ಅ. ಬಿಂ. | ಅಮೃತಬಿಂದೂಪನಿಷತ್ತು |
| ಆ. ಗೀ. | ಆತ್ಮಗೀತೆ |
| ಈ. | ಈಶಾವಾಸ್ಯೋಪನಿಷತ್ತು |
| ಕ | ಕಠೋಪನಿಷತ್ತು |
| ಕೇ. | ಕೇನೋಪನಿಷತ್ತು |
| ಕೈ. | ಕೈವಲ್ಯೋಪನಿಷತ್ತು |
| ಗೀ. | ಭಗವದ್ಗೀತೆ |
| ಗೋ॥ | ಗೋರಖಪುರದ ಗೀತಾಪ್ರೆಸ್ ಮುದ್ರಿತಪುಸ್ತಕದ ಪಾಠ |
| ಗೌ. ಕಾ. | ಗೌಡಪಾದೀಯ ಮಾಂಡೂಕ್ಯಕಾರಿಕೆಗಳು |
| ಛಾಂ. | ಛಾಂದೋಗ್ಯೋಪನಿಷತ್ತು |
| ಜಾ. | ಜಾಬಾಲೋಪನಿಷತ್ತು |
| ತೈ. | ತೈತ್ತಿರೀಯೋಪನಿಷತ್ತು |
| ತೈ. ನಾ. | ತೈತ್ತಿರೀಯ, ನಾರಾಯಣಪನ್ನ |
| ತೈ. ಭಾ. | ತೈತ್ತಿರೀಯೋಪನಿಷದ್ಭಾಷ್ಯ, ಶಂಕರಾಚಾರ್ಯವಿರಚಿತ |
| ನಾ. ಪರಿ. | ನಾರದಪರಿವ್ರಾಜಕೋಪನಿಷತ್ತು |
| ನಾರಾ. | ನಾರಾಯಣೋಪನಿಷತ್ತು |
| ನಿ॥ | ನಿರ್ಣಯಸಾಗರ ಪ್ರೆಸ್ ಮುದ್ರಿತಪುಸ್ತಕದ ಪಾಠ |
| ನೃ. ಉ. ತಾ. | ನೃಸಿಂಹ ಉತ್ತರತಾಪಿನೀ ಉಪನಿಷತ್ತು |
| ಪ. ಸಾ. | ಪರಮಾರ್ಥಸಾರ |
| ಪ್ರ. | ಪ್ರಶ್ನೋಪನಿಷತ್ತು |
| ಪಾ॥ | ಪಾಠಾಂತರ |
| ಪಂ. ದ. | ಪಂಚದಶೀ |
| ಬೃ. | ಬೃಹದಾರಣ್ಯಕೋಪನಿಷತ್ತು |
| ಬೃ. ವಾ. | ಬೃಹದಾರಣ್ಯಕಭಾಷ್ಯವಾರ್ತಿಕ, ಸುರೇಶ್ವರಾಚಾರ್ಯವಿರಚಿತ |
| ಬೊಂ. | ಬೊಂಬಾಯಿ ಪುಸ್ತಕದ ಪಾಠ |
| ಭಾಗ. | ಶ್ರೀಮದ್ಭಾಗವತಪುರಾಣ |

ಮಹಾಭಾ. ಸನತ್ಸು. ಮಹಾಭಾರತ ಸನತ್ಸುಜಾತೀಯ ಪರ್ವ

ಮಾಂ. ಕಾ. ಮಾಂಡೂಕ್ಯಕಾರಿಕೆಗಳು

ಮಾಂ. ಕಾ. ಭಾ. ಮಾಂಡೂಕ್ಯಕಾರಿಕಾಭಾಷ್ಯ, ಶಂಕರಾಚಾರ್ಯವಿರಚಿತ

ಮುಂ. ಮುಂಡಕೋಪನಿಷತ್ತು

ಮೈ. ಉ. ಮೈತ್ರಾಯಣ್ಯುಪನಿಷತ್ತು

ಮೈ. ಮೈಸೂರು ಓರಿಯಂಟಲ್ ಲೈಬ್ರರಿ ಪುಸ್ತಕದ ಪಾಠ

ಯೋ. ವಾ. ಉ. ಯೋಗವಾಸಿಷ್ಠ, ಉತ್ಪತ್ತಿಪ್ರಕರಣ

ಯೋ. ವಾ. ಉಪ. ಯೋಗವಾಸಿಷ್ಠ, ಉಪಶಮಪ್ರಕರಣ

ಯೋ. ವಾ. ನಿ. ಪೂ. ಯೋಗವಾಸಿಷ್ಠ, ನಿರ್ವಾಣಪ್ರಕರಣ, ಪೂರ್ವಾರ್ಧ

ಯೋ. ವಾ. ಮು. ಯೋಗವಾಸಿಷ್ಠ, ಮುಮುಕ್ಷುವ್ಯವಹಾರಪ್ರಕರಣ

ಯೋ. ವಾ. ಸ್ಥಿತಿ ಯೋಗವಾಸಿಷ್ಠ, ಸ್ಥಿತಿಪ್ರಕರಣ

ವಾ|| ಶ್ರೀರಂಗದ ವಾಣೀವಿಲಾಸ ಪ್ರೆಸ್ ಪುಸ್ತಕದ ಪಾಠ

ವಿ. ಚೂ. ವಿವೇಕಚೂಡಾಮಣಿ

ಶ್ವೇ. ಶ್ವೇತಾಶ್ವತರೋಪನಿಷತ್ತು

ಶಂ. ಗೀ. ಶಂಕರಾನಂದರ ಗೀತಾತಾತ್ಪರ್ಯಬೋಧಿನೀವ್ಯಾಖ್ಯಾನ

ಶಂ|| ಮಾಂ|| ಶಂಕರಾಚಾರ್ಯರ ಮಾಂಡೂಕ್ಯೋಪನಿಷದ್ಭಾಷ್ಯ

ಸೂ. ಭಾ. ಸೂತ್ರಭಾಷ್ಯ, ಶಂಕರಾಚಾರ್ಯವಿರಚಿತ

ಸೂ. ಸಂ. ಸೂತಸಂಹಿತೆ

|| ಓಂ ||

# ವಿವೇಕಚೂಡಾಮಣಿ

---

## ೧. ಅನುಬಂಧಚತುಷ್ಟಯ

### ಮಂಗಲಾಚರಣೆ

ಸರ್ವವೇದಾನ್ತಸಿದ್ಧಾನ್ತಗೋಚರಂ ತಮಗೋಚರಮ್ ।
ಗೋವಿನ್ದಂ ಪರಮಾನನ್ದಂ ಸದ್ಗುರುಂ ಪ್ರಣತೋಽಸ್ಮ್ಯಹಮ್ ॥೧॥

೧. ಅವಿಷಯನಾದರೂ ಸರ್ವವೇದಾಂತಗಳ ಸಿದ್ಧಾಂತಕ್ಕೆ ವಿಷಯನಾಗಿರುವ ಪರಮಾನಂದರೂಪನಾದ ಗೋವಿಂದನೆಂಬ[1] ಸದ್ಗುರುವನ್ನು ನಾನು ನಮಸ್ಕರಿಸುತ್ತೇನೆ.

### ಮುಕ್ತಿಯ ದೌರ್ಲಭ್ಯ

ಜನ್ತೂನಾಂ ನರಜನ್ಮ ದುರ್ಲಭಮತಃ ಪುಂಸ್ತ್ವಂ ತತೋ ವಿಪ್ರತಾ
ತಸ್ಮಾದ್ವೈದಿಕಧರ್ಮಮಾರ್ಗಪರತಾ ವಿದ್ವತ್ತ್ವಮಸ್ಮಾತ್ ಪರಮ್ ।
ಆತ್ಮಾನಾತ್ಮವಿವೇಚನಂ ಸ್ವನುಭವೋ ಬ್ರಹ್ಮಾತ್ಮನಾ ಸಂಸ್ಥಿತಿ-
ರ್ಮುಕ್ತಿರ್ನೋ ಶತಕೋಟಿಜನ್ಮಸುಕೃತೈಃ ಪುಣ್ಯೈರ್ವಿನಾ ಲಭ್ಯತೇ ॥

೨. ಜೀವರಿಗೆ ಮನುಷ್ಯಜನ್ಮವು ದುರ್ಲಭವು; ಅದಕ್ಕಿಂತಲೂ ಗಂಡಸಾಗಿ (ಹುಟ್ಟುವದು ಕಷ್ಟಸಾಧ್ಯ) ; ಅದಕ್ಕಿಂತಲೂ ವಿಪ್ರತ್ವವು (ದುರ್ಲಭವು) ; ಅದಕ್ಕಿಂತಲೂ ವೈದಿಕಮಾರ್ಗದಲ್ಲಿ ತತ್ಪರನಾಗಿರುವದು (ದುರ್ಲಭವು) ; ಅದಕ್ಕಿಂತಲೂ ವಿದ್ವಾಂಸನಾಗಿರುವದು (ದುರ್ಲಭವು). (ಇಷ್ಟೆಲ್ಲ ಆದರೂ) ಆತ್ಮಾನಾತ್ಮಗಳನ್ನು ವಿಂಗಡಿಸಿಕೊಳ್ಳುವದು, ಸರಿಯಾಗಿ ಅನುಭವವನ್ನು ಹೊಂದುವದು,

---

1. ಶ್ರೀ ಶಂಕರಾಚಾರ್ಯರ ಗುರುಗಳ ಹೆಸರು ಗೋವಿಂದಭಗವತ್ಪಾದರೆಂದು ಪ್ರಸಿದ್ಧಿ. ಈ ಮಂಗಲಾಚರಣೆಯ ವಿಷಯಕ್ಕೆ ಪೀಠಿಕೆಯನ್ನು ನೋಡಿ.

## ಆತ್ಮೈಕ್ಯಜ್ಞಾನವೇ ಮುಕ್ತಿಗೆ ಸಾಧನ

ವದನ್ತು[1] ಶಾಸ್ತ್ರಾಣಿ ಯಜನ್ತು ದೇವಾನ್
ಕುರ್ವನ್ತು ಕರ್ಮಾಣಿ ಭಜನ್ತು ದೇವತಾಃ ।
ಆತ್ಮೈಕ್ಯಬೋಧೇನ ವಿನಾ ವಿಮುಕ್ತಿ-[2]
ರ್ನ ಸಿಧ್ಯತಿ ಬ್ರಹ್ಮಶತಾನ್ತರೇಽಪಿ ॥ ೬ ॥

೬. ಶಾಸ್ತ್ರಗಳನ್ನು ಹೇಳುತ್ತಿರಲಿ, ದೇವತೆಗಳನ್ನು ಪೂಜಿಸುತ್ತಿರಲಿ, ಕರ್ಮಗಳನ್ನು ಮಾಡುತ್ತಿರಲಿ, ದೇವತೆಗಳನ್ನು ಭಜಿಸುತ್ತಿರಲಿ, ಆತ್ಮೈಕ್ಯಜ್ಞಾನವಿಲ್ಲದೆ ನೂರು ಬ್ರಹ್ಮರುಗಳ ಕಾಲವಾದರೂ[3] ಮುಕ್ತಿಯು ಸಿದ್ಧಿಸುವುದಿಲ್ಲ.

ಅಮೃತತ್ವಸ್ಯ ನಾಽಶಾಸ್ತಿ ವಿತ್ತೇನೇತ್ಯೇವ ಹಿ ಶ್ರುತಿಃ ।
ಬ್ರವೀತಿ ಕರ್ಮಣೋ ಮುಕ್ತೇರಹೇತುತ್ವಂ ಸ್ಫುಟಂ ಯತಃ ॥ ೭ ॥

೭ "ವಿತ್ತದಿಂದ ಅಮೃತತ್ವದ ಆಶೆಯಿಲ್ಲ" (ಬೃ. ೨-೪-೨, ೪-೫-೩) ಎಂದೇ ಶ್ರುತಿಯು ಕರ್ಮವು ಮುಕ್ತಿಗೆ ಸಾಧನವಲ್ಲವೆಂಬಿದನ್ನು ಸ್ಫುಟವಾಗಿ ಹೇಳುತ್ತಿದೆ.

## ಮುಕ್ತಿಗಾಗಿ ಪ್ರಯತ್ನಮಾಡಬೇಕು

ಅತೋ ವಿಮುಕ್ತ್ಯೈ ಪ್ರಯತೇತ ವಿದ್ವಾನ್
ಸಂನ್ಯಸ್ತಬಾಹ್ಯಾರ್ಥಸುಖಸ್ಪೃಹಃ ಸನ್ ।
ಸನ್ತಂ ಮಹಾನ್ತಂ ಸಮುಪೇತ್ಯ ದೇಶಿಕಂ
ತೇನೋಪದಿಷ್ಟಾರ್ಥಸಮಾಹಿತಾತ್ಮಾ ॥ ೮ ॥

೮. ಆದ್ದರಿಂದ ವಿವೇಕಿಯಾದವನು ಹೊರಗಿನ ವಿಷಯಗಳ ಭೋಗದಲ್ಲಿ ಆಶೆಯನ್ನು ತೊರೆದು[4] ಸಾಧುವಾದ ಮಹಾಗುರುವಿನ ಬಳಿಗೆ (ವಿಧಿವತ್ತಾಗಿ) ಹೋಗಿ[5] ಆತನು ಉಪದೇಶಿಸಿದ ವಿಷಯದಲ್ಲಿ ಮನಸ್ಸನ್ನು ನಿಲ್ಲಿಸಿಕೊಂಡು ಮುಕ್ತಿಗಾಗಿ ಪ್ರಯತ್ನಮಾಡಬೇಕು.

---

1. 'ಪಠನ್ತು' ಪಾ॥
2. 'ವಿನಾಪಿ ಮುಕ್ತಿಃ' ಎಂಬ ಪಾಠಕ್ಕಿಂತ ಇದೇ ಮೇಲು.
3. ಬ್ರಹ್ಮನ ಕಾಲವನ್ನು ಗೀ. ೮-೧೭ರಲ್ಲಿ ವರ್ಣಿಸಿರುವುದನ್ನು ನೋಡಿರಿ.
4. ಜ್ಞಾನಕ್ಕೆ ಅಂಗವಾದ ಸಂನ್ಯಾಸವಿದು. ಸಂನ್ಯಾಸವಾದಮೇಲೆಯೇ ಶ್ರವಣಾದಿಗಳನ್ನು ಮಾಡಬೇಕೆಂಬ ಅಭಿಪ್ರಾಯವು ಇಲ್ಲಿ ಅಡಗಿದೆ.
5. ಇವನ್ನು ಇನ್ನು ಮುಂದೆ ೯ ೨ರಿಂದ ವಿವರಿಸಿದೆ.

ಬ್ರಹ್ಮರೂಪದಿಂದ ನೆಲೆನಿಲ್ಲುವದು–(ಹೀಗೆ) ಮುಕ್ತಿ(ಯನ್ನು ಪಡೆದುಕೊಳ್ಳುವ) ದೆಂಬುದು[೧] ನೂರು ಕೋಟಿ ಜನ್ಮಗಳಲ್ಲಿ ಚೆನ್ನಾಗಿ ಆಚರಿಸಿದ ಪುಣ್ಯಗಳಿಂದಲ್ಲದೆ ದೊರಕದು.

**ದುರ್ಲಭಂ ತ್ರಯಮೇವೈತದ್ದೇವಾನುಗ್ರಹಹೇತುಕಮ್ ।**
**ಮನುಷ್ಯತ್ವಂ ಮುಮುಕ್ಷುತ್ವಂ ಮಹಾಪುರುಷಸಂಶ್ರಯಃ ॥೩॥**

೩. ಪಡೆಯುವದಕ್ಕೆ ಕಷ್ಟವಾಗಿ ಈಶ್ವರನ ಅನುಗ್ರಹದಿಂದಲೇ ದೊರಕತಕ್ಕವೆಂದರೆ ಈ ಮೂರೇ. (ಯಾವವೆಂದರೆ) ಮನುಷ್ಯತ್ವ, ಮುಮುಕ್ಷುತ್ವ, ಮಹಾಪುರುಷರ ಆಶ್ರಯ.

**ಲಬ್ಧ್ವಾ ಕಥಂಚಿನ್ನರಜನ್ಮ ದುರ್ಲಭಂ**
**ತತ್ರಾಪಿ ಪುಂಸ್ತ್ವಂ ಶ್ರುತಿಪಾರದರ್ಶನಮ್ ।**
**ಯಃ ಸ್ವಾತ್ಮಮುಕ್ತ್ಯೈ[೨] ನ ಯತೇತ ಮೂಢಧೀಃ**
**ಸ ಹ್ಯಾತ್ಮಹಾ ಸ್ವಂ ವಿನಿಹನ್ತ್ಯಸದ್ಗ್ರಹಾತ್ ॥೪॥**

೪. ದುರ್ಲಭವಾಗಿರುವ ನರಜನ್ಮವನ್ನು ಹೇಗೋ ಹೊಂದಿ, ಆದರಲ್ಲಿಯೂ ಶ್ರುತಿಯ ಆಚೆಯ ದಡವನ್ನು ಕಾಣುವದಕ್ಕೆ ತಕ್ಕದ್ದಾದ ಗಂಡಸುತನವನ್ನೂ ಹೊಂದಿ, ಯಾವ ಮೂಢಬುದ್ಧಿಯವನು ತನ್ನ ಮುಕ್ತಿಗಾಗಿ ಪ್ರಯತ್ನಿಸದೆ ಇರುವನೋ ಅವನು ಆತ್ಮಘಾತಕನು[೩]; ಏಕೆಂದರೆ ಅವನು ಅಸತ್ತಾದದ್ದನ್ನೇ ಹಿಡಿದು ತನ್ನನ್ನು ತಾನೇ ಕೊಂದುಕೊಳ್ಳುತ್ತಿರುವನು[೪].

**ಇತಃ ಕೋನ್ವಸ್ತಿ ಮೂಢಾತ್ಮಾ ಯಸ್ತು ಸ್ವಾರ್ಥೇ ಪ್ರಮಾದ್ಯತಿ ।**
**ದುರ್ಲಭಂ ಮಾನುಷಂ ದೇಹಂ ಪ್ರಾಪ್ಯ ತತ್ರಾಪಿ ಪೌರುಷಮ್ ॥೫॥**

೫. ದುರ್ಲಭನಾದ ಮಾನುಷದೇಹವನ್ನು ಹೊಂದಿ, ಆದರಲ್ಲಿಯೂ ಪುರುಷ (ಜನ್ಮವನ್ನು ಹೊಂದಿ)[೫] ಯಾವನು ಸ್ವಪ್ರಯೋಜನದ ವಿಷಯದಲ್ಲಿ ಅವಧಾನವಿಲ್ಲದೆ ಇರುವನೋ ಅವನಿಗಿಂತ ಮೂಢಬುದ್ಧಿಯು ಯಾರಿರುವನು ?

೧. ಅನುಭವವನ್ನು ಹೊಂದುವದು, ಬ್ರಹ್ಮರೂಪದಿಂದ ನಿಲುಗಡೆಯನ್ನು ಹೊಂದಿ ಮುಕ್ತಿಯನ್ನು ಪಡೆಯುವದು, ಎಂದರೆ ವಿದೇಹಮುಕ್ತಿಯನ್ನು ಹೊಂದುವದು– ಇವೆಲ್ಲ ಬೇರೆಬೇರೆಯ ಮೆಟ್ಟಿಲುಗಳು. ಮುಂದಿನ ಗ್ರಂಥಭಾಗದಲ್ಲಿ ಇದು ಸ್ಪಷ್ಟವಾಗುವದು.

೨. 'ಮುಕ್ತ್ಯೈ' ಬೊಂ|| ಗೋ|| ; ನಾವು ಕೊಟ್ಟಿರುವದು ವಾ|| ಪಾಠ.

೩. ಶ್ರು. ೮ ಸೂಚನೆ.

೪. ಹುಸಿಯಾದ ಅನಾತ್ಮವನ್ನು ನಂಬಿ ಆತ್ಮಸ್ವರೂಪವನ್ನು ಕಳೆದುಕೊಳ್ಳುತ್ತಿರುವನು. ೫. ಶಂ. ಗೀ. ೯ ೩೩ನ್ನು ನೋಡಿರಿ. ಪುರುಷರಿಗೆ ಮಾತ್ರ ಜ್ಞಾನಕ್ಕೆ ಅಧಿಕಾರವೆಂಬುದನ್ನು ಒತ್ತಿ ಹೇಳಿರುವದು ಭಾಷ್ಯದಲ್ಲಿ ಕಾಣುವದಿಲ್ಲ. ಮಾಂ. ಕಾ. ಭಾ. ೪-೮೮ ನೋಡಿ.

## ಆತ್ಮೈಕ್ಯಜ್ಞಾನವೇ ಮುಕ್ತಿಗೆ ಸಾಧನ

ವದನ್ತು[1] ಶಾಸ್ತ್ರಾಣಿ ಯಜನ್ತು ದೇವಾನ್
ಕುರ್ವನ್ತು ಕರ್ಮಾಣಿ ಭಜನ್ತು ದೇವತಾಃ ।
ಆತ್ಮೈಕ್ಯಬೋಧೇನ ವಿನಾ ವಿಮುಕ್ತಿ-[2]
ರ್ನ ಸಿಧ್ಯತಿ ಬ್ರಹ್ಮಶತಾನ್ತರೇಽಪಿ ॥ ೬ ॥

೬. ಶಾಸ್ತ್ರಗಳನ್ನು ಹೇಳುತ್ತಿರಲಿ, ದೇವತೆಗಳನ್ನು ಪೂಜಿಸುತ್ತಿರಲಿ, ಕರ್ಮಗಳನ್ನು ಮಾಡುತ್ತಿರಲಿ, ದೇವತೆಗಳನ್ನು ಭಜಿಸುತ್ತಿರಲಿ, ಆತ್ಮೈಕ್ಯಜ್ಞಾನವಿಲ್ಲದೆ ನೂರು ಬ್ರಹ್ಮರುಗಳ ಕಾಲವಾದರೂ[3] ಮುಕ್ತಿಯು ಸಿದ್ಧಿಸುವದಿಲ್ಲ.

ಅಮೃತತ್ವಸ್ಯ ನಾಽಽಶಾಸ್ತಿ ವಿತ್ತೇನೇತ್ಯೇವ ಹಿ ಶ್ರುತಿಃ ।
ಬ್ರವೀತಿ ಕರ್ಮಣೋ ಮುಕ್ತೇರಹೇತುತ್ವಂ ಸ್ಫುಟಂ ಯತಃ ॥ ೭ ॥

೭ "ವಿತ್ತದಿಂದ ಅಮೃತತ್ವದ ಆಶೆಯಿಲ್ಲ" (ಬೃ. ೨-೪-೨, ೪-೫-೩) ಎಂದೇ ಶ್ರುತಿಯು ಕರ್ಮವು ಮುಕ್ತಿಗೆ ಸಾಧನವಲ್ಲವೆಂಬಿದನ್ನು ಸ್ಫುಟವಾಗಿ ಹೇಳುತ್ತಿದೆ.

## ಮುಕ್ತಿಗಾಗಿ ಪ್ರಯತ್ನಮಾಡಬೇಕು

ಅತೋ ವಿಮುಕ್ತ್ಯೈ ಪ್ರಯತೇತ ವಿದ್ವಾನ್
ಸಂನ್ಯಸ್ತಬಾಹ್ಯಾರ್ಥಸುಖಸ್ಪೃಹಃ ಸನ್ ।
ಸನ್ತಂ ಮಹಾನ್ತಂ ಸಮುಪೇತ್ಯ ದೇಶಿಕಂ
ತೇನೋಪದಿಷ್ಟಾರ್ಥಸಮಾಹಿತಾತ್ಮಾ ॥ ೮ ॥

೮. ಆದ್ದರಿಂದ ವಿವೇಕಿಯಾದವನು ಹೊರಗಿನ ವಿಷಯಗಳ ಭೋಗದಲ್ಲಿ ಆಶೆಯನ್ನು ತೊರೆದು[4] ಸಾಧುವಾದ ಮಹಾಗುರುವಿನ ಬಳಿಗೆ (ವಿಧಿವತ್ತಾಗಿ) ಹೋಗಿ[5] ಆತನು ಉಪದೇಶಿಸಿದ ವಿಷಯದಲ್ಲಿ ಮನಸ್ಸನ್ನು ನಿಲ್ಲಿಸಿಕೊಂಡು ಮುಕ್ತಿಗಾಗಿ ಪ್ರಯತ್ನಮಾಡಬೇಕು.

---

1. 'ಪಠನ್ತು' ವಾ॥
2. 'ವಿನಾಪಿ ಮುಕ್ತಿಃ' ಎಂಬ ಪಾಠಕ್ಕಿಂತ ಇದೇ ಮೇಲು.
3. ಬ್ರಹ್ಮನ ಕಾಲವನ್ನು ಗೀ. ೮-೧೭ರಲ್ಲಿ ವರ್ಣಿಸಿರುವದನ್ನು ನೋಡಿರಿ.
4. ಜ್ಞಾನಕ್ಕೆ ಅಂಗವಾದ ಸಂನ್ಯಾಸವಿದು. ಸಂನ್ಯಾಸವಾದಮೇಲೆಯೇ ಶ್ರವಣಾದಿಗಳನ್ನು ಮಾಡಬೇಕೆಂಬ ಅಭಿಪ್ರಾಯವು ಇಲ್ಲಿ ಅಡಗಿದೆ.
5. ಇವನ್ನು ಇನ್ನು ಮುಂದೆ ೯ ರಿಂದ ವಿವರಿಸಿದೆ.

ಉದ್ಧರೇದಾತ್ಮನಾತ್ಮಾನಂ ಮಗ್ನಂ ಸಂಸಾರವಾರಿಧೌ ।
ಯೋಗಾರೂಢತ್ವಮಾಸಾದ್ಯ ಸಮ್ಯಗ್ದರ್ಶನನಿಷ್ಠಯಾ ॥ ೯ ॥

೯. ಸಂಸಾರಸಾಗರದಲ್ಲಿ ಮುಳುಗಿರುವ ತನ್ನನ್ನು, ಸಮ್ಯಗ್ದರ್ಶನನಿಷ್ಠೆಯಿಂದ[1] ಯೋಗಾರೂಢತ್ವವನ್ನು[2] ಹೊಂದಿ ತಾನೇ ಉದ್ಧಾರಮಾಡಿಕೊಳ್ಳಬೇಕು.

ಸಂನ್ಯಸ್ಯ ಸರ್ವಕರ್ಮಾಣಿ ಭವಬನ್ಧವಿಮುಕ್ತಯೇ ।
ಯತ್ಯತಾಂ ಪಣ್ಡಿತೈರ್ಧೀರೈರಾತ್ಮಾಭ್ಯಾಸ ಉಪಸ್ಥಿತೈಃ ॥ ೧೦ ॥

೧೦. ಧೀರರಾದ ಪಂಡಿತರು ಸರ್ವಕರ್ಮಗಳನ್ನೂ ಸಂನ್ಯಾಸಮಾಡಿ ಆತ್ಮಾಭ್ಯಾಸದಲ್ಲಿಯೇ[3] ನಿರಂತರವಾಗಿ ಸಂಸಾರಬಂಧದ ವಿಮುಕ್ತಿಗಾಗಿ ಯತ್ನಿಸಬೇಕು.

## ವಿಚಾರದಿಂದಲೇ ಜ್ಞಾನವುಂಟಾಗುವದು

ಚಿತ್ತಸ್ಯ ಶುದ್ಧಯೇ ಕರ್ಮ ನ ತು ವಸ್ತೂಪಲಬ್ಧಯೇ ।
ವಸ್ತುಸಿದ್ಧಿರ್ವಿಚಾರೇಣ ನ ಕಿಂಚಿತ್ ಕರ್ಮಕೋಟಿಭಿಃ ॥ ೧೧ ॥

೧೧. ಕರ್ಮವು ಚಿತ್ತದ ಶುದ್ಧಿಗೇ ಹೊರತು ವಸ್ತುವಿನ ಜ್ಞಾನಕ್ಕೆ (ಸಾಧನ)ವಲ್ಲ. ವಸ್ತುವಿನ ಸಿದ್ಧಿಯು ವಿಚಾರದಿಂದ (ಆಗುತ್ತದೆಯೇ ಹೊರತು) ಕೋಟಿಕರ್ಮಗಳಿಂದಲೂ ಒಂದಿಷ್ಟೂ ಆಗುವದಿಲ್ಲ.

ಸಮ್ಯಗ್ವಿಚಾರತಃ ಸಿದ್ಧಾ ರಜ್ಜುತತ್ತ್ವಾವಧಾರಣಾ ।
ಭ್ರಾನ್ತ್ಯೋದಿತಮಹಾಸರ್ಪಭಯದುಃಖವಿನಾಶಿನೀ ॥ ೧೨ ॥

೧೨. ಸರಿಯಾಗಿ ವಿಚಾರಮಾಡುವದರಿಂದ ಉಂಟಾದ ಹಗ್ಗದ ತತ್ತ್ವದ ನಿಶ್ಚಯವು ಭ್ರಾಂತಿಯಿಂದುಂಟಾಗಿದ್ದ ಹೆಬ್ಬಾವಿನ ಅಂಜಿಕೆಯನ್ನೂ ದುಃಖವನ್ನೂ ತೊಲಗಿಸುವದು.

ಅರ್ಥಸ್ಯ ನಿಶ್ಚಯೋ ದೃಷ್ಟೋ ವಿಚಾರೇಣ ಹಿತೋಕ್ತಿತಃ ।
ನ ಸ್ನಾನೇನ ನ ದಾನೇನ ಪ್ರಾಣಾಯಾಮಶತೇನ ವಾ ॥ ೧೩ ॥

---

1. ಸರಿಯಾದ ಜ್ಞಾನದಲ್ಲಿಯೇ ನೆಲೆನಿಲ್ಲುವದರಿಂದ.

2. ಗೀ. ೬-೩ರ ಸೂಚನೆ. ಆ ಶ್ಲೋಕದ ಮೇಲಿನ ಶಂಕರಾನಂದೀಯ ಟೀಕೆಯನ್ನು ನೋಡಿ.

3. ವಿಜಾತೀಯಪ್ರತ್ಯಯಗಳನ್ನು ಬಿಟ್ಟು ಸಜಾತೀಯಪ್ರತ್ಯಯಗಳನ್ನು ಮತ್ತೆ ಮತ್ತೆ ಮಾಡಿಕೊಳ್ಳುವದೇ ಅಭ್ಯಾಸವು. ಶಂ. ಗೀ. ೬-೩೫ನ್ನು ನೋಡಿ.

೧೩. ವಸ್ತುವಿನ ನಿಶ್ಚಯವು ವಿಚಾರದಿಂದಲೂ ಹಿತೋಕ್ತಿಯಿಂದಲೂ[1] (ಆಗುವದು) ಕಂಡಿದೆ; ಸ್ನಾನದಿಂದಲಾಗಲಿ ದಾನದಿಂದಲಾಗಲಿ ನೂರಾರು ಪ್ರಾಣಾಯಾಮಗಳಿಂದಲಾಗಲಿ ಆಗುವದು ಕಂಡಿಲ್ಲ.

## ಆತ್ಮವಿದ್ಯೆಗೆ ಅಧಿಕಾರಿ

**ಅಧಿಕಾರಿಣಮಾಶಾಸ್ತೇ ಫಲಸಿದ್ಧಿರ್ವಿಶೇಷತಃ ।**
**ಉಪಾಯಾ ದೇಶಕಾಲಾದ್ಯಾಃ ಸನ್ತ್ಯಸ್ಮಿನ್ ಸಹಕಾರಿಣಃ ॥ ೧೪ ॥**

೧೪. ಫಲಸಿದ್ಧಿಗೆ ವಿಶೇಷವಾಗಿ ಅಧಿಕಾರಿಯು ಬೇಕಾಗಿರುತ್ತಾನೆ. ದೇಶ, ಕಾಲ–ಮುಂತಾದ ಉಪಾಯಗಳೂ ಈ ವಿಷಯದಲ್ಲಿ ಸಹಕಾರಿಗಳಾಗಿರುತ್ತವೆ.[2]

**ಅತೋ ವಿಚಾರಃ ಕರ್ತವ್ಯೋ ಜಿಜ್ಞಾಸೋರಾತ್ಮವಸ್ತುನಃ ।**
**ಸಮಾಸಾದ್ಯ ದಯಾಸಿನ್ಧುಂ ಗುರುಂ ಬ್ರಹ್ಮವಿದುತ್ತಮಮ್ ॥ ೧೫ ॥**

೧೫. ಆದ್ದರಿಂದ ಆತ್ಮವಸ್ತುವನ್ನು ತಿಳಿಯಬೇಕೆನ್ನುವವನು ದಯಾಸಾಗರನಾದ ಶ್ರೇಷ್ಠ ಬ್ರಹ್ಮಜ್ಞಾನಿಯಾದ ಗುರುವನ್ನು ಸೇರಿ ವಿಚಾರವನ್ನು ಮಾಡಬೇಕು.

**ಮೇಧಾವೀ ಪುರುಷೋ ವಿದ್ವಾನೂಹಾಪೋಹವಿಚಕ್ಷಣಃ ।**
**ಅಧಿಕಾರ್ಯಾತ್ಮವಿದ್ಯಾಯಾಮುಕ್ತಲಕ್ಷಣಲಕ್ಷಿತಃ ॥ ೧೬ ॥**

೧೬. (ಕೇಳಿದ್ದನ್ನು) ನೆನಪಿಡಬಲ್ಲವನು, ಜಾಣನು, (ಬೇಕಾದದ್ದನ್ನು) ಊಹಿಸಿ (ಬೇಡವಾದದ್ದನ್ನು) ಬಿಟ್ಟುಬಿಡುವದರಲ್ಲಿ ಚತುರನು – ಈ ಲಕ್ಷಣಗಳುಳ್ಳ ಪುರುಷನು ಆತ್ಮವಿದ್ಯೆಗೆ ಅಧಿಕಾರಿ.

**ವಿವೇಕಿನೋ ವಿರಕ್ತಸ್ಯ ಶಮಾದಿಗುಣಶಾಲಿನಃ ।**
**ಮುಮುಕ್ಷೋರೇವ ಹಿ ಬ್ರಹ್ಮಜಿಜ್ಞಾಸಾ ಯೋಗ್ಯತಾ ಮತಾ ॥ ೧೭ ॥**

೧೭. ವಿವೇಕಿಯೂ ವಿರಕ್ತನೂ ಶಮಾದಿಗುಣಗಳುಳ್ಳವನೂ ಮುಮುಕ್ಷುವೂ ಆಗಿರುವವನೇ ಬ್ರಹ್ಮಜಿಜ್ಞಾಸೆಗೆ ಯೋಗ್ಯನೆಂದು (ಬಲ್ಲವರ) ಮತವು.

## ಸಾಧನಚತುಷ್ಟಯ

**ಸಾಧನಾನ್ಯತ್ರ ಚತ್ವಾರಿ ಕಥಿತಾನಿ ಮನೀಷಿಭಿಃ ।**
**ಯೇಷು ಸತ್ಸ್ವೇವ ಸನ್ನಿಷ್ಠಾ ಯದಭಾವೇ ನ ಸಿಧ್ಯತಿ ॥ ೧೮ ॥**

---

1. ಆಪ್ತರು ಮಾಡುವ ಉಪದೇಶ. 2. ಬರಿಯ ದೇಶಕಾಲಗಳು ಸಾಧನವಲ್ಲ.

೧೮. ಇಲ್ಲಿ ತಿಳಿದವರು ನಾಲ್ಕು ಸಾಧನಗಳನ್ನು ಹೇಳಿರುತ್ತಾರೆ. ಅವು ಇದ್ದರೇ ಸದ್ರೂಪನಾದ (ಆತ್ಮನಲ್ಲಿ) ನಿಷ್ಠೆ (ಯುಂಟಾಗುತ್ತದೆ); ಅವು ಇಲ್ಲದಿದ್ದರೆ ಆಗಲಾರದು.

ಆದೌ ನಿತ್ಯಾನಿತ್ಯವಸ್ತುವಿವೇಕಃ ಪರಿಗಣ್ಯತೇ ।
ಇಹಾಮುತ್ರಫಲಭೋಗವಿರಾಗಸ್ತದನನ್ತರಮ್ ॥ ೧೯ ॥
ಶಮಾದಿಷಟ್ಕಸಂಪತ್ತಿರ್ಮುಮುಕ್ಷುತ್ವಮಿತಿ ಸ್ಫುಟಮ್

೧೯–೧೯. ಮೊದಲು ನಿತ್ಯಾನಿತ್ಯವಸ್ತುವಿವೇಕವು; ಆಮೇಲೆ ಇಹಾಮುತ್ರಫಲಭೋಗವಿರಾಗ; ಶಮಾದಿಷಟ್ಕಸಂಪತ್ತಿ, ಮುಮುಕ್ಷುತ್ವ –ಇವೇ (ಆ ನಾಲ್ಕು) ಎಂದು ಸ್ಫುಟವಾಗಿ (ಹೇಳಿರುತ್ತಾರೆ).

ಬ್ರಹ್ಮ ಸತ್ಯಂ ಜಗನ್ಮಿಥ್ಯೇತ್ಯೇವಂರೂಪೋ ವಿನಿಶ್ಚಯಃ ।
ಸೋಽಯಂ ನಿತ್ಯಾನಿತ್ಯವಸ್ತುವಿವೇಕಃ ಸಮುದಾಹೃತಃ ॥ ೨೦ ॥

೨೦. ಬ್ರಹ್ಮವು ಸತ್ಯ, ಜಗತ್ತು ಮಿಥ್ಯೆ – ಎಂಬೀ ರೂಪದ ವಿನಿಶ್ಚಯ (ವಿದೆಯಲ್ಲ) ಇದೇ ನಿತ್ಯಾನಿತ್ಯವಸ್ತುವಿವೇಕವೆನಿಸುವದು.[1]

ತದ್ವೈರಾಗ್ಯಂ ಜುಗುಪ್ಸಾ ಯಾ ದರ್ಶನಶ್ರವಣಾದಿಭಿಃ ।
ದೇಹಾದಿಬ್ರಹ್ಮಪರ್ಯನ್ತೇ ಹ್ಯನಿತ್ಯೇ ಭೋಗವಸ್ತುನಿ ॥ ೨೧ ॥
ವಿರಜ್ಯ ವಿಷಯವ್ರಾತಾದ್ ದೋಷದೃಷ್ಟ್ಯಾ ಮುಹುರ್ಮುಹುಃ

೨೧–೨೧. ದೇಹದಿಂದ ಮೊದಲಾಗಿ ಬ್ರಹ್ಮದವರೆಗಿನ ಅನಿತ್ಯವಾದ ಭೋಗವಸ್ತುವಿನಲ್ಲಿ ದರ್ಶನಶ್ರವಣಾದಿಗಳಿಂದ ಮತ್ತೆಮತ್ತೆ ದೋಷವನ್ನು ಕಂಡ ವಿಷಯಸಮೂಹದಲ್ಲಿ ಬೇಸರಿಕೆಯಿಂದ ಉಂಟಾಗುವ ಉದಾಸೀನಬುದ್ಧಿಯೆ ವೈರಾಗ್ಯವು.

ಸ್ವಲಕ್ಷ್ಯೇ ನಿಯತಾವಸ್ಥಾ ಮನಸಃ ಶಮ ಉಚ್ಯತೇ[2] ॥ ೨೨ ॥
ವಿಷಯೇಭ್ಯಃ ಪರಾವರ್ತ್ಯ ಸ್ಥಾಪನಂ ಸ್ವಸ್ವಗೋಲಕೇ ।
ಉಭಯೇಷಾಮಿನ್ದ್ರಿಯಾಣಾಂ ಸ ದಮಃ ಪರಿಕೀರ್ತಿತಃ ॥ ೨೩ ॥

1. ಬ್ರಹ್ಮವು ಸತ್ಯ, ಜಗತ್ತು ಮಿಥ್ಯೆ–ಎಂದು ತಿಳಿದರೆ ಮುಂದೆ ತಿಳಿಯಬೇಕಾದದ್ದು ಇರುವದಿಲ್ಲ; ಇದನ್ನು ಸಾಧನವೆಂದು ಏತಕ್ಕೆ ಬರೆದಿರುವರೋ ತಿಳಿಯಲಿಲ್ಲ.

2. ಹಿಂದಿನ ಅರ್ಧಶ್ಲೋಕವನ್ನೂ ಇದನ್ನೂ ಸೇರಿಸಿ ಒಂದು ಶ್ಲೋಕವೆಂತ ಲೆ... ...ಕೊಳ್ಳಬೇಕು.

ಬಾಹ್ಯಾನಾಲಮ್ಬನಂ ವೃತ್ತೇರೇಷೋಪರತಿರುತ್ತಮಾ ॥ ೨೩ ॥

ಸಹನಂ ಸರ್ವದುಃಖಾನಾಮಪ್ರತೀಕಾರಪೂರ್ವಕಮ್ ।
ಚಿನ್ತಾವಿಲಾಪರಹಿತಂ ಸಾ ತಿತಿಕ್ಷಾ ನಿಗದ್ಯತೇ ॥ ೨೪ ॥

ಶಾಸ್ತ್ರಸ್ಯ ಗುರುವಾಕ್ಯಸ್ಯ ಸತ್ಯಬುದ್ಧ್ಯವಧಾರಣಮ್ ।
ಸಾ ಶ್ರದ್ಧಾ ಕಥಿತಾ ಸದ್ಭಿರ್ಯಯಾ ವಸ್ತೂಪಲಭ್ಯತೇ ॥ ೨೫ ॥

ಸರ್ವದಾ ಸ್ಥಾಪನಂ ಬುದ್ಧೇಃ ಶುದ್ಧೇ ಬ್ರಹ್ಮಣಿ ಸರ್ವದಾ ।
ತತ್ಸಮಾಧಾನಮಿತ್ಯುಕ್ತಂ ನ ತು ಚಿತ್ತಸ್ಯ ಲಾಲನಮ್ ॥ ೨೬ ॥

೨೩–೨೬. ಮನಸ್ಸನ್ನು ತನ್ನ ಲಕ್ಷ್ಯದಲ್ಲಿಯೇ ನಿಯಮದಿಂದ ಇಟ್ಟುಕೊಳ್ಳುವದು ಶಮವು. ಎರಡು ಬಗೆಯ ಇಂದ್ರಿಯಗಳನ್ನೂ[1] ವಿಷಯದಿಂದ ಹಿಂಜಗ್ಗಿ ತಮ್ಮತಮ್ಮ ಗೋಳಕದಲ್ಲಿ[2] ನಿಲ್ಲಿಸಿಕೊಳ್ಳುವದೇ ದಮವು. ವೃತ್ತಿಯು ಹೊರಗಿನ ಯಾವ ವಸ್ತುವನ್ನೂ ಆಶ್ರಯಿಸದಿರುವದೆಂಬುದೇ ಉತ್ತಮವಾದ ಉಪರತಿಯು. ಸಮಸ್ತದುಃಖಗಳನ್ನೂ ಯಾವ ಪ್ರತೀಕಾರವನ್ನೂ ಮಾಡದೆ ವ್ಯಸನವಾಗಲಿ ಶೋಕವಾಗಲಿ ಇಲ್ಲದೆ ಸಹಿಸಿಕೊಳ್ಳುವದೇ ತಿತಿಕ್ಷೆಯೆನಿಸುವದು.[3] ಶಾಸ್ತ್ರವೂ ಗುರುವಾಕ್ಯವೂ ಸತ್ಯವೆಂಬ ಬುದ್ಧಿಯನ್ನು ನಿಶ್ಚಯಿಸುವದನ್ನೇ ಸತ್ಪುರುಷರು ಶ್ರದ್ಧೆ ಎನ್ನುತ್ತಾರೆ; ಅದರಿಂದಲೇ ವಸ್ತುವಿನ ಜ್ಞಾನವಾಗುತ್ತದೆ. ಯಾವಾಗಲೂ ಶುದ್ಧಬ್ರಹ್ಮದಲ್ಲಿ ಬುದ್ಧಿಯನ್ನು ಇಟ್ಟುಕೊಂಡಿರುವದಿದೆಯಲ್ಲ, ಅದು ಸಮಾಧಾನವೆನಿಸುವದೇ ಹೊರತು ಚಿತ್ತವನ್ನು ಆಡಿಸಿಕೊಂಡಿರುವದಲ್ಲ.[4]

ಅಹಙ್ಕಾರಾದಿದೇಹಾನ್ತಾನ್ ಬನ್ಧಾನಜ್ಞಾನಕಲ್ಪಿತಾನ್ ।
ಸ್ವಸ್ವರೂಪಾವಬೋಧೇನ ಮೋಕ್ತುಮಿಚ್ಛಾ ಮುಮುಕ್ಷುತಾ ॥ ೨೭ ॥
ಮನ್ದಮಧ್ಯಮರೂಪಾಪಿ ವೈರಾಗ್ಯೇಣ ಶಮಾದಿನಾ ।
ಪ್ರಸಾದೇನ ಗುರೋಃ ಸೇಯಂ ಪ್ರವೃದ್ಧಾ ಸೂಯತೇ ಫಲಮ್ ॥ ೨೮ ॥

1. ಜ್ಞಾನೇಂದ್ರಿಯಗಳನ್ನೂ ಕರ್ಮೇಂದ್ರಿಯಗಳನ್ನೂ ಎಂದರ್ಥ. ಇವುಗಳನ್ನು ಮುಂದೆ ೯೨ರಲ್ಲಿ ವಿವರಿಸಿದೆ.

2. ಸ್ಥಾನದಲ್ಲಿ. ಕಣ್ಣು, ಕಿವಿ—ಮುಂತಾದವು ಗೋಳಕಗಳು; ಅವುಗಳಲ್ಲಿ ಇಂದ್ರಿಯಗಳು ಕೆಲಸಮಾಡುತ್ತಿರುವವು ಎಂಬ ಭಾವವು ಇಲ್ಲಿ ಅಡಗಿದೆ.

3. ಶಂ. ಗೀ. ೨-೧೪.

4. ಇಲ್ಲಿ ಹೇಳಿರುವ ಆರು ಸಾಧನಗಳನ್ನುಳ್ಳವನಾಗಿರುವದೇ ಶಮಾದಿಷಟ್ಕಸಂಪತ್ತಿ. ಇಲ್ಲಿ ಕೊಟ್ಟಿರುವ ಶಮಾದಿಗಳ ಲಕ್ಷಣವನ್ನು ಭಾಷ್ಯಗ್ರಂಥಗಳಲ್ಲಿರುವ ಲಕ್ಷಣಗಳಿಗೆ ಹೋಲಿಸಿ ನೋಡಬೇಕು.

ವೈರಾಗ್ಯಂ ಚ ಮುಮುಕ್ಷುತ್ವಂ ತೀವ್ರಂ ಯಸ್ಯ ತು ವಿದ್ಯತೇ ।
ತಸ್ಮಿನ್ನೇವಾರ್ಥವನ್ತಃ ಸ್ಯುಃ ಫಲವನ್ತಃ ಶಮಾದಯಃ ॥ ೨೯ ॥
ಏತಯೋರ್ಮನ್ದತಾ ಯತ್ರ ವಿರಕ್ತತ್ವಮುಮುಕ್ಷಯೋಃ ।
ಮರೌ ಸಲಿಲವತ್ ತತ್ರ ಶಮಾದೇರ್ಭಾನಮಾತ್ರತಾ ॥ ೩೦ ॥

೨೭-೩೦. ಅಹಂಕಾರವು ಮೊದಲಾಗಿ ದೇಹದವರೆಗಿನ ಅಜ್ಞಾನಕಲ್ಪಿತವಾದ ಬಂಧಗಳನ್ನು ತನ್ನ ಸ್ವರೂಪದ ತಿಳಿವಳಿಕೆಯಿಂದ ಬಿಡಿಸಿಕೊಳ್ಳಬೇಕೆಂಬ ಬಯಕೆಯೇ ಮುಮುಕ್ಷುತ್ವವು. ಇದು ತೀರ ಕಡಿಮೆಯಾಗಿರಲಿ, ನಡುತರದ್ದಾಗಿರಲಿ, ವೈರಾಗ್ಯದಿಂದಲೂ ಶಮಾದಿಗಳಿಂದಲೂ ಗುರುವಿನ ಪ್ರಸಾದದಿಂದಲೂ ಬೆಳೆದುಕೊಂಡು ಫಲವನ್ನು ಕೊಡುತ್ತದೆ. ವೈರಾಗ್ಯವೂ ಮುಮುಕ್ಷುತ್ವವೂ ಯಾರಲ್ಲಿ ತೀವ್ರವಾಗಿರುವವೋ ಅವನಲ್ಲಿರುವ ಶಮಾದಿಗಳೇ ಸಾರ್ಥಕವಾಗಿ ಸಫಲವಾಗುವವು. ಎಲ್ಲಿ ಈ ವಿರಕ್ತಿಮುಮುಕ್ಷುತ್ವಗಳು ತೀರ ಕಡಿಮೆಯಾಗಿರುವವೋ ಅಲ್ಲಿ ಶಮಾದಿಗಳು ಬಿಸಿಲುಕುದುರೆಯಲ್ಲಿ (ತೋರುವ) ನೀರಿನಂತೆ ಬರಿಯ ತೋರಿಕೆಯವಾಗಿರುತ್ತವೆ.

## ಭಕ್ತಿ

ಮೋಕ್ಷಕಾರಣಸಾಮಗ್ರ್ಯಾಂ ಭಕ್ತಿರೇವ ಗರೀಯಸೀ ।
ಸ್ವಸ್ವರೂಪಾನುಸನ್ಧಾನಂ ಭಕ್ತಿರಿತ್ಯಭಿಧೀಯತೇ ॥ ೨೯ ॥
ಸ್ವಾತ್ಮತತ್ತ್ವಾನುಸನ್ಧಾನಂ ಭಕ್ತಿರಿತ್ಯಪರೇ ಜಗುಃ ॥ ೩೧ ॥

೩೧-೩೧. ಮೋಕ್ಷಕ್ಕೆ ಬೇಕಾಗುವ ಸಾಧನಸಾಮಗ್ರಿಯಲ್ಲಿ ಭಕ್ತಿಯೇ ಹೆಚ್ಚಿನದು. ತನ್ನ ಸ್ವರೂಪವನ್ನು ಸ್ಮರಿಸುವದೇ ಭಕ್ತಿ ಎನಿಸುವದು. ತನ್ನ ಆತ್ಮನ ತತ್ತ್ವವನ್ನು ಸ್ಮರಿಸುವದೇ ಭಕ್ತಿ[1] ಎಂದು ಮತ್ತೆ ಕೆಲವರು ಹೇಳುತ್ತಾರೆ.

## ಸದ್ಗುರುವಿನಿಂದಲೇ ತತ್ತ್ವವನ್ನು ಕೇಳಿ ತಿಳಿದುಕೊಳ್ಳಬೇಕು

ಉಕ್ತಸಾಧನಸಮ್ಪನ್ನಸ್ತತ್ತ್ವಜಿಜ್ಞಾಸುರಾತ್ಮನಃ ।
ಉಪಸೀದೇದ್ ಗುರುಂ ಪ್ರಾಜ್ಞಂ ಯಸ್ಮಾದ್ ಬನ್ಧವಿಮೋಕ್ಷಣಮ್॥
ಶ್ರೋತ್ರಿಯೋಽವೃಜಿನೋಽಕಾಮಹತೋ ಯೋ ಬ್ರಹ್ಮವಿತ್ತಮಃ ।
ಬ್ರಹ್ಮಣ್ಯುಪರತಃ ಶಾನ್ತೋ ನಿರಿನ್ಧನ ಇವಾನಲಃ ॥ ೩೩ ॥

1. ತನ್ನ ಸ್ವರೂಪವೆಂದರೆ ಅನಾತ್ಮದಿಂದ ಬೇರೆಯಾಗಿರುವ ಆತ್ಮರೂಪವು ; ತನ್ನ ಆತ್ಮದ ತತ್ತ್ವವು ಎಂದರೆ ಸರ್ವಾತ್ಮನಾಗಿರುವ ಪರಬ್ರಹ್ಮ– ಎಂದು ಭೇದವನ್ನು ಕಲ್ಪಿಸಿರಬಹುದೆಂದು ತೋರುವದು. ಶಂ. ಗೀ. ೧೨-೧೬, ೬೯ನೆಯ ಶ್ಲೋಕಗಳನ್ನು ನೋಡಿರಿ; ಅಥವಾ ಇಲ್ಲಿ ಸವಿಕಲ್ಪಕನಿರ್ವಿಕಲ್ಪಕಸಮಾಧಿಗಳನ್ನು ಸೂಚಿಸಿದ್ದರೂ ಇರಬಹುದು.

ಅಹೈತುಕದಯಾಸಿನ್ಧುರ್ಬನ್ಧುರಾನಮತಾಂ ಸತಾಮ್ ||೩೩||
ತಮಾರಾಧ್ಯ ಗುರುಂ ಭಕ್ತ್ಯಾ ಪ್ರಹ್ವಪ್ರಶ್ರಯಸೇವನೈಃ |
ಪ್ರಸನ್ನಂ ತಮನುಪ್ರಾಪ್ಯ ಪೃಚ್ಛೇಜ್ಜ್ಞಾತವ್ಯಮಾತ್ಮನಃ ||೩೪||

೩೩-೩೪. ಮೇಲೆ ಹೇಳಿದ ಸಾಧನಗಳಿಂದ ಕೂಡಿದವನಾಗಿ ಆತ್ಮತತ್ತ್ವವನ್ನು ತಿಳಿದುಕೊಳ್ಳಬೇಕೆಂದೆಳಸುವಾತನು ಬಂಧದಿಂದ ಬಿಡುಗಡೆಯನ್ನು ಮಾಡಬಲ್ಲ ಗುರುವಿನ ಬಳಿಗೆ ಹೋಗಬೇಕು.[1] ಆ (ಗುರುವು) ಶ್ರೋತ್ರಿಯನೂ ಪಾಪರಹಿತನೂ ಕಾಮದ ಹೊಡೆತವಿಲ್ಲದವನೂ[2] ಬ್ರಹ್ಮವನ್ನರಿತವರಲ್ಲಿ ಶ್ರೇಷ್ಠನೂ ಆಗಿರಬೇಕು ; ಬ್ರಹ್ಮದಲ್ಲಿಯೇ ಉಪರತಿಯನ್ನು ಹೊಂದಿ ಒಂದಿಷ್ಟೂ ಉಳಿಯದಂತೆ ಕಟ್ಟಿಗೆಯನ್ನೆಲ್ಲ ಸುಟ್ಟಿರುವ ಬೆಂಕಿಯಂತೆ ಶಾಂತನಾಗಿರಬೇಕು. ಯಾವ ನಿಮಿತ್ತವೂ ಇಲ್ಲದೆ ದಯಾಸಮುದ್ರನಾಗಿ ನಮಸ್ಕರಿಸಿದ ಸಜ್ಜನರಿಗೆ ಬಂಧುವಾಗಿರಬೇಕು. ಅಂಥ ಗುರುವನ್ನು ನಮ್ರನಾಗಿ ಆಶ್ರಯಿಸಿ ಸೇವಿಸುವದರ ಮೂಲಕ ಆರಾಧನೆಮಾಡಿ[3] ಅವನು ಪ್ರಸನ್ನನಾದ ಬಳಿಕ ಹತ್ತಿರಕ್ಕೆ ಬಂದು ತಾನು ತಿಳಿಯಬೇಕೆಂಬುದನ್ನು ಕೇಳಬೇಕು.

## ಶಿಷ್ಯನ ಪ್ರಶ್ನೆ

ಸ್ವಾಮಿನ್ನಮಸ್ತೇ ನತಲೋಕಬನ್ಧೋ
ಕಾರುಣ್ಯಸಿನ್ಧೋ ಪತಿತಂ ಭವಾಬ್ಧೌ
ಮಾಮುದ್ಧರಾತ್ಮೀಯಕಟಾಕ್ಷದೃಷ್ಟ್ಯಾ
ಋಜ್ವ್ಯಾತಿಕಾರುಣ್ಯಸುಧಾಭಿವೃಷ್ಟ್ಯಾ ||೩೫||

೩೫. 'ಸ್ವಾಮಿಯೆ, ನಿನಗೆ ನಮಸ್ಕಾರ! ನಮಸ್ಕರಿಸುವ ಜನರಿಗೆ ಬಂಧುವಾದವನೆ, ಕರುಣಾಸಾಗರನೆ, ಸಂಸಾರಸಮುದ್ರದಲ್ಲಿ ಬಿದ್ದಿರುವ ನನ್ನನ್ನು ಕರುಣಾಮೃತವನ್ನು ಮಳೆಗರೆಯುವ ನಿನ್ನ ಸರಳವಾದ ಕಟಾಕ್ಷದೃಷ್ಟಿಯಿಂದ ಉದ್ಧಾರಮಾಡಬೇಕು.

ದುರ್ವಾರಸಂಸಾರದವಾಗ್ನಿತಪ್ತಂ
ದೋಧೂಯಮಾನಂ ದುರದೃಷ್ಟವಾತೈಃ ।
ಭೀತಂ ಪ್ರಪನ್ನಂ ಪರಿಪಾಹಿ ಮೃತ್ಯೋಃ
ಶರಣ್ಯಮನ್ಯಂ ಯದಹಂ ನ ಜಾನೇ ||೩೬||

1. ಮುಂ. ೧-೨-೧೨ ರ ಸೂಚನೆ.    2. ಬೃ. ೪-೪-೨೩ರ ಸೂಚನೆ.

3. ಪ್ರಣಾಮ, ಸೇವೆ- ಮುಂತಾದವುಗಳೇ ಗುರುವಿನ ಆರಾಧನೆ ಎಂದು ಅಭಿಪ್ರಾಯ. ಶಂ. ಗೀ. ೪-೩೪ನ್ನು ನೋಡಿ.

೩೬. 'ನಿವಾರಿಸಲಸದಳವಾದ ಸಂಸಾರದ ಕಾಡುಗಿಚ್ಚಿನಿಂದ ಬೆಂದ ದುರದೃಷ್ಟದ ಬಿರುಗಾಳಿಗಳ ಹೊಡೆತಕ್ಕೆ ಸಿಕ್ಕಿ ಒದ್ದಾಡುತ್ತಾ ಭೀತನಾಗಿ (ನಿನ್ನನ್ನು) ಮೊರೆಹೊಕ್ಕಿರುವ ನನ್ನನ್ನು ಮೃತ್ಯುವಿನಿಂದ ಕಾಪಾಡಬೇಕು; ಏಕೆಂದರೆ ಮತ್ತೊಬ್ಬ ರಕ್ಷಕನನ್ನು ನಾನು ಅರಿಯೆನು.

ಶಾನ್ತಾ ಮಹಾನ್ತೋ ನಿವಸನ್ತಿ ಸನ್ತೋ
ವಸನ್ತವಲ್ಲೋಕಹಿತಂ ಚರನ್ತಃ ।
ತೀರ್ಣಾಃ ಸ್ವಯಂ[1] ಭೀಮಭವಾರ್ಣವಂ ಜನಾ-
ನಹೇತುನಾನ್ಯಾನಪಿ ತಾರಯನ್ತಃ ॥೩೭॥

೩೭. 'ಭಯಂಕರವಾದ ಸಂಸಾರಸಾಗರವನ್ನು ತಾವೂ ದಾಟಿ[2] ಯಾವದೊಂದು ಕಾರಣವನ್ನೂ ಬಯಸದೆ ಮಿಕ್ಕವರನ್ನೂ ದಾಟಿಸುವ ಶಾಂತರೂ ಮಹಾಂತರೂ ಆದ ಸತ್ಪುರುಷರು ವಸಂತಋತುವಿನಂತೆ ಲೋಕಹಿತವನ್ನೇ ಮಾಡುತ್ತಾ ಇರುತ್ತಾರೆ.

ಅಯಂ ಸ್ವಭಾವಃ ಸ್ವತ ಏವ ಯತ್ಪರ-
ಶ್ರಮಾಪನೋದಪ್ರವಣಂ[3] ಮಹಾತ್ಮನಾಮ್ ।
ಸುಧಾಂಶುರೇಷ ಸ್ವಯಮರ್ಕಕರ್ಕಶ-
ಪ್ರಭಾಭಿತಪ್ತಾಮವತಿ ಕ್ಷಿತಿಂ ಕಿಲ ॥೩೮॥

೩೮. 'ಮತ್ತೊಬ್ಬರ ಆಯಾಸವನ್ನು ತೊಲಗಿಸುವದರಲ್ಲಿ ತಾವೇ ತೊಡಗುವದೆಂಬಿದು ಮಹಾತ್ಮರ ಸ್ವಭಾವವು. ಸೂರ್ಯನ ಪ್ರಚಂಡವಾದ ಕಿರಣಗಳಿಂದ ಬೆಂದಿರುವ ಭೂಮಿಯನ್ನು ಈ ಚಂದ್ರನು ತಾನೇ ಕಾಪಾಡುತ್ತಾನಲ್ಲವೆ ?

ಬ್ರಹ್ಮಾನನ್ದರಸಾನುಭೂತಿಕಲಿತೈಃ ಪೂತೈಃ ಸುಶೀತೈಃ ಸಿತೈ-
ರ್ಯುಷ್ಮದ್ವಾಕ್ಕಲಶೋಜ್ಝಿತೈಃ ಶ್ರುತಿಸುಖೈರ್ವಾಕ್ಯಾಮೃತೈಃ ಸೇಚಯ ।
ಸಂತಪ್ತಂ ಭವತಾಪದಾವದಹನಜ್ವಾಲಾಭಿರೇನಂ ಪ್ರಭೋ
ಧನ್ಯಾಸ್ತೇ ಭವದೀಕ್ಷಣಕ್ಷಣಗತೇಃ ಪಾತ್ರೀಕೃತಾಃ ಸ್ವೀಕೃತಾಃ ॥೩೯॥

೩೯. 'ಪ್ರಭುವೆ, ಸಂಸಾರತಾಪತ್ರಯವೆಂಬ ಕಾಡುಗಿಚ್ಚಿನ ಉರಿಗಳಿಂದ ಬೆಂದು ಬೆಂಡಾಗಿರುವ ಈ (ನನ್ನ) ಮೇಲೆ ಬ್ರಹ್ಮಾನಂದರಸಾನುಭವದಿಂದ

1. ಶಂ. ಗೀ. ೮-೬೮.

2. ಸಾಧಕನು ತಾನೇ ತತ್ತ್ವವನ್ನರಿಯನು; ಆದ್ದರಿಂದ ಉಪದೇಶಮಾಡುವದಕ್ಕೆ ತಕ್ಕ ಗುರುವಾಗಲಾರನು. ಸಿದ್ಧನಾದ ಜ್ಞಾನಿಯೇ ಉಪದೇಶಮಾಡಬಲ್ಲನು ಎಂದು ಭಾವ.

3. [illegible]

ಕೂಡಿ ಪವಿತ್ರವಾಗಿರುವ ಕಡುತಂಪಿನ ನಿರ್ಮಲವಾದಂಥ ತಮ್ಮ ವಾಕ್ಕೆಂಬ ಕಲಶದಿಂದ ಹೊರಟು ಕಿವಿಗೆ ಸುಖವನ್ನು ಕೊಡುವ ವಾಕ್ಯಾಮೃತಗಳನ್ನು ಚಿಮುಕಿಸಿ. ತಮ್ಮ ನೋಟದ ಆನಂದದ ಪ್ರಾಪ್ತಿಗೆ ಪಾತ್ರರಾಗಿ (ತಮ್ಮಿಂದ) ಸ್ವೀಕೃತರಾಗುವವರೇ ಧನ್ಯರು.

ಕಥಂ ತರೇಯಂ ಭವಸಿನ್ಧುಮೇತಂ
ಕಾ ವಾ ಗತಿರ್ಮೇ ಕತಮೋಽಸ್ತ್ಯುಪಾಯಃ ।
ಜಾನೇ ನ ಕಿಂಚಿತ್ ಕೃಪಯಾವ ಮಾಂ ಭೋ[1]
ಸಂಸಾರದುಃಖಕ್ಷತಿಮಾತನುಷ್ವ ॥೪೦॥

೪೦. 'ಈ ಸಂಸಾರವೆಂಬ ಕಡಲನ್ನು ಹೇಗೆ ದಾಟಿಯೇನು ? ನನಗೆ ಗತಿಯಾದರೂ ಯಾವದು ? (ಇದಕ್ಕೆ) ಉಪಾಯವು ಯಾವದಿದೆ ?–(ಇದು) ಯಾವದನ್ನೂ ನಾನರಿಯೆನು. ಎಲೈ ( ಗುರುವೆ ), ನನ್ನನ್ನು ಕೃಪೆಯಿಂದ ಕಾಪಾಡು ; ಸಂಸಾರದುಃಖದ ಕ್ಷಯವನ್ನು ಏರ್ಪಡಿಸು.'

## ಆಚಾರ್ಯನು ಶಿಷ್ಯನನ್ನು ಉದ್ಧಾರಮಾಡಬೇಕು

ತಥಾ ವದನ್ತಂ ಶರಣಾಗತಂ ಸ್ವಂ
ಸಂಸಾರದಾವಾನಲತಾಪತಪ್ತಮ್ ।
ನಿರೀಕ್ಷ್ಯ ಕಾರುಣ್ಯರಸಾರ್ದ್ರದೃಷ್ಟ್ಯಾ[2]
ದದ್ಯಾದಭೀತಿಂ ಸಹಸಾ ಮಹಾತ್ಮಾ ॥೪೧॥

೪೧. ಮಹಾತ್ಮನಾದ (ಗುರುವು) ಸಂಸಾರದ ಕಾಡುಗಿಚ್ಚಿನ ಬೇಗೆಯಿಂದ ಬೆಂದು ತನ್ನನ್ನು ಶರಣುಹೊಂದಿರುವ, ಹೀಗೆಂದು ಹೇಳುತ್ತಿರುವ (ಶಿಷ್ಯನಿಗೆ) ಕರುಣಾರಸದಿಂದ ತೋಯ್ದ ದೃಷ್ಟಿಯಿಂದ ನೋಡಿ ಕೂಡಲೆ ಅಭಯವನ್ನು ಕೊಡಬೇಕು.[3]

ವಿದ್ವಾನ್ ಸ ತಸ್ಮಾ ಉಪಸತ್ತಿಮೀಯುಷೇ
ಮುಮುಕ್ಷವೇ ಸಾಧು ಯಥೋಕ್ತಕಾರಿಣೇ ।
ಪ್ರಶಾನ್ತಚಿತ್ತಾಯ ಶಮಾನ್ವಿತಾಯ
ತತ್ತ್ವೋಪದೇಶಂ ಕೃಪಯೈವ ಕುರ್ಯಾತ್ ॥೪೨॥

1. ಇದು ಗೋ॥ ಪಾಠ. "ಪ್ರಭೋ" ಎಂದು ನಿ॥ ವಾ॥ ಪಾಠಗಳು.

2. 'ಸುಧಾಭಿವೃಷ್ಟ್ಯಾ' ಎಂದೂ ಪಾಠವುಂಟು; ಅದಕ್ಕಿಂತ ಈಗ ಕೊಟ್ಟಿರುವ ಪಾಠವೇ ಮೇಲು.

3. ಶಂ. ಗೀ. ೨-೧.

೪೨. (ಹೀಗೆ) ಉಪಸತ್ತಿಯನ್ನು ಪಡೆದಿರುವ[1] ಮುಮುಕ್ಷುವೂ ಹೇಳಿದಂತೆ ಸರಿಯಾಗಿ ನಡೆಯುವವನೂ ಪ್ರಶಾಂತಚಿತ್ತವುಳ್ಳವನೂ ಶಮೆಯಿಂದ ಕೂಡಿದವನೂ ಆಗಿರುವ ಆತನಿಗೆ ಆ ಜ್ಞಾನಿಯು ದಯೆಯಿಂದಲೇ ತತ್ತ್ವೋಪದೇಶವನ್ನು ಮಾಡಬೇಕು.[2]

## ಮುಕ್ತಿಗೆ ಉಪಾಯವಿದೆ

ಮಾ ಭೈಷ್ಟ ವಿದ್ವಂಸ್ತವ ನಾಸ್ತ್ಯಪಾಯಃ
  ಸಂಸಾರಸಿನ್ಧೋಸ್ತರಣೇಽಸ್ತ್ಯುಪಾಯಃ ।
ಯೇನೈವ ಯಾತಾ ಯತಯೋಽಸ್ಯ ಪಾರಂ
  ತಮೇವ ಮಾರ್ಗಂ ತವ ನಿರ್ದಿಶಾಮಿ ॥೪೩॥

೪೩. ಅಯ್ಯ ವಿವೇಕಿಯೆ, ಅಂಜದಿರು. ನಿನಗೆ (ಯಾವ) ಅಪಾಯವೂ ಇಲ್ಲ. ಸಂಸಾರಸಮುದ್ರವನ್ನು ದಾಟುವದಕ್ಕೆ ಉಪಾಯವಿದೆ. ಯತಿಗಳು ಇದರ ಆಚೆಯ ದಡವನ್ನು ಯಾವ (ಮಾರ್ಗದಿಂದ) ಹೊಂದಿರುವರೋ ಅದನ್ನೇ ನಿನಗೆ ತೋರಿಸಿಕೊಡುತ್ತೇನೆ.

ಅಸ್ತ್ಯುಪಾಯೋ ಮಹಾನ್ ಕಶ್ಚಿತ್ ಸಂಸಾರಭಯನಾಶನಃ ।
ಯೇನ[3] ತೀರ್ತ್ವಾ ಭವಾಮ್ಭೋಧಿಂ ಪರಮಾನನ್ದಮಾಪ್ಸ್ಯಸಿ ॥೪೪॥

೪೪. ಸಂಸಾರದ ಭಯವನ್ನು ಈಡಾಡುವ ಒಂದಾನೊಂದು ದೊಡ್ಡ ಉಪಾಯವಿರುತ್ತದೆ. ಅದರಿಂದ (ನೀನು) ಸಂಸಾರಸಾಗರವನ್ನು ದಾಟಿ ಪರಮಾನಂದವನ್ನು ಹೊಂದಬಹುದು.

1. ಶಿಷ್ಯನಾಗಿ ಸೇವೆಗೆ ಸಿದ್ಧನಿರುವ.

2. ೪೨-೪೩ ಈ ಎರಡು ಶ್ಲೋಕಗಳ ಅಭಿಪ್ರಾಯವು ಮುಂಡಕ ೧-೨-೧೨, ೧೩ ಈ ಎರಡು ಮಂತ್ರಗಳ ಅಭಿಪ್ರಾಯವನ್ನು ಅಡಕಮಾಡಿಕೊಂಡಿದೆ. ಎರಡನೆಯ ಶ್ಲೋಕದಲ್ಲಿ ಉಪನಿಷತ್ತಿನ ಶಬ್ದಗಳೇ ವಿಶೇಷವಾಗಿವೆ. ಪ್ರಶಾಂತಚಿತ್ತನು ಎಂದರೆ ದರ್ಪವೇ ಮುಂತಾದ ಚಿತ್ತದೋಷಗಳಿಲ್ಲದವನು ; ಶಮಾನ್ವಿತನು ಎಂದರೆ ಮನಸ್ಸನ್ನೂ ಬಾಹ್ಯೇಂದ್ರಿಯಗಳನ್ನೂ ಹಿಡಿತದಲ್ಲಿಟ್ಟುಕೊಂಡಿರುವವನು. ಮುಮುಕ್ಷುವಾದವನು ಸದ್ಗುರುವಿನ ಬಳಿಗೆ ಹೋಗಿ ಉಪದೇಶವನ್ನು ಪಡೆಯಬೇಕು ; ಆತನು ಉಪದೇಶವನ್ನು ಮಾಡಿದರೆ ಜ್ಞಾನವುಂಟಾಗುವದು ಎಂಬುದು ಒಟ್ಟರ್ಥ.

3. 'ತೇನ' ಎಂದು ಸಿ॥ ಪಾ॥ ಅ॥ ; ಇಲ್ಲಿ ನಾವು ಕೊಟ್ಟಿರುವದು ಗೋ॥ ಪಾಠ.

ವೇದಾನ್ತಾರ್ಥವಿಚಾರೇಣ ಜಾಯತೇ ಜ್ಞಾನಮುತ್ತಮಮ್ ।
ತೇನಾತ್ಯನ್ತಿಕಸಂಸಾರದುಃಖನಾಶೋ ಭವತ್ಯನು[1] ॥ ೪೫ ॥

೪೫. ವೇದಾಂತಗಳ[2] ಅರ್ಥವನ್ನು ವಿಚಾರಮಾಡುವದರಿಂದ ಉತ್ತಮವಾದ ಜ್ಞಾನವು ಉಂಟಾಗುತ್ತದೆ. ಆಮೇಲೆ ಸಂಪೂರ್ಣವಾಗಿ ದುಃಖನಾಶವು ಆಗುತ್ತದೆ.

ಶ್ರದ್ಧಾಭಕ್ತಿಧ್ಯಾನಯೋಗಾನ್ ಮುಮುಕ್ಷೋ-
ರ್ಮುಕ್ತೇರ್ಹೇತೂನ್ ವಕ್ತಿ ಸಾಕ್ಷಾಚ್ಛ್ರುತೇರ್ಗೀಃ ।
ಯೋ ವಾ ಏತೇಷ್ವೇವ ತಿಷ್ಠತ್ಯಮುಷ್ಯ
ಮೋಕ್ಷೋಽವಿದ್ಯಾಕಲ್ಪಿತಾದ್ದೇಹಬನ್ಧಾತ್ ॥ ೪೬ ॥

೪೬. ಮುಮುಕ್ಷುವಾದವನಿಗೆ ಶ್ರದ್ಧೆ, ಭಕ್ತಿ, ಧ್ಯಾನಯೋಗ– ಇವುಗಳೇ ಮುಕ್ತಿಗೆ ಕಾರಣವೆಂದು ಸಾಕ್ಷಾತ್ತಾಗಿ ಶ್ರುತಿವಚನವೇ[3] ಹೇಳುತ್ತಿರುವದು. ಯಾವನು ಇವುಗಳಲ್ಲಿಯೇ ನಿಷ್ಠನಾಗಿರುವನೋ ಅವನಿಗೆ ಅವಿದ್ಯೆಯಿಂದ ಕಲ್ಪಿತವಾಗಿರುವ ದೇಹಬಂಧದಿಂದ ಬಿಡುಗಡೆಯಾಗುವದು.

ಅಜ್ಞಾನಯೋಗಾತ್ ಪರಮಾತ್ಮನಸ್ತವ
ಹ್ಯನಾತ್ಮಬನ್ಧಸ್ತತ ಏವ ಸಂಸೃತಿಃ ।
ತಯೋರ್ವಿವೇಕೋದಿತಬೋಧವಹ್ನಿ-
ರಜ್ಞಾನಕಾರ್ಯಂ ಪ್ರದಹೇತ್ ಸಮೂಲಮ್ ॥ ೪೭ ॥

೪೭. ಪರಮಾತ್ಮನಾಗಿರುವ ನಿನಗೆ ಅಜ್ಞಾನದ ಸಂಬಂಧದಿಂದ ಅನಾತ್ಮನ ಬಂಧವಾಗಿರುತ್ತದೆ. ಆದರಿಂದಲೇ ಸಂಸಾರವುಂಟಾಗಿರುತ್ತದೆ. ಈ ಎರಡರ ವಿವೇಕದಿಂದ[4] ಹುಟ್ಟಿದ ಜ್ಞಾನಾಗ್ನಿಯು ಅಜ್ಞಾನಕಾರ್ಯವನ್ನು ಬೇರುಸಹಿತವಾಗಿ[5] ಸುಟ್ಟುಹಾಕಿಬಿಡುತ್ತದೆ.

---

1. ಅಚ್ಚಿನ ಪುಸ್ತಕಗಳಲ್ಲೆಲ್ಲ 'ಅನು' ಎಂದೇ ಪಾಠವಿದೆ. ವಾ॥ ಪಾಠವು ಮಾತ್ರ 'ಅಲಮ್' (ಪೂರ್ತಿಯಾಗಿ) ಎಂದಿದೆ. ಜ್ಞಾನವಾದಮೇಲೂ ಮಾಡತಕ್ಕದ್ದಿದೆ ಎಂಬುದು 'ಅನು' ಎಂಬ ಶಬ್ದದಿಂದ ಸೂಚಿತವಾಗುತ್ತದೆ. ಈ ಪ್ರಕರಣದಲ್ಲಿ ಮುಂದೆ ಹೇಳುವ ವಾಸನಾತ್ಯಾಗವೇ ಮುಂತಾದವನ್ನು ಇದು ಸೂಚಿಸುತ್ತದೆ ಎಂದು ಭಾವಿಸಬಹುದಾಗಿದೆ. ಪೀಠಿಕೆಯನ್ನು ನೋಡಿ.

2. ಉಪನಿಷತ್ತುಗಳ ಎಂದರ್ಥ. ಈ ಗ್ರಂಥದಲ್ಲಿ ಉಪನಿಷತ್ತುಗಳನ್ನೇ ನೇರಾಗಿ ವಿಚಾರಮಾಡದೆ ಇದ್ದರೂ ಅವುಗಳ ಅರ್ಥವನ್ನು ಕುರಿತು ವಿಚಾರವನ್ನು ಮಾಡಿರುತ್ತದೆ.

3. ಕೈ. ೧–೨. ಈ ಶ್ರುತಿಯಲ್ಲಿ ಇವನ್ನು ಜ್ಞಾನಕ್ಕೆ ಸಾಧನವೆಂದು ಹೇಳಿದೆ. ಈ ಪ್ರಕರಣಕರ್ತರಿಗೂ ಅದೇ ಅಭಿಪ್ರೇತ. ಮುಂದೆ ೫೫ನೆಯ ಶ್ಲೋಕವನ್ನು ನೋಡಿ.

4. ಆತ್ಮ, ಅನಾತ್ಮ– ಇವುಗಳನ್ನು ವಿಂಗಡಿಸಿ ಅರಿತುಕೊಳ್ಳುವದರಿಂದ.

5. ಮೂಲಕಾರಣವಾದ ಅಜ್ಞಾನಸಹಿತವಾಗಿ.

# ೨. ವಿಷಯಾವತರಣಿಕೆ

## ಶಿಷ್ಯನ ಪ್ರಶ್ನೆ :

## ಬಂಧವೆಂದರೇನು ? ಆದರಿಂದ ಬಿಡುಗಡೆ ಹೇಗೆ ?

ಶಿಷ್ಯ ಉವಾಚ :

**ಕೃಪಯಾ ಶ್ರೂಯತಾಂ ಸ್ವಾಮಿನ್ ಪ್ರಶ್ನೋಽಯಂ ಕ್ರಿಯತೇ ಮಯಾ**
**ತದುತ್ತರಮಹಂ[1] ಶ್ರುತ್ವಾ ಕೃತಾರ್ಥಃ ಸ್ಯಾಂ ಭವನ್ಮುಖಾತ್ ॥ ೪೮ ॥**

೪೮. ಶಿಷ್ಯನು ಕೇಳಿದನೇನೆಂದರೆ : "ಸ್ವಾಮಿ, ನಾನು ಈ ಪ್ರಶ್ನೆಯನ್ನು ಮಾಡುತ್ತೇನೆ, ದಯವಿಟ್ಟು ಕೇಳಬೇಕು. ಆದರ ಉತ್ತರವನ್ನು ತಮ್ಮ ಮುಖದಿಂದ ಕೇಳಿ ನಾನು ಕೃತಾರ್ಥನಾಗಬೇಕು.

**ಕೋ ನಾಮ ಬನ್ಧಃ ಕಥಮೇಷ ಆಗತಃ**
**ಕಥಂ ಪ್ರತಿಷ್ಠಾಸ್ಯ ಕಥಂ ವಿಮೋಕ್ಷಃ ।**
**ಕೋಽಸಾವನಾತ್ಮಾ ಪರಮಃ ಕ ಆತ್ಮಾ**
**ತಯೋರ್ವಿವೇಕಃ ಕಥಮೇತದುಚ್ಯತಾಮ್ ॥ ೪೯ ॥**

೪೯. "ಬಂಧವೆಂದರೆ ಯಾವದು ? ಅದು ಹೇಗೆ ಬಂದಿರುತ್ತದೆ ? ಅದು ನಿಂತಿರುವದು ಹೇಗೆ ? ಅದರಿಂದ ಬಿಡುಗಡೆ ಹೇಗೆ ಆಗುವದು ? ಅನಾತ್ಮವೆಂದರೆ ಯಾವದು ? ಪರಮಾತ್ಮನೆಂದರೆ ಯಾರು ? ಆವೆರಡನ್ನೂ ವಿವೇಚಿಸುವದು ಹೇಗೆ ? ಇದನ್ನು ಹೇಳಬೇಕು."[2]

## ಗುರುವಿನ ಉತ್ತರ : ಮುಕ್ತಿಗೆ ತಾನೇ ಪ್ರಯತ್ನಿಸಬೇಕು

**ಧನ್ಯೋಽಸಿ ಕೃತಕೃತ್ಯೋಽಸಿ ಪಾವಿತಂ ತೇ ಕುಲಂ ತ್ವಯಾ ।**
**ಯದವಿದ್ಯಾಬನ್ಧಮುಕ್ತ್ಯಾ ಬ್ರಹ್ಮೀಭವಿತುಮಿಚ್ಛಸಿ ॥ ೫೦ ॥**

---

1. 'ಯದುತ್ತರವಮ್' ಎಂದು ಪಾ॥

2. ಶಂ. ಗೀ. ೪–೩ರಲ್ಲಿ "ಕಥಂ ಬನ್ಧಃ ಕಥಂ ಮೋಕ್ಷೋ ವಿದ್ಯಾವಿದ್ಯೇ ಉಭೇ ಚ ಕೇ । ಕ ಆತ್ಮಾ ಕಃ ಪರಾತ್ಮಾ ಚ ತಯೋರೈಕ್ಯಂ ಕಥಂ ವದ ॥" ಎಂಬ ಶ್ಲೋಕವನ್ನು ಉದಾಹರಿಸಿದೆ. ಅದನ್ನೇ ಇಲ್ಲಿ ಪರಾಮರ್ಶಿಸಿದ್ದರೆ 'ಕೋಽಸಾವನಾತ್ಮಾ' ಎಂಬುದಕ್ಕೆ ಬದಲು 'ಕೋಽಸಾವಿಹಾತ್ಮಾ' ಎಂದು ಇರಬೇಕಾಗುವದು. ಅರ್ಥದಲ್ಲಿ 'ಅನಾತ್ಮವೆಂದರೆ' ಎಂಬುದಕ್ಕೆ ಬದಲು 'ಇಲ್ಲಿ ಆತ್ಮವೆಂದರೆ' – ಎಂದು ಇರಬೇಕಾಗುವದು.

೫೦. ನೀನು ಧನ್ಯನು, ಕೃತಕೃತ್ಯನು, ನಿಮ್ಮ ಕುಲವು ನಿನ್ನಿಂದ ಪವಿತ್ರವಾಯಿತು. ಏಕೆಂದರೆ ಅವಿದ್ಯಾಬಂಧದಿಂದ ಬಿಡುಗಡೆಯಾಗಿ ಬ್ರಹ್ಮವಾಗಬೇಕೆಂದು ಇಚ್ಛಿಸುತ್ತಿರುವೆ.

ಋಣಮೋಚನಕರ್ತಾರಃ ಪಿತುಃ ಸನ್ತಿ ಸುತಾದಯಃ ।
ಬನ್ಧಮೋಚನಕರ್ತಾ ತು ಸ್ವಸ್ಮಾದನ್ಯೋ ನ ಕಶ್ಚನ ॥ ೫೧ ॥

೫೧. ತಂದೆಯ ಋಣವನ್ನು ತೀರಿಸುವದಕ್ಕೆ ಮಗನೇ ಮುಂತಾದವರು ಇರುತ್ತಾರೆ. ಆದರೆ ಬಂಧದಿಂದ ಬಿಡುಗಡೆಮಾಡಿಸುವವನು ಮಾತ್ರ ತನ್ನನ್ನು ಬಿಟ್ಟರೆ ಮತ್ತೆ ಯಾರೂ ಇರುವದಿಲ್ಲ.

ಮಸ್ತಕನ್ಯಸ್ತಭಾರಾದೇರ್ದುಃಖಮನ್ಯೈರ್ನಿವಾರ್ಯತೇ ।
ಕ್ಷುಧಾದಿಕೃತದುಃಖಂ ತು ವಿನಾ ಸ್ವೇನ ನ ಕೇನಚಿತ್ ॥ ೫೨ ॥

೫೨. ತಲೆಯಮೇಲಿಟ್ಟುಕೊಂಡ ಹೊರೆಯೇ ಮುಂತಾದವುಗಳ ದುಃಖವನ್ನು ಮತ್ತೊಬ್ಬರು ಹೋಗಲಾಡಿಸಬಹುದು. ಹಸಿವು ಮುಂತಾದವುಗಳಿಂದಾದ ದುಃಖವನ್ನು ಮಾತ್ರ ತನ್ನನ್ನು ಬಿಟ್ಟರೆ ಮತ್ತೆ ಯಾರಿಂದಲೂ ಹೋಗಲಾಡಿಸುವದಕ್ಕಾಗುವದಿಲ್ಲ.[1]

ಪಥ್ಯಮೌಷಧಸೇವಾ ಚ ಕ್ರಿಯತೇ ಯೇನ ರೋಗಿಣಾ ।
ಆರೋಗ್ಯಸಿದ್ಧಿರ್ದೃಷ್ಟಾಸ್ಯ ನಾನ್ಯಾನುಷ್ಠಿತಕರ್ಮಣಾ ॥ ೫೩ ॥

೫೩. ಯಾವ ರೋಗಿಯು (ತಾನೇ) ಪಥ್ಯವನ್ನೂ ಔಷಧಸೇವನೆಯನ್ನೂ ಮಾಡುವನೋ ಅವನಿಗೆ ಆರೋಗ್ಯವು ದೊರಕುವದು ಕಂಡುಬರುತ್ತದೆ. ಮತ್ತೊಬ್ಬರು ಮಾಡಿದ ಕೆಲಸದಿಂದ (ಅದು ಸಿಕ್ಕುವದು ಕಂಡು)ಬಂದಿಲ್ಲ.[2]

ವಸ್ತುಸ್ವರೂಪಂ ಸ್ಫುಟಬೋಧಚಕ್ಷುಷಾ
ಸ್ವೇನೈವ ವೇದ್ಯಂ ನನು ಪಣ್ಡಿತೇನ ।
ಚನ್ದ್ರಸ್ವರೂಪಂ ನಿಜಚಕ್ಷುಷೈವ
ಜ್ಞಾತವ್ಯಮನ್ಯೈರವಗಮ್ಯತೇ ಕಿಮ್ ॥ ೫೪ ॥

೫೪. ವಿವೇಕಿಯಾದ ಪುರುಷನು ಉತ್ತಮವಾದ ಜ್ಞಾನಚಕ್ಷುಸ್ಸಿನಿಂದ ತಾನೇ ವಸ್ತುಸ್ವರೂಪವನ್ನು ತಿಳಿದುಕೊಳ್ಳಬೇಕು. ಚಂದ್ರನ ಸ್ವರೂಪವನ್ನು

1. ತಾನೇ ಭೋಜನಾದಿಗಳನ್ನು ಮಾಡಿ ಹಸಿವು ಮುಂತಾದವನ್ನು ತೀರಿಸಿಕೊಳ್ಳಬೇಕು.

2. ಶಂ, ಗೀ. ೬-೫.

3. ಈ ಗೋ॥ ಪಾಠವೇ 'ನ ತು' ಎಂಬ ಪಾಠಕ್ಕಿಂತ ಮೇಲು.

ತನ್ನ ಕಣ್ಣಿನಿಂದಲೇ ತಿಳಿದುಕೊಳ್ಳಬೇಕಲ್ಲದೆ ಮತ್ತೊಬ್ಬರ ಮೂಲಕ ತಿಳಿದು ಕೊಳ್ಳಲಾದೀತೇನು ?

ಅವಿದ್ಯಾಕಾಮಕರ್ಮಾದಿಪಾಶಬನ್ಧಂ ವಿಮೋಚಿತುಮ್ ।
ಕಃ ಶಕ್ನುಯಾದ್ ವಿನಾಽಽತ್ಮಾನಂ ಕಲ್ಪಕೋಟಿಶತೈರಪಿ ॥ ೫೫ ॥

೫೫. ಅವಿದ್ಯೆ, ಕಾಮ, ಕರ್ಮ-ಮುಂತಾದವುಗಳ[1] ಬಲೆಯ ಕಟ್ಟನ್ನು ಕಳಚಿಕೊಳ್ಳುವದಕ್ಕೆ ನೂರು ಕೋಟಿ ಕಲ್ಪಗಳಾದರೂ ತನ್ನನ್ನು ಬಿಟ್ಟರೆ ಮತ್ತೆ ಯಾರಿಂದ ತಾನೆ ಆದೀತು ?

## ಬ್ರಹ್ಮಾತ್ಮೈಕ್ಯಜ್ಞಾನವೇ ಮೋಕ್ಷಕ್ಕೆ ಸಾಧನ

ನ ಯೋಗೇನ ನ ಸಾಂಖ್ಯೇನ ಕರ್ಮಣಾ ನೋ ನ ವಿದ್ಯಯಾ ।
ಬ್ರಹ್ಮಾತ್ಮೈಕತ್ವಬೋಧೇನ ಮೋಕ್ಷಃ ಸಿಧ್ಯತಿ ನಾನ್ಯಥಾ ॥ ೫೬ ॥

೫೬. ಮೋಕ್ಷವು ಯೋಗದಿಂದ[2] ಸಿದ್ಧಿಯಾಗಲಾರದು. ಸಾಂಖ್ಯದಿಂದ ಸಿದ್ಧಿಯಾಗಲಾರದು ; ಕರ್ಮದಿಂದಲಾಗಲಿ ಉಪಾಸನೆಯಿಂದಲಾಗಲಿ[3] ಸಿದ್ಧಿಸ ಲಾರದು ಬ್ರಹ್ಮಾತ್ಮೈಕತ್ವಜ್ಞಾನದಿಂದಲೇ ಹೊರತು ಮತ್ತೆ ಯಾವ ಪ್ರಕಾರ ದಿಂದಲೂ[4] ಅದು ಸಿದ್ಧಿಸದು.

ವೀಣಾಯಾ ರೂಪಸೌನ್ದರ್ಯಂ ತನ್ತ್ರೀವಾದನಸೌಷ್ಠವಮ್ ।
ಪ್ರಜಾರಞ್ಜನಮಾತ್ರಂ ತನ್ನ ಸಾಮ್ರಾಜ್ಯಾಯ ಕಲ್ಪತೇ ॥ ೫೭ ॥

೫೭. ವೀಣೆಯ ರೂಪಸೌಂದರ್ಯವೂ[5] ತಂತಿಯ(ವಾದ್ಯವ)ನ್ನು ಬಾರಿಸುವ ಸೊಗಸೂ ಜನ(ಮನೋ)ರಂಜನೆಗೇ ಹೊರತು ಸಾಮ್ರಾಜ್ಯಕ್ಕೇನೂ ಕಾರಣವಾಗದಷ್ಟೆ.

1. ದೇಹಧಾರಣೆ, ಫಲಭೋಗ – ಮುಂತಾದವುಗಳಿಂದ.

2 ಹಠಯೋಗವೇ ಮುಂತಾದದ್ದರಿಂದ. ಶಂ. ಗೀ. ೪–೧೬, ೬–೨೯,

3. ಇಲ್ಲಿ ವಿದ್ಯೆಯೆಂದರೆ ಉಪಾಸನೆಯೆಂದೇ ಅರ್ಥವ ಾಡಬೇಕು. ಶಂ. ಗೀ. ೩–೧೬ ನೋಡಿ.

4. ಯೋಗ, ಸಾಂಖ್ಯ, ಕರ್ಮ, ಸ್ತೋತ್ರ, ಜಪ– ಮುಂತಾದ ಉಪಾಯಗಳಿಂದ.

5. ಈ ಶ್ಲೋಕವನ್ನು ಬೇರೊಂದು ಬಗೆಯಿಂದ ಅನ್ವಯಿಸಿ ಹೀಗೆ ಅರ್ಥವನ್ನು ಮಾಡಬಹುದು . ರೂಪಸೌಂದರ್ಯವೂ ವೀಣೆಯ ತಂತಿಯನ್ನು ನುಡಿಸುವ ಜಾಣ್ಮೆಯೂ ಜನರನ್ನು ರಂಜನೆಮಾಡುವದಕ್ಕೆ ಮಾತ್ರ ಸಾಧನವು ; ಅದು ಸಾಮ್ರಾಜ್ಯಕ್ಕೇನೂ ಸಾಧಕವಲ್ಲ.

ವಾಗ್ವೈಖರೀ ಶಬ್ದಝರೀ ಶಾಸ್ತ್ರವ್ಯಾಖ್ಯಾನಕೌಶಲಮ್ ।
ವೈದುಷ್ಯಂ ವಿದುಷಾಂ ತದ್ವದ್ಭುಕ್ತಯೇ ನ ತು ಮುಕ್ತಯೇ ॥ ೫೮ ॥

೫೮. ಇದರಂತೆ ವಿದ್ವಾಂಸರ ವಾಕ್ಕಿನ ಲಾಲಿತ್ಯವೂ ಶಬ್ದಗಳು ಪ್ರವಾಹರೂಪವಾಗಿ ಹರಿದುಬರುವದೂ ಶಾಸ್ತ್ರವನ್ನು ವಿವರಿಸುವದರಲ್ಲಿರುವ ಜಾಣತನವೂ ಪಾಂಡಿತ್ಯವೂ ಭೋಗಕ್ಕೆ ಕಾರಣವಾದೀತೇ ಹೊರತು ಮುಕ್ತಿಗೆ ಸಾಧನವಾಗಲಾರದು.[1]

ಅವಿಜ್ಞಾತೇ ಪರೇ ತತ್ತ್ವೇ ಶಾಸ್ತ್ರಾಧೀತಿಸ್ತು ನಿಷ್ಫಲಾ ।
ವಿಜ್ಞಾತೇ ಚ[2] ಪರೇ ತತ್ತ್ವೇ ಶಾಸ್ತ್ರಾಧೀತಿಸ್ತು ನಿಷ್ಫಲಾ ॥ ೫೯ ॥

೫೯. ಪರತತ್ತ್ವವನ್ನು ಅರಿತುಕೊಳ್ಳದಿದ್ದರೆ ಶಾಸ್ತ್ರಾಧ್ಯಯನವು ನಿಷ್ಫಲವು ; ಪರತತ್ತ್ವವನ್ನು ಅರಿತುಕೊಂಡರೂ ಶಾಸ್ತ್ರಾಧ್ಯಯನವು ನಿಷ್ಫಲವು.[3]

ಶಬ್ದಜಾಲಂ ಮಹಾರಣ್ಯಂ ಚಿತ್ತಭ್ರಮಣಕಾರಣಮ್ ।
ಅತಃ ಪ್ರಯತ್ನಾಜ್ಜ್ಞಾತವ್ಯಂ ತತ್ತ್ವಜ್ಞಾತ್ ತತ್ತ್ವಮಾತ್ಮನಃ ॥ ೬೦ ॥

೬೦. ಶಬ್ದಜಾಲವು ಚಿತ್ತವನ್ನು ಭ್ರಾಂತಿಗೊಳಿಸುವದಕ್ಕೆ ಕಾರಣವಾಗಿರುವ ಒಂದು ದೊಡ್ಡ ಅರಣ್ಯವು.[4] ಆದ್ದರಿಂದ ತತ್ತ್ವವನ್ನು ಬಲ್ಲವರಿಂದ[5] ಪ್ರಯತ್ನಪೂರ್ವಕವಾಗಿ ಆತ್ಮತತ್ತ್ವವನ್ನು ಅರಿತುಕೊಳ್ಳಬೇಕು.

ಅಜ್ಞಾನಸರ್ಪದಷ್ಟಸ್ಯ ಬ್ರಹ್ಮಜ್ಞಾನೌಷಧಂ ವಿನಾ ।
ಕಿಮು ವೇದೈಶ್ಚ ಶಾಸ್ತ್ರೈಶ್ಚ ಕಿಮು ಮನ್ತ್ರೈಃ ಕಿಮೌಷಧೈಃ ॥ ೬೧ ॥

೬೧. ಅಜ್ಞಾನವೆಂಬ ಹಾವು ಕಡಿದವನಿಗೆ ಬ್ರಹ್ಮಜ್ಞಾನವೆಂಬ ಔಷಧವಲ್ಲದೆ ವೇದಗಳಿಂದಲೂ ಶಾಸ್ತ್ರಗಳಿಂದಲೂ ಏನು ಪ್ರಯೋಜನ ? ಮಂತ್ರಗಳಿಂದೇನು ? ಔಷಧಗಳಿಂದೇನು ?

## ಅಪರೋಕ್ಷಾನುಭವವೇ ಕಾರ್ಯಕಾರಿ

ನ ಗಚ್ಛತಿ ವಿನಾ ಪಾನಂ ವ್ಯಾಧಿರೌಷಧಶಬ್ದತಃ ।
ವಿನಾಪರೋಕ್ಷಾನುಭವಂ ಬ್ರಹ್ಮಶಬ್ದೈರ್ನ ಮುಚ್ಯತೇ ॥ ೬೨ ॥

---

1. ಮುಕ್ತಿಯು ಜ್ಞಾನವೊಂದನ್ನೇ ಬಯಸುತ್ತದೆ ; ಬರಿಯ ಶಾಸ್ತ್ರಪಾಂಡಿತ್ಯವು ಅದನ್ನು ಕೊಡಲಾರದು.
2. 'ವಿಜ್ಞಾತೇಽಪಿ' ವಾ ॥
3. ಶಾಸ್ತ್ರಾಧ್ಯಯನಕ್ಕೆ ಪರತತ್ತ್ವಜ್ಞಾನವೇ ಫಲವು, ಆದರಿಂದ ಮತ್ತೇನೂ ಆಗಬೇಕಾದದ್ದಿರುವದಿಲ್ಲ.
4. ಕಾಡಿನಲ್ಲಿ ದಾರಿತಪ್ಪಿದಂತೆ ಮನಸ್ಸು ಅದರಲ್ಲಿ ಗಲಿಬಿಲಿಯಾಗುತ್ತದೆ.
5. ತಾನೇ ಶಾಸ್ತ್ರಗಳ ಮೂಲಕ ಅರಿತುಕೊಳ್ಳುವದಕ್ಕೆ ಆಗಲಾರದು.

೬೨. ಮದ್ದನ್ನು ಕುಡಿಯದೆ (ಬರಿಯ) ಔಷಧವೆಂಬ ಶಬ್ದದಿಂದ ರೋಗವು ಹೋಗಲಾರದು.[1] (ಅದರಂತೆ) ಅಪರೋಕ್ಷಾನುಭವವಿಲ್ಲದೆ 'ಬ್ರಹ್ಮ'ವನ್ನು ಹೇಳುವ ಶಬ್ದಗಳ(ನ್ನುಚ್ಚರಿಸಿದ ಮಾತ್ರ)ದಿಂದ ಮುಕ್ತನಾಗುವದಿಲ್ಲ.

ಅಕೃತ್ವಾ ದೃಶ್ಯವಿಲಯಮಜ್ಞಾತ್ವಾ ತತ್ತ್ವಮಾತ್ಮನಃ ।
ಬಾಹ್ಯಶಬ್ದೈಃ ಕುತೋ ಮುಕ್ತಿರುಕ್ತಿಮಾತ್ರಫಲೈರ್ನೃಣಾಮ್ ॥ ೬೩ ॥

೬೩. ದೃಶ್ಯ (ಪ್ರಪಂಚದ) ವಿಲಯವನ್ನು ಮಾಡಿಕೊಳ್ಳದೆ,[2] ಆತ್ಮನ ತತ್ತ್ವವನ್ನು ಅರಿತುಕೊಳ್ಳದೆ ಉಚ್ಚಾರಣೆಯು ಮಾತ್ರವೇ ಫಲವಾಗಿರುವ ಹೊರಗಿನ ಶಬ್ದಗಳಿಂದ ಮುಕ್ತಿಯು ಹೇಗಾದೀತು?[3]

ಅಕೃತ್ವಾ ಶತ್ರುಸಂಹಾರಮಗತ್ವಾಖಿಲಭೂಶ್ರಿಯಮ್ ।
ರಾಜಾಹಮಿತಿ ಶಬ್ದಾನ್ನೋ ರಾಜಾ ಭವಿತುಮರ್ಹತಿ ॥ ೬೪ ॥

೬೪. ಶತ್ರುಗಳ ಸಂಹಾರವನ್ನು ಮಾಡದೆ ಅಖಿಲಭೂಮಂಡಲದ ಸಂಪತ್ತನ್ನು ಪಡೆದುಕೊಳ್ಳದೆ 'ನಾನು ರಾಜನು' ಎಂಬ (ಬರಿಯ) ಮಾತಿನಿಂದಲೇ ರಾಜನಾಗಲಾರನು.

ಆಪ್ತೋಕ್ತಿಂ ಖನನಂ ತಥೋಪರಿಶಿಲಾದ್ಯುತ್ಕರ್ಷಣಂ[4] ಸ್ವೀಕೃತಿಂ
ನಿಕ್ಷೇಪಃ ಸಮಪೇಕ್ಷತೇ ನ ಹಿ ಬಹಿಃ ಶಬ್ದೈಸ್ತು ನಿರ್ಗಚ್ಛತಿ ।
ತದ್ವದ್ಬ್ರಹ್ಮವಿದೋಪದೇಶಮನನಧ್ಯಾನಾದಿಭಿರ್ಲಭ್ಯತೇ
ಮಾಯಾಕಾರ್ಯತಿರೋಹಿತಂ ಸ್ವಮಮಲಂ
ತತ್ತ್ವಂ ನ ದುರ್ಯುಕ್ತಿಭಿಃ ॥ ೬೫ ॥

೬೫. ಆಪ್ತರು ಹೇಳಿದ ಮಾತು, ಅಗೆಯುವದು, ಮೇಲಿನ ಹಾಸುಗಲ್ಲು ಮುಂತಾದವನ್ನು ಎತ್ತಿಹಾಕುವದು, (ನಿಧಿಯನ್ನು) ತೆಗೆದುಕೊಳ್ಳುವದು – ಇಷ್ಟು ಆಗಬೇಕಲ್ಲದೆ ಬರಿಯ ಹೊರಗಿನ ಮಾತುಗಳಿಂದ ನಿಧಿಯು ಹೊರಕ್ಕೆ

---

1. ಶಂ. ಗೀ. ೬– .

2. ಶಂ. ಗೀ. ೧೪–೧.

3. ಕೇವಲಶಬ್ದಜ್ಞಾನದಿಂದಲೇ ಮುಕ್ತಿಯಾಗದೆಂದೂ ಅಪರೋಕ್ಷಾನುಭವವು ಆವಶ್ಯಕವೆಂದೂ ತಿಳಿಸುವದು ಈ ಗ್ರಂಥಕಾರರ ಮುಖ್ಯಾಶಯವು. ಈ ವಿಷಯಕ್ಕೆ ಭೂಮಿಕೆಯನ್ನು ನೋಡಿ.

4. 'ಶಿಲಾದ್ಯಾಕರ್ಷಣಂ' ಎಂಬ ಪಾ॥ ಪಾಠ.

ಬರುವದಿಲ್ಲ.[1] ಇದರಂತೆ ಬ್ರಹ್ಮಜ್ಞಾನಿಯು ಮಾಡಿದ ಸದುಪದೇಶ,[2] ಮನನ, ಧ್ಯಾನ- ಸಮಾಧಾನಗಳಿಂದಲೇ[3] ಮಾಯಾಕಾರ್ಯದಿಂದ ಮರೆಯಾಗಿರುವ ನಿಷ್ಕಲವಾದ ಆತ್ಮತತ್ತ್ವವು ದೊರೆಯುವದಲ್ಲದೆ ಕೆಟ್ಟ ಯುಕ್ತಿಗಳಿಂದಲೇ ದೊರೆಯಲಾರದು.

ತಸ್ಮಾತ್ ಸರ್ವಪ್ರಯತ್ನೇನ ಭವಬನ್ಧವಿಮುಕ್ತಯೇ ।
ಸ್ವೈರೇವ ಯತ್ನಃ ಕರ್ತವ್ಯೋ ರೋಗಾದಾವಿವ ಪಣ್ಡಿತೈಃ ॥೬೬॥

೬೬. ಆಪ್ತರಿಂದ ರೋಗಾದಿ(ವಿಷಯದಲ್ಲಿ) ಹೇಗೋ ಹಾಗೆ ವಿವೇಕಿಗಳಾದವರು ಸಂಸಾರಬಂಧದಿಂದ ಬಿಡುಗಡೆಯಾಗುವದಕ್ಕೆ ತಾವೇ ಸರ್ವಪ್ರಯತ್ನದಿಂದಲೂ ಯತ್ನಿಸಬೇಕು.

## ಪ್ರಶ್ನೆಗೆ ಸಂಕ್ಷಿಪ್ತವಾದ ಉತ್ತರ

ಯಸ್ತ್ವಯಾದ್ಯ ಕೃತಃ ಪ್ರಶ್ನೋ ವರೀಯಾಞ್ಛಾಸ್ತ್ರವಿನ್ಮತಃ ।
ಸೂತ್ರಪ್ರಾಯೋ ನಿಗೂಢಾರ್ಥೋ ಜ್ಞಾತವ್ಯಶ್ಚ ಮುಮುಕ್ಷುಭಿಃ ॥೬೭॥

೬೭. ಈಗ ನೀನು ಕೇಳಿದ ಪ್ರಶ್ನೆಯಿದೆಯಲ್ಲ, (ಅದು) ಬಹು ಉತ್ತಮವಾದದ್ದು, ಶಾಸ್ತ್ರಜ್ಞರಿಗೆ ಒಪ್ಪಾದದ್ದು, ಸೂತ್ರದಂತಿರುವದು, ಬಹುಗೂಢವಾದ ಅರ್ಥವುಳ್ಳದ್ದು, ಮುಮುಕ್ಷುಗಳು ತಿಳಿದುಕೊಳ್ಳಲೂಬೇಕಾದದ್ದು.

ಶೃಣುಷ್ವಾವಹಿತೋ ವಿದ್ವನ್ ಯನ್ಮಯಾ ಸಮುದೀರ್ಯತೇ ।
ತದೇತಚ್ಛ್ರವಣಾತ್ ಸದ್ಯೋ ಭವಬನ್ಧಾದ್ವಿಮೋಕ್ಷ್ಯಸೇ ॥೬೮॥

೬೮. ಅಯ್ಯ ಜಾಣನೆ, ನಾನು ಹೇಳುವದನ್ನು ಚಿತ್ತವಿಟ್ಟು ಕೇಳು. ಆ ಇದನ್ನು ಕೇಳುವದರಿಂದ ಕೂಡಲೆ ಸಂಸಾರಬಂಧದಿಂದ ಬಿಡುಗಡೆಯನ್ನು ಹೊಂದುವೆ.

---

1. ಪಂಚದಶಿಯ ಧ್ಯಾನದೀಪದಲ್ಲಿ 'ಆತ್ಮಗೀತೆ'ಯಿಂದ ಈ ಶ್ಲೋಕಗಳನ್ನು ಉದಾಹರಿಸಿದೆ :

ಯಥಾಗಾಧನಿಧೇರ್ಲಬ್ಧೌ ನೋಪಾಯಃ ಖನನಂ ವಿನಾ ।
ಮಲ್ಲಾಭೇಽಪಿ ತಥಾ ಸ್ವಾತ್ಮಚಿನ್ತಾಂ ಮುಕ್ತ್ವಾ ನ ಚಾಪರಃ ॥
ದೇಹೋಪಲಮಪಾಕೃತ್ಯ ಬುದ್ಧಿಕುದ್ದಾಲಕಾತ್ ಪುನಃ ।
ಖಾತ್ವಾ ಮನೋಭುವಂ ಭೂಯೋ ಗೃಹ್ಣೀಯಾನ್ಮಾಂ
ನಿಧಿಂ ಪುಮಾನ್ ॥೧೫೪॥

2. 'ಬ್ರಹ್ಮವಿದಾ ಉಪದೇಶ…' ಎಂದು ಸಂಧಿಬಿಡಿಸಬೇಕಾಗಿರುತ್ತದೆಯಾದರೂ ಶ್ರವಣಮನನಾದಿಗಳಲ್ಲಿ ಅನ್ವಯವಾಗುವದಿಲ್ಲ. "ಬ್ರಹ್ಮವಿದ್–ಆ–ಉಪದೇಶ" ಎಂದು ಒಂದೇ ಸಮಾಸಪದವಾಗಿ ಭಾವಿಸಿ ನಿರ್ವಹಿಸಬೇಕಾಗಿದೆ.

3. ಸಮಾಧಾನದ್ದು ಎಂದರೆ ಸಮಾಧಿ; ಮುಂದೆ ೭ ನೆಯ ಶ್ಲೋಕವನ್ನು ನೋಡಿ

ಮೋಕ್ಷಸ್ಯ ಹೇತುಃ ಪ್ರಥಮೋ ನಿಗದ್ಯತೇ
ವೈರಾಗ್ಯಮತ್ಯನ್ತಮನಿತ್ಯವಸ್ತುಷು ।
ತತಃ ಶಮಶ್ಚಾಪಿ ದಮಸ್ತಿತಿಕ್ಷಾ
ನ್ಯಾಸಃ ಪ್ರಸಕ್ತಾಖಿಲಕರ್ಮಣಾಂ ಭೃಶಮ್ ॥೧೯॥

೧೯. ಮೋಕ್ಷಕ್ಕೆ ಅನಿತ್ಯವಸ್ತುಗಳಲ್ಲಿ ವೈರಾಗ್ಯವಿರುವದೇ ಮೊದಲನೆಯ ಸಾಧನವು. ಆಮೇಲೆ ಶಮವು, ದಮವು, ತಿತಿಕ್ಷೆಯು, ಮತ್ತು ಪ್ರಸಕ್ತವಾಗಿರುವ ಕರ್ಮಗಳನ್ನೆಲ್ಲ ಸಂಪೂರ್ಣವಾಗಿ ಸಂನ್ಯಾಸಮಾಡುವದು[1]- ಇವುಗಳು ಕಾರಣವು.

ತತಃ ಶ್ರುತಿಸ್ತನ್ಮನನಂ ಸತತ್ತ್ವ-
ಧ್ಯಾನಂ ಚಿರಂ ನಿತ್ಯನಿರನ್ತರಂ ಮುನೇಃ ।
ತತೋಽವಿಕಲ್ಪಂ ಪರಮೇತ್ಯ ವಿದ್ವಾ-
ನಿಹೈವ ನಿರ್ವಾಣಸುಖಂ ಸಮೃಚ್ಛತಿ ॥೨೦॥

೨೦. ಆಮೇಲೆ ಮುನಿಯಾದವನಿಗೆ ಶ್ರವಣ, ಮನನ, ನಿತ್ಯವೂ ಎಡೆಬಿಡದಿರುವ ತತ್ತ್ವಧ್ಯಾನ[2]- ( ಇವುಗಳನ್ನು ಮಾಡುವದು ಕಾರಣವಾಗುವದು ). ಅಲ್ಲಿಂದ ಮುಂದಕ್ಕೆ ಪರಮನಿರ್ವಿಕಲ್ಪಸಮಾಧಿಯನ್ನು[3] ಹೊಂದಿ ಜ್ಞಾನಿಯಾದವನು ಇಲ್ಲಿಯೇ ನಿರ್ವಾಣಸುಖವನ್ನು ಪಡೆಯುವನು.

1. ಸಂನ್ಯಾಸಮಾಡಿಯೇ ಶ್ರವಣಮಾಡಬೇಕೆಂಬುದು ಈ ಗ್ರಂಥಕರ್ತರ ಮತವು. ಗೀ. ೫-೨ರ ಶಂಕರಾನಂದೀಯಟೀಕೆಯನ್ನು ನೋಡಿ.

2. "ನಿದಿಧ್ಯಾಸನ" ಎಂದರ್ಥ. ಪೀಠಿಕೆಯನ್ನು ನೋಡಿ.

3. ನಿರ್ವಿಕಲ್ಪಸಮಾಧಿಯೇ ಅದ್ವೈತಾನುಭವಕ್ಕೆ ಮುಖ್ಯಕಾರಣವೆಂಬುದು ಗ್ರಂಥಕರ್ತರ ಮತವು.

# ೩. ಆತ್ಮಾನಾತ್ಮವಿವೇಕ

## ಆತ್ಮಾನಾತ್ಮವಿವೇಚನಾಪ್ರತಿಜ್ಞೆ

ಯದ್ಬೋದ್ಧವ್ಯಂ ತವೇದಾನೀಮಾತ್ಮಾನಾತ್ಮವಿವೇಚನಮ್ ।
ತದುಚ್ಯತೇ ಮಯಾ ಸಮ್ಯಕ್[1] ಶ್ರುತ್ವಾತ್ಮನ್ಯವಧಾರಯ ॥ ೭೦ ॥

೭೦. ಈಗ ತಿಳಿಯಬೇಕಾಗಿರುವ ಆತ್ಮಾನಾತ್ಮಗಳ ವಿವೇಚನೆಯನ್ನು ನಾನು ಉತ್ತಮರೀತಿಯಿಂದ[1] ತಿಳಿಸುವೆನು. ಅದನ್ನು ಕೇಳಿ ತಿಳಿದುಕೊಂಡು ನಿನ್ನಲ್ಲಿಯೇ (ನೀನು) ನಿಶ್ಚಯಿಸಿಕೊ.

## ದೇಹಕಾರಣವಾದ ಭೂತಗಳೂ ವಿಷಯಗಳೂ

ಮಜ್ಜಾಸ್ಥಿಮೇದಃಪಲರಕ್ತಚರ್ಮ-
ತ್ವಗಾಹ್ವಯೈರ್ಧಾತುಭಿರೇಭಿರನ್ವಿತಮ್ ।
ಪಾದೋರುವಕ್ಷೋಭುಜಪೃಷ್ಠಮಸ್ತಕೈ-
ರಙ್ಗೈರುಪಾಙ್ಗೈರುಪಯುಕ್ತಮೇತತ್ ॥ ೭೧ ॥

ಅಹಂ ಮಮೇತಿ ಪ್ರಥಿತಂ ಶರೀರಂ
ಮೋಹಾಸ್ಪದಂ ಸ್ಥೂಲಮಿತೀರ್ಯತೇ ಬುಧೈಃ ।
ನಭೋನಭಸ್ವದ್ದಹನಾಮ್ಬುಭೂಮಯಃ
ಸೂಕ್ಷ್ಮಾಣಿ ಭೂತಾನಿ ಭವನ್ತಿ ತಾನಿ ॥ ೭೩ ॥

ಪರಸ್ಪರಾಂಶೈರ್ಮಿಲಿತಾನಿ ಭೂತ್ವಾ
ಸ್ಥೂಲಾನಿ ಚ ಸ್ಥೂಲಶರೀರಹೇತವಃ ।
ಮಾತ್ರಾಸ್ತದೀಯಾ ವಿಷಯಾ ಭವನ್ತಿ
ಶಬ್ದಾದಯಃ ಪಞ್ಚ ಸುಖಾಯ ಭೋಕ್ತುಃ ॥ ೭೪ ॥

೭೧–೭೪. ಮಜ್ಜೆ, ಎಲುಬು, ಕೊಬ್ಬು, ಮಾಂಸ, ರಕ್ತ, ಚರ್ಮ, ತ್ವಕ್ಕು (?) – ಎಂಬ ಈ (ಏಳು) ಧಾತುಗಳಿಂದ ಕೂಡಿ ಕಾಲು, ತೊಡೆ, ಎದೆ, ತೋಳು, ಬೆನ್ನು, ತಲೆ– ಮುಂತಾದ ಅಂಗಗಳಿಂದಲೂ ಉಪಾಂಗಗಳಿಂದಲೂ ಯುಕ್ತವಾಗಿ ‘ನಾನು’, ‘ನನ್ನದು’ ಎಂದು ಪ್ರಸಿದ್ಧವಾದ ಮೋಹಕ್ಕೆ ಆಶ್ರಯವಾಗಿದೆಯಲ್ಲ, ಇದನ್ನು ತಿಳಿದವರು ‘ಸ್ಥೂಲ ಶರೀರ’ ಎನ್ನುತ್ತಾರೆ.

---

1. ‘ಸಮ್ಯಕ್’ ಎಂಬುದನ್ನು ‘ಶ್ರುತ್ವಾ’ ಎಂಬ ಮಾತಿಗೆ ಅನ್ವಯಿಸಿಕೊಂಡು ‘ಚೆನ್ನಾಗಿ ಶ್ರವಣಮಾಡಿ’ ಎಂದು ಕನ್ನಡಿಸಬೇಕಾಗುವದು.

ಆಕಾಶ, ವಾಯು, ತೇಜಸ್ಸು, ಅಪ್ಪು, ಪೃಥಿವಿ – ಇವೆ ಸೂಕ್ಷ್ಮಭೂತಗಳು. ಇವು ಒಂದೊಂದರ ಅಂಶದಲ್ಲಿ ಒಂದೊಂದು ಮಿಶ್ರವಾಗಿ ಸ್ಥೂಲಭೂತಗಳಾಗಿ ಸ್ಥೂಲಶರೀರಕ್ಕೆ ಕಾರಣವಾಗಿರುತ್ತವೆ. ಇವುಗಳ ಮಾತ್ರೆಗಳಾದ[1] ಶಬ್ದವೇ ಮುಂತಾದವುಗಳು ಜೀವನ ಭೋಗಕ್ಕಾಗಿರುವ ವಿಷಯಂಗಳು ಎನಿಸುತ್ತವೆ.

## ವಿಷಯನಿಂದೆ

ಯ ಏಷು ಮೂಢಾ ವಿಷಯೇಷು ಬದ್ಧಾ
ರಾಗೋರುಪಾಶೇನ ಸುದುರ್ದಮೇನ ।
ಆಯಾನ್ತಿ ನಿರ್ಯಾನ್ತ್ಯಧ ಊರ್ಧ್ವಮುಚ್ಚೈಃ
ಸ್ವಕರ್ಮದೂತೇನ ಜವೇನ ನೀತಾಃ ॥ ೭೫ ॥

೭೫. ಯಾವ ಮೂಢರು ಈ ವಿಷಯಗಳಲ್ಲಿ ಸ್ವಲ್ಪವೂ ವಶಗೊಳಿಸುವದಕ್ಕಾಗದ ರಾಗವೆಂಬ ಬಲವಾದ ದೊಡ್ಡ ಪಾಶದಿಂದ ಬಿಗಿವಡೆದಿರುವರೋ (ಅವರು) ವೇಗವಾದ ತಮ್ಮ ಕರ್ಮವೆಂಬ ದೂತನಿಂದ ಸೆಳೆಯಲ್ಪಡುತ್ತಾ ಅಧೋಗತಿಯನ್ನೂ ಊರ್ಧ್ವಗತಿಯನ್ನೂ[2] ಪಡೆಯುತ್ತಾ ಹೋಗುತ್ತಲೂ ಬರುತ್ತಲೂ ಇರುವರು.

ಶಬ್ದಾದಿಭಿಃ ಪಞ್ಚಭಿರೇವ ಪಞ್ಚ
ಪಞ್ಚತ್ವಮಾಪುಃ ಸ್ವಗುಣೇನ ಬದ್ಧಾಃ ।
ಕುರಙ್ಗಮಾತಙ್ಗಪತಙ್ಗಮೀನ-
ಭೃಙ್ಗಾ ನರಃ ಪಞ್ಚಭಿರಞ್ಚಿತಃ ಕಿಮ್ ॥ ೭೬ ॥

೭೬. ಜಿಂಕೆ, ಆನೆ, ದೀಪದ ಹುಳು, ಮೀನು, ದುಂಬಿ– ಈ ಐದೂ ತಮ್ಮ ತಮ್ಮ ಗುಣಕ್ಕೆ[3] ಕಟ್ಟುಬಿದ್ದು ಶಬ್ದವೇ ಮುಂತಾದ ಐದರಲ್ಲಿ (ಒಂದೊಂದರಿಂದಲೇ) ಮರಣವನ್ನು ಹೊಂದುತ್ತವೆ. ಈ ಐದರಿಂದಲೂ ಕೂಡಿರುವ ಮನುಷ್ಯನ ವಿಷಯದಲ್ಲಿ ಹೇಳತಕ್ಕದ್ದೇನು?

---

1. ಅಂಶಗಳಾದ, ಗುಣಗಳಾದ.

2. 'ಉಚ್ಚೈಃ' ಎಂಬ ಮಾತು ಇಲ್ಲಿ ಹೆಚ್ಚು.

3. ತಮತಮಗೆ ಪ್ರಿಯವಾದ ಗುಣಕ್ಕೆ ಎಂದರ್ಥ. ಜಿಂಕೆಯು ಘಂಟೆಯ ಸ್ವರಕ್ಕೂ, ಆನೆಯು ತುರಿಸುವ ಸೋಂಕಿಗೂ, ದೀಪದ ಹುಳು ದೀಪದ ರೂಪಕ್ಕೂ, ಮೀನು ಗಾಳದ ಹುಳುವಿನ ರುಚಿಗೂ, ದುಂಬಿಯು ಸಂಪಗೆಯ ವಾಸನೆಗೂ ಮರುಳಾಗುವದನ್ನು ಕವಿಗಳು ವರ್ಣಿಸುತ್ತಾರೆ. ಈ ಶ್ಲೋಕವು ಗರುಡಪುರಾಣದಲ್ಲಿ ಕಾಣಬರುತ್ತದೆ.

ದೋಷೇಣ ತೀವ್ರೋ ವಿಷಯಃ ಕೃಷ್ಣಸರ್ಪವಿಷಾದಪಿ ।
ವಿಷಂ ನಿಹನ್ತಿ ಭೋಕ್ತಾರಂ ದ್ರಷ್ಟಾರಂ ಚಕ್ಷುಷಾಪ್ಯಯಮ್ ॥೭೭॥

೭೭. ವಿಷಯವೆಂಬುದು ಕಾಳಸರ್ಪದ ವಿಷಕ್ಕಿಂತಲೂ ತೀಕ್ಷ್ಣವಾಗಿರುತ್ತದೆ. ಏಕೆಂದರೆ ವಿಷವು ತನ್ನನ್ನು ಕುಡಿದವನನ್ನು ಮಾತ್ರ ಕೊಲ್ಲುತ್ತದೆ; (ಆದರೆ) ಈ (ವಿಷಯವು) ಕಣ್ಣಿನಿಂದ ನೋಡಿದವನನ್ನು ಕೂಡ ಕೊಲ್ಲುತ್ತದೆ.

ವಿಷಯಾಶಾಮಹಾಪಾಶಾದ್ ಯೋ ವಿಮುಕ್ತಃ ಸುದುಸ್ತ್ಯಜಾತ್ ।
ಸ ಏವ ಕಲ್ಪತೇ ಮುಕ್ತ್ಯೈ ನಾನ್ಯಃ ಷಟ್ಶಾಸ್ತ್ರವೇದ್ಯಪಿ ॥೭೮॥

೭೮. ಯಾವನು ಬಿಡುವದಕ್ಕೆ ಬಹಳ ಕಷ್ಟವಾಗಿರುವ ವಿಷಯಾಶೆ ಎಂಬ ದೊಡ್ಡ ಬಲೆಯಿಂದ ಬಿಡುಗಡೆಹೊಂದಿರುವನೋ ಅವನೇ ಮುಕ್ತಿಗೆ ತಕ್ಕವನು; ಉಳಿದವನು ಆರು ಶಾಸ್ತ್ರಗಳನ್ನು[1] ಬಲ್ಲವನಾದರೂ (ಮುಕ್ತಿಗೆ ತಕ್ಕ)ವನಲ್ಲ.

ಆಪಾತವೈರಾಗ್ಯವತೋ ಮುಮುಕ್ಷೂನ್
ಭವಾಬ್ಧಿಪಾರಂ ಪ್ರತಿಯಾತುಮುದ್ಯತಾನ್ ।
ಆಶಾಗ್ರಹೋ ಮಜ್ಜಯತೇಽನ್ತರಾಲೇ
ನಿಗೃಹ್ಯ ಕಣ್ಠೇ ವಿನಿವರ್ತ್ಯ ವೇಗಾತ್ ॥೭೯॥

೭೯. ಸಂಸಾರದ ಆಚೆಯ ದಡವನ್ನು ಸೇರಬೇಕೆಂದು ಪ್ರಯತ್ನಿಸುತ್ತಿರುವ ಸಾಮಾನ್ಯವೈರಾಗ್ಯವಂತರಾದ ಮುಮುಕ್ಷುಗಳನ್ನು ಆಶೆ ಎಂಬ ಮೊಸಳೆಯು ಕತ್ತುಹಿಡಿದು ವೇಗದಿಂದ ಹಿಂದಕ್ಕೆ ಸೆಳೆದುಕೊಂಡು ನಡುವೆಯಲ್ಲಿಯೇ ಮುಳುಗಿಸಿಬಿಡುತ್ತದೆ.

ವಿಷಯಾಖ್ಯಗ್ರಹೋ ಯೇನ ಸುವಿರಕ್ತ್ಯಸಿನಾ ಹತಃ ।
ಸ ಗಚ್ಛತಿ ಭವಾಮ್ಭೋಧೇಃ ಪಾರಂ ಪ್ರತ್ಯೂಹವರ್ಜಿತಃ ॥೮೦॥

೮೦. ವಿಷಯವೆಂಬ ಮೊಸಳೆಯನ್ನು ಯಾವನು ಪರಮವೈರಾಗ್ಯವೆಂಬ ಕತ್ತಿಯಿಂದ ಕೊಂದುಹಾಕಿರುವನೋ ಅವನು (ಯಾವ) ಆತಂಕವೂ ಇಲ್ಲದೆ ಸಂಸಾರಸಾಗರದ ಆಚೆಯ ದಡವನ್ನು ಸೇರುವನು.

ವಿಷಮವಿಷಯಮಾರ್ಗೈರ್[2]ಗಚ್ಛತೋಽನಚ್ಛಬುದ್ಧೇಃ
ಪ್ರತಿಪದಮಭಿಯಾತೋ[3] ಮೃತ್ಯುರಪ್ಯೇಷ ವಿದ್ಧಿ ।
ಹಿತಸುಜನಗುರೂಕ್ತ್ಯಾ ಗಚ್ಛತಃ ಸ್ವಸ್ಯ ಯುಕ್ತ್ಯಾ
ಪ್ರಭವತಿ ಫಲಸಿದ್ಧಿಃ ಸತ್ಯಮಿತ್ಯೇವ ವಿದ್ಧಿ ॥೮೧॥

---

1. ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ಪೂರ್ವಮೀಮಾಂಸಾ, ಉತ್ತರಮೀಮಾಂಸಾ ಅಥವಾ ವೇದಾಂತ–ಎಂಬ ಆರು ದರ್ಶನಗಳನ್ನು ಎಂದರ್ಥ.

2. "ಮಾರ್ಗೇ" ವಾ॥　　3. "ಅಭಿಘಾತೋ" ವಾ॥

೮೧. ವಿಷಮವಾದ ವಿಷಯಮಾರ್ಗಗಳಲ್ಲಿ ನಡೆಯುತ್ತಿರುವ ಮಲಿನ ಬುದ್ಧಿಯವನಿಗೆ ಹೆಜ್ಜೆಹೆಜ್ಜೆಗೂ ಎದುರಿಗೆ ಬರುತ್ತಿರುವ ಮೃತ್ಯುವು ಇದೆಂದು ತಿಳಿದುಕೊ. ಹಿತರು, ಸಜ್ಜನರು, ಗುರುಗಳು–ಇವರ ವಚನದಿಂದಲೂ ತನ್ನ ಯುಕ್ತಿಯಿಂದಲೂ ನಡೆಯುವಾತನಿಗೆ ಸತ್ಯವಾಗಿ ಫಲಸಿದ್ಧಿಯು ಉಂಟಾಗುವದೆಂದೇ ತಿಳಿ.

ಮೋಕ್ಷಸ್ಯ ಕಾಙ್ಕ್ಷಾ ಯದಿ ವೈ ತವಾಸ್ತಿ
ತ್ಯಜಾತಿದೂರಾದ್ ವಿಷಯಾನ್ ವಿಷಂ ಯಥಾ ।
ಪೀಯೂಷವತ್ ತೋಷದಯಾಕ್ಷಮಾರ್ಜವ-
ಪ್ರಶಾನ್ತಿದಾನ್ತೀರ್ಭಜ ನಿತ್ಯಮಾದರಾತ್ ॥೮೨॥

೮೨. ನಿನಗೆ ಮೋಕ್ಷದ ಆಶೆಯು ಇರುತ್ತದೆಯಾದರೆ ವಿಷಯಗಳನ್ನು ವಿಷದಂತೆ ಅತಿದೂರದಲ್ಲಿ ಬಿಟ್ಟುಬಿಡು ; ಸಂತೋಷ, ದಯೆ, ಕ್ಷಮೆ, ಸರಳತನ, ಶಮೆ, ದಮೆ–ಇವುಗಳನ್ನು ಅಮೃತವನ್ನು (ಸೇವಿಸು)ವಂತೆ ನಿತ್ಯವೂ ಆದರದಿಂದ ಸೇವಿಸು.

## ದೇಹಾಸಕ್ತಿಯ ನಿಂದೆ

ಅನುಕ್ಷಣಂ ಯತ್ ಪರಿಹೃತ್ಯ ಕೃತ್ಯ-
ಮನಾದ್ಯವಿದ್ಯಾಕೃತಬನ್ಧಮೋಕ್ಷಣಮ್ ।
ದೇಹಃ ಪರಾರ್ಥೋಽಯಮಮುಷ್ಯ ಪೋಷಣೇ
ಯಃ ಸಜ್ಜತೇ ಸ ಸ್ವಮನೇನ ಹನ್ತಿ ॥೮೩॥

೮೩. ಪ್ರತಿಕ್ಷಣವೂ ಯಾವದನ್ನು ಬಿಟ್ಟು ಅನಾದ್ಯವಿದ್ಯೆಯಿಂದಾಗಿರುವ[1] ಬಂಧವನ್ನು ಬಿಡಿಸಿಕೊಳ್ಳಬೇಕೋ (ಅಂಥ ಈ ದೇಹವು ಪರಾರ್ಥವಾದದ್ದು.[2] ಇದರ ಪೋಷಣೆಯಲ್ಲಿಯೇ ಯಾವನು ಆಸಕ್ತನಾಗಿರುವನೋ ಅವನು ತನ್ನ ಸ್ವಾರ್ಥವನ್ನು ಅದರಿಂದ ನಾಶಮಾಡಿಕೊಳ್ಳುತ್ತಾನೆ.

ಶರೀರಪೋಷಣಾರ್ಥೀ ಸನ್ ಯ ಆತ್ಮಾನಂ ದಿದೃಕ್ಷತಿ ।
ಗ್ರಾಹಂ ದಾರುಧಿಯಾ ಧೃತ್ವಾ ನದೀಂ ತರ್ತುಂ ಸ ಇಚ್ಛತಿ ॥೮೪॥

೮೪. ಶರೀರದ ಪೋಷಣೆಯನ್ನೇ ಬಯಸುವವನಾಗಿ ಯಾವನು ಆತ್ಮನನ್ನು ಕಾಣಲೆಳಸುತ್ತಾನೋ ಆತನು ಮೊಸಳೆಯನ್ನು ಕೊರಡೆಂಬ ಬುದ್ಧಿಯಿಂದ ಹಿಡಿದುಕೊಂಡು ಹೊಳೆಯನ್ನು ದಾಟುವದಕ್ಕೆ ಬಯಸಿದವನಾಗುತ್ತಾನೆ.

1. ಅವಿದ್ಯೆಯ ಸ್ವರೂಪವು ಮುಂದೆ ಸ್ಪಷ್ಟವಾಗುವದು.

2. ತನಗೋಸ್ಕರವಾಗಿರುವ ಚೇತನವಸ್ತುವಲ್ಲ, ಮತ್ತೊಂದಕ್ಕಾಗಿ ಬಾಳುವ ಜಡವಸ್ತು.

ಮೋಹ ಏವ ಮಹಾಮೃತ್ಯುರ್ಮುಮುಕ್ಷೋರ್ವಪುರಾದಿಷು ।
ಮೋಹೋ ವಿನಿರ್ಜಿತೋ ಯೇನ ಸ ಮುಕ್ತಿಪದಮರ್ಹತಿ ॥೮೫॥

೮೫. ಮುಮುಕ್ಷುವಾದವನಿಗೆ ಶರೀರವೇ ಮುಂತಾದವುಗಳಲ್ಲಿರುವ ಮೋಹವೇ ಮಹಾಮೃತ್ಯುವು. ಯಾವನು ಮೋಹವನ್ನು ಗೆದ್ದುಕೊಂಡಿರುವನೋ ಅವನು ಮುಕ್ತಿಸ್ಥಾನಕ್ಕೆ ಅರ್ಹನಾಗಿರುತ್ತಾನೆ.

ಮೋಹಂ ಜಹಿ ಮಹಾಮೃತ್ಯುಂ ದೇಹದಾರಸುತಾದಿಷು ।
ಯಂ ಜಿತ್ವಾ ಮುನಯೋ ಯಾಂತಿ ತದ್ವಿಷ್ಣೋಃ ಪರಮಂ ಪದಮ್ ॥

೮೬. ಶರೀರ, ಹೆಂಡತಿ, ಮಕ್ಕಳು–ಮೊದಲಾದವುಗಳಲ್ಲಿರುವ ಮೋಹವೆಂಬ ಮಹಾಮೃತ್ಯುವನ್ನು ಬಿಟ್ಟುಬಿಡು. ಅದನ್ನು ಗೆದ್ದುಕೊಂಡ ಮುನಿಗಳು ಆ ವಿಷ್ಣುವಿನ ಪರಮಪದವನ್ನು[1] ಹೊಂದುತ್ತಾರೆ.

## ಸ್ಥೂಲಶರೀರ

ತ್ವಙ್ಮಾಂಸರುಧಿರಸ್ನಾಯುಮೇದೋಮಜ್ಜಾಸ್ಥಿಸಙ್ಕುಲಮ್ ।
ಪೂರ್ಣಂ ಮೂತ್ರಪುರೀಷಾಭ್ಯಾಂ ಸ್ಥೂಲಂ ನಿಂದ್ಯಮಿದಂ ವಪುಃ ॥

೮೭. ತ್ವಕ್ಕು, ಮಾಂಸ, ರಕ್ತ, ನರ, ಕೊಬ್ಬು, ಮಜ್ಜೆ, ಎಲುಬು–ಇವುಗಳಿಂದ[2] ಕೂಡಿ ಮಲಮೂತ್ರಗಳಿಂದ ತುಂಬಿರುವ ನಿಂದ್ಯವಾದ ಈ ಶರೀರವೇ ಸ್ಥೂಲ(ಶರೀರ)ವು.

ಪಞ್ಚೀಕೃತೇಭ್ಯೋ ಭೂತೇಭ್ಯಃ ಸ್ಥೂಲೇಭ್ಯಃ ಪೂರ್ವಕರ್ಮಣಾ ।
ಸಮುತ್ಪನ್ನಮಿದಂ ಸ್ಥೂಲಂ ಭೋಗಾಯತನಮಾತ್ಮನಃ ॥೮೮॥
ಅವಸ್ಥಾ ಜಾಗರಸ್ತಸ್ಯ ಸ್ಥೂಲಾರ್ಥಾನುಭವೋ ಯತಃ ॥

೮೮–೮೯. ಪೂರ್ವಕರ್ಮದಿಂದ ಪಂಚೀಕೃತವಾದ[3] ಸ್ಥೂಲಭೂತಗಳಿಂದ ಹುಟ್ಟಿರುವ, ಆತ್ಮನಿಗೆ ಭೋಗಗಳ ಸ್ಥಾನವಾಗಿರುವ ಈ ಶರೀರವು ಸ್ಥೂಲವು.

1. ಕ. ೧–೩– .

2 ಶರೀರಧಾತುಗಳನ್ನು ಹಿಂದೆ ೭೭ನೆಯ ಶ್ಲೋಕದಲ್ಲಿ ವಿವರಿಸಿರುವ ಬಗೆಯನ್ನು ಇದಕ್ಕೆ ಹೋಲಿಸಿರಿ. ಈ ವರ್ಣನೆಯನ್ನು ಯಾವದಾದರೊಂದು ಉಪನಿಷತ್ತಿನ ಆಧಾರದಿಂದ ಬರೆದಿರುತ್ತದೆಯೋ ಇಲ್ಲವೋ ಗೊತ್ತಾಗಲಿಲ್ಲ. ಗರ್ಭೋಪನಿಷತ್ತು, ಮೈತ್ರಾಯಣ್ಯುಪನಿಷತ್ತು–ಇವನ್ನು ನೋಡಿರಿ.

3. ಪಂಚಭೂತಗಳಲ್ಲಿ ಒಂದೊಂದರ ಅರ್ಧಪಾಲಿನಲ್ಲಿ ಮಿಕ್ಕ ನಾಲ್ಕರ ಎಂಟನೆಯ ಅಂಶಗಳು ಸೇರಿದರೆ ಪಂಚೀಕೃತವಾದ ಆಯಾ ಸ್ಥೂಲಭೂತವಾಗುವದು. ಪಂ.ಪ. ೧–೧೬ ನೋಡಿರಿ.

ಅದಕ್ಕೆ ಎಚ್ಚರವೇ (ಗೊತ್ತಾದ) ಅವಸ್ಥೆ. ಏಕೆಂದರೆ (ಅಲ್ಲಿ) ಸ್ಥೂಲಪದಾರ್ಥಗಳ ಅನುಭವವುಂಟಾಗುತ್ತದೆ.

ಬಾಹ್ಯೇನ್ದ್ರಿಯೈಃ ಸ್ಥೂಲಪದಾರ್ಥಸೇವಾಂ
ಸ್ರಕ್ಚನ್ದನಸ್ತ್ರ್ಯಾದಿವಿಚಿತ್ರರೂಪಾಮ್ ।
ಕರೋತಿ ಜೀವಃ ಸ್ವಯಮೇತದಾತ್ಮನಾ
ತಸ್ಮಾತ್ ಪ್ರಶಸ್ತಿರ್ವಪುಷೋಽಸ್ಯ ಜಾಗರೇ ॥೮೯॥

೮೯. ಜೀವನು ಈ (ಶರೀರದ) ಭಾವವನ್ನು ಹೊಂದಿ[1] ತಾನೂ ಹೊರಗಿನ ಇಂದ್ರಿಯಗಳಿಂದ ಹೂ, ಗಂಧ, ಹೆಣ್ಣು–ಮುಂತಾದ ಬಗೆಬಗೆಯ ರೂಪದ ಸ್ಥೂಲಪದಾರ್ಥಗಳ ಸೇವನೆಯನ್ನು ಮಾಡುತ್ತಿರುವನು. ಆದ್ದರಿಂದ[2] ಈ ಶರೀರಕ್ಕೆ ಎಚ್ಚರದಲ್ಲಿ ಪ್ರಾಶಸ್ತ್ಯವಿರುತ್ತದೆ.

ಸರ್ವೋಽಪಿ ಬಾಹ್ಯ[3] ಸಂಸಾರಃ ಪುರುಷಸ್ಯ ಯದಾಶ್ರಯಃ ।
ವಿದ್ಧಿ ದೇಹಮಿದಂ ಸ್ಥೂಲಂ ಗೃಹವದ್ಗೃಹಮೇಧಿನಃ ॥೯೦॥

೯೦. ಹೊರಗಿನ ಸಂಸಾರವೆಲ್ಲವೂ ಯಾವದನ್ನಾಶ್ರಯಿಸಿ ಆಗಬೇಕಾಗಿರುವದೋ–ಗೃಹಸ್ಥನಿಗೆ ಗೃಹದಂತೆ ಇರುವ–ಇದನ್ನು ಸ್ಥೂಲದೇಹವೆಂದು ತಿಳಿ.

ಸ್ಥೂಲಸ್ಯ ಸಂಭವಜರಾಮರಣಾನಿ ಧರ್ಮಾಃ
ಸ್ಥೌಲ್ಯಾದಯೋ ಬಹುವಿಧಾಃ ಶಿಶುತಾದ್ಯವಸ್ಥಾಃ ।
ವರ್ಣಾಶ್ರಮಾದಿನಿಯಮಾ ಬಹುಧಾಮಯಾಃ[4] ಸ್ಯುಃ
ಪೂಜಾವಮಾನಬಹುಮಾನಮುಖಾ ವಿಶೇಷಾಃ ॥೯೧॥

೯೧. ಹುಟ್ಟು, ಮುಪ್ಪು, ಸಾವು– ಇವುಗಳೂ, ದಪ್ಪಗಿರುವದು ಮುಂತಾದ ಬಲುಬಗೆಯ ಧರ್ಮಗಳೂ, ಶಿಶುತ್ವವೇ ಮುಂತಾದ ಅವಸ್ಥೆಗಳೂ,

1. ಹೂ, ಗಂಧ– ಮುಂತಾದವುಗಳ ಸಂಬಂಧವು ಶರೀರಕ್ಕೇ ಆದರೂ ಅದರ ಅಭಿಮಾನದಿಂದ ಜೀವನಿಗೆ ಆ ಭೋಗಗಳು ಆಗುವವು.

2. ಇಂದ್ರಿಯಗಳೂ ಸ್ಥೂಲಶರೀರವೂ ಎಚ್ಚರದಲ್ಲಿ ಕೆಲಸಮಾಡುವಾಗಲೇ ಈ ಭೋಗಗಳುಂಟಾಗುತ್ತಿರುವದರಿಂದ.

3. ‘ಬಾಹ್ಯಃ’ ಪಾ||

4. ‘ಬಹುಧಾ ಮಯಾಃ’ ಎಂಬ ಪಾಠಕ್ಕಿಂತ ಇದೇ ಮೇಲು.

ವರ್ಣಾಶ್ರಮವೇ ಮುಂತಾದವುಗಳ[1] ನಿಯಮಗಳೂ, ಬಹುವಿಧವಾದ ರೋಗಗಳೂ ಪ್ರೀತಿ, ಅಪಮಾನ, ಮಾನ – ಮುಂತಾದ ವಿಶೇಷಗಳೂ ಸ್ಥೂಲದೇಹಕ್ಕೆ ಸೇರಿದವುಗಳು.

## ಸೂಕ್ಷ್ಮಶರೀರದಲ್ಲಿ ಸೇರಿರುವ ಪುರ್ಯಷ್ಟಕ

ಬುದ್ಧೀನ್ದ್ರಿಯಾಣಿ ಶ್ರವಣಂ ತ್ವಗಕ್ಷಿ
ಘ್ರಾಣಂ ಚ ಜಿಹ್ವಾ ವಿಷಯಾವಬೋಧನಾತ್ ।
ವಾಕ್ಪಾಣಿಪಾದಂ ಗುದಮಪ್ಯುಪಸ್ಥಂ[2]
ಕರ್ಮೇನ್ದ್ರಿಯಾಣಿ ಪ್ರವಣೇನ ಕರ್ಮಸು ॥ ೯೨ ॥

೯೨. ಶ್ರೋತ್ರ, ತ್ವಕ್ಕು, ಚಕ್ಷು, ಘ್ರಾಣ, ಜಿಹ್ವೆ– ಇವು ವಿಷಯವನ್ನರಿಯುವದರಿಂದ ಬುದ್ಧೀಂದ್ರಿಯಗಳೆನಿಸುವವು. ವಾಕ್ಕು, ಪಾಣಿ, ಪಾದ, ಗುದ ಉಪಸ್ಥ – ಇವು ಕರ್ಮಗಳಲ್ಲಿ ತೊಡಗುವದರಿಂದ ಕರ್ಮೇಂದ್ರಿಯಗಳೆನಿಸುವವು.

ನಿಗದ್ಯತೇಽನ್ತಃಕರಣಂ ಮನೋ ಧೀ-
ರಹಂಕೃತಿಶ್ಚಿತ್ತಮಿತಿ ಸ್ವವೃತ್ತಿಭಿಃ ।
ಮನಸ್ತು ಸಙ್ಕಲ್ಪವಿಕಲ್ಪನಾದಿಭಿ-
ರ್ಬುದ್ಧಿಃ ಪದಾರ್ಥಾಧ್ಯವಸಾಯಧರ್ಮತಃ ॥ ೯೩ ॥
ಅತ್ರಾಭಿಮಾನಾದಹಮಿತ್ಯಹಙ್ಕೃತಿಃ
ಸ್ವಾರ್ಥಾನುಸನ್ಧಾನಗುಣೇನ ಚಿತ್ತಮ್

೯೩–೯೪. ಅಂತಃಕರಣವಾದರೋ ತನ್ನ ವೃತ್ತಿಗಳಿಂದ ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ–ಎಂದು (ಬೇರೆಬೇರೆಯ ಹೆಸರುಗಳಿಂದ) ಕರೆಯಲ್ಪಡುತ್ತದೆ. ಸಂಕಲ್ಪ, ವಿಕಲ್ಪ – ಮುಂತಾದವುಗಳಿಂದ ಮನಸ್ಸು ಎಂದೂ ಪದಾರ್ಥವನ್ನು ನಿಶ್ಚಯಿಸುವದೆಂಬ ಧರ್ಮದಿಂದ ಬುದ್ಧಿಯೆಂದೂ ನಾನು ಎಂದು ಅಭಿಮಾನವನ್ನು ಮಾಡುವದರಿಂದ ಅಹಂಕಾರವೆಂದೂ ತನ್ನ ವಿಷಯವನ್ನೂ ಸ್ಮರಣೆಗೆ ತಂದುಕೊಳ್ಳುವದರಿಂದ ಚಿತ್ತವೆಂದೂ (ಕರೆಯಿಸಿಕೊಳ್ಳುತದೆ).

1. ಮುಂತಾದವುಗಳು ಎಂದರೆ ವಯಸ್ಸು, ಅವಸ್ಥೆ – ಮುಂತಾದವು. ಕರ್ಮಗಳೆ ಇಂಥಿಂಥ ವರ್ಣ, ಆಶ್ರಮ – ಮುಂತಾದವಕ್ಕೆ ಇಂಥಿಂಥವು ಎಂದು ನಿಯತವಾಗಿವೆ.

2 'ಗುದಮಪ್ಯುಪಸ್ಥಃ' ಪಾ।

ಪ್ರಾಣಾಪಾನವ್ಯಾನೋದಾನಸಮಾನಾ ಭವತ್ಯಸೌ ಪ್ರಾಣಃ ।
ಸ್ವಯಮೇವ ವೃತ್ತಿಭೇದಾದ್ವಿಕೃತೇರ್ಭೇದಾತ್ ಸುವರ್ಣಸಲಿಲವತ್[1] ॥

೯೪. ಚಿನ್ನ, ನೀರು – ಇವುಗಳು (ಬೇರೆಬೇರೆಯ ವಿಕಾರವನ್ನು ಪಡೆದು ಬೇರೆಬೇರೆಯ ಹೆಸರುಗಳನ್ನು ಪಡೆಯುವಂತೆ) ಈ ಪ್ರಾಣವು ತಾನೇ ವೃತ್ತಿಗಳ ಭೇದದಿಂದ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ – ಎಂಬ (ಐದೂ) ಆಗುವದು.

ವಾಗಾದಿಪಞ್ಚ ಶ್ರವಣಾದಿಪಞ್ಚ
ಪ್ರಾಣಾದಿಪಞ್ಚಾಭ್ರಮುಖಾನಿ ಪಞ್ಚ ।
ಬುದ್ಧ್ಯಾದ್ಯವಿದ್ಯಾಪಿ ಚ ಕಾಮಕರ್ಮಣೀ
ಪುರ್ಯಷ್ಟಕಂ ಸೂಕ್ಷ್ಮಶರೀರಮಾಹುಃ ॥ ೯೫ ॥

೯೫. (೧) ವಾಕ್ಕೇ ಮುಂತಾದ ಐದು (ಕರ್ಮೇಂದ್ರಿಯಗಳು), (೨) ಶ್ರವಣವೇ ಮುಂತಾದ ಐದು (ಬುದ್ಧೀಂದ್ರಿಯಗಳು), (೩) ಪ್ರಾಣವೇ ಮುಂತಾದ ಐದು (ಪ್ರಾಣಗಳು), (೪) ಆಕಾಶವೇ ಮುಂತಾದ ಐದು (ಅಪಂಚೀಕೃತಭೂತಗಳು), (೫) ಬುದ್ಧಿಯೇ ಮುಂತಾದ ನಾಲ್ಕು ಅಂತಃಕರಣಗಳು, (೬) ಅವಿದ್ಯೆ[2] (೭) ಕಾಮ (೮) ಕರ್ಮ– (ಈ) ಪುರ್ಯಷ್ಟಕವನ್ನು ಸೂಕ್ಷ್ಮ ಶರೀರವೆನ್ನುತ್ತಾರೆ.

## ಸೂಕ್ಷ್ಮಶರೀರದ ವರ್ಣನೆ

ಇದಂ ಶರೀರಂ ಶೃಣು ಸೂಕ್ಷ್ಮಸಂಜ್ಞಿತಂ
ಲಿಙ್ಗಂ ತ್ವಪಞ್ಚೀಕೃತಭೂತಸಮ್ಭವಮ್ ।
ಸವಾಸನಂ ಕರ್ಮಫಲಾನುಭಾವಕಂ
ಸ್ವಾಜ್ಞಾನತೋಽನಾದಿರುಪಾಧಿರಾತ್ಮನಃ ॥ ೯೬ ॥

೯೬. ಈ ಸೂಕ್ಷ್ಮಶರೀರವೆಂಬ ಹೆಸರಿನ ಅಪಂಚೀಕೃತಭೂತ[3]ಗಳಿಂದಾಗಿರುವ ಲಿಂಗಶರೀರದ[4] (ವಿಷಯ)ವನ್ನು ಕೇಳು : (ಇದು) ವಾಸನೆಗಳಿಂದ

1. "ಸ್ವಯಮೇವ ವೃತ್ತಿಭೇದಾದ್ವಿಕೃತಿಭೇದಾತ್ ಸುವರ್ಣಸಲಿಲಾದಿವತ್" ಎಂಬ ಪಾಠವು ಛಂದಸ್ಸಿಗೆ ಅನುಗುಣವಾಗಿಲ್ಲವಾಗಿ ಸರಿಯಲ್ಲ. 'ಸಲಿಲಮಿವ' ಎಂದು ಪಾ॥

2. ತಪ್ಪುತಿಳಿವಳಿಕೆ, ಮತ್ತು ನಿಜವನ್ನರಿಯದೆ ಇರುವದು.

3. ಐದು ಭೂತಗಳೂ ಒಂದರಲ್ಲೊಂದು ಬೆರೆತುಕೊಳ್ಳದೆ ಒಂದೊಂದೇ ಇರುವಾಗ ಅಪಂಚೀಕೃತವೆನಿಸುವವು.

4. ಸೂಕ್ಷ್ಮಶರೀರಕ್ಕೆ ಲಿಂಗಶರೀರವೆಂದೂ ಹೆಸರು ; ಇದು ಆತ್ಮನನ್ನು ತಿಳಿಸುವ ಸಾಧನವಾಗಿರುವದರಿಂದ ಇದಕ್ಕೆ ಆ ಹೆಸರು.

ಕೂಡಿ ಕರ್ಮಫಲಗಳ ಅನುಭವವನ್ನುಂಟುಮಾಡುವದಾಗಿದೆ. ತನ್ನ ಸ್ವರೂಪವನ್ನು ಅರಿಯದ್ದರಿಂದ ಆತ್ಮನಿಗೆ ಅನಾದಿಯಾದ[1] ಉಪಾಧಿಯಿದು.

ಸ್ವಪ್ನೋ ಭವತ್ಯಸ್ಯ ವಿಭಕ್ತ್ಯವಸ್ಥಾ
ಸ್ವಮಾತ್ರಶೇಷೇಣ ವಿಭಾತಿ ಯತ್ರ ।
ಸ್ವಪ್ನೇ ತು ಬುದ್ಧಿಃ ಸ್ವಯಮೇವ ಜಾಗ್ರ-
ತ್ಕಾಲೀನನಾನಾವಿಧವಾಸನಾಭಿಃ ॥೯೭॥

ಕರ್ತ್ರಾದಿಭಾವಂ ಪ್ರತಿಪದ್ಯ ರಾಜತೇ
ಯತ್ರ ಸ್ವಯಂಜ್ಯೋತಿರಯಂ ಪರಾತ್ಮಾ ।
ಧೀಮಾತ್ರಕೋಪಾಧಿರಶೇಷಸಾಕ್ಷೀ
ನ ಲಿಪ್ಯತೇ ತತ್ಕೃತಕರ್ಮಲೇಶೈಃ[2] ॥೯೮॥

೯೭-೯೮. ಇದಕ್ಕೆ ಕನಸು ಬೇರೆಯಾಗಿ (ಗೊತ್ತಾಗಿರುವ) ಅವಸ್ಥೆಯು, ಅಲ್ಲಿ ತಾನೊಂದೇ[3] ಉಳಿದುಕೊಂಡು ತೋರಿಕೊಳ್ಳುವದು. ಸ್ವಪ್ನದಲ್ಲಿ ಅಂತಃಕರಣವು ಜಾಗ್ರತ್ಕಾಲದ ಬಗೆಬಗೆಯ ಅನುಭವಗಳ ವಾಸನೆಗಳಿಂದ ಕರ್ತೃವೇ ಮುಂತಾದ ಸ್ವರೂಪವನ್ನು ಹೊಂದಿ[4] ತೋರಿಕೊಳ್ಳುತ್ತದೆ. ಅಲ್ಲಿ ಈ ಪರಾತ್ಮನು ಸ್ವಯಂಪ್ರಕಾಶ[5]ನಾಗಿರುತ್ತಾನೆ. ಕೇವಲ ಅಂತಃಕರಣವೆಂಬ ಉಪಾಧಿಯುಳ್ಳವನಾಗಿ ಎಲ್ಲಕ್ಕೂ ಸಾಕ್ಷಿಯಾಗಿರುವ ಆತ್ಮನು ಆ ಅಂತಃಕರಣದಿಂದಾಗುವ ಕರ್ಮಗಳೊಂದಿಷ್ಟರಿಂದಲೂ ಲೇಪವನ್ನು ಹೊಂದುವದಿಲ್ಲ.

## ಆತ್ಮನಿಗೆ ಸೂಕ್ಷ್ಮಶರೀರದ ಅಂಟಿಲ್ಲ

**ಯಸ್ಮಾದಸಙ್ಗಸ್ತತ ಏವ ಕರ್ಮಭಿ-**
**ರ್ನ ಲಿಪ್ಯತೇ ಕಿಞ್ಚಿದುಪಾಧಿನಾ ಕೃತೈಃ**

೯೯. ಇವನು ಅಸಂಗನಾಗಿರುವದರಿಂದಲೇ[6] (ಆ) ಉಪಾಧಿಯಿಂದಾದ ಕರ್ಮಗಳಿಂದ ಒಂದಿಷ್ಟೂ ಲೇಪವನ್ನು ಹೊಂದುವದಿಲ್ಲ.

---

1. ಯಾವಾಗ ಈ ಶರೀರದ ಸಂಬಂಧವಾಯಿತೆಂದು ಹೇಳುವದಕ್ಕೆ ಬರುವದಿಲ್ಲ.
2. 'ಲೇಪೈಃ' ಪಾ॥
3. ಇಂದ್ರಿಯವಿಷಯಗಳಿಲ್ಲದೆ.
4. ಅಂತಃಕರಣವೇ ಕರ್ತೃ, ಕರ್ಮ-ಮುಂತಾದದ್ದೆಲ್ಲವೂ ಆಗಿರುತ್ತದೆ.
5. ಬೃ. ೪.೩. ೯.
5. ಬೃ. ೪-೩-೪, ೬-೩-೧೫ ಮುಂತಾದವುಗಳ ಸೂಚನೆ.

**ಸರ್ವವ್ಯಾಪೃತಿಕರಣಂ ಲಿಙ್ಗಮಿದಂ ಸ್ಯಾಚ್ಚಿದಾತ್ಮನಃ ಪುಂಸಃ ।**
**ವಾಸ್ಯಾದಿಕಮಿವ ತಕ್ಷ್ಣಸ್ತೇನೈವಾತ್ಮಾ ಭವತ್ಯಸಙ್ಗೋಽಯಮ್ ॥೯೯॥**

೯೯. ಚಿತ್ಸ್ವರೂಪನಾದ ಪುರುಷನಿಗೆ ಈ ಲಿಂಗ(ಶರೀರವು) ಬಡಗಿಗೆ ಬಾಚಿಯೇ ಮುಂತಾದವುಗಳಂತೆ ಸಕಲವ್ಯಾಪಾರಗಳಿಗೂ ಕರಣವಾಗಿರುವದು. ಆದ್ದರಿಂದಲೇ[1] ಈ ಆತ್ಮನು ಅಸಂಗನಾಗಿರುತ್ತಾನೆ.

**ಅನ್ಧತ್ವಮನ್ದತ್ವಪಟುತ್ವಧರ್ಮಾಃ**
**ಸೌಗುಣ್ಯವೈಗುಣ್ಯವಶಾದ್ಧಿ ಚಕ್ಷುಷಃ ।**
**ಬಾಧಿರ್ಯಮೂಕತ್ವಮುಖಾಸ್ತಥೈವ**
**ಶ್ರೋತ್ರಾದಿಧರ್ಮಾ ನ ತು ವೇತ್ತುರಾತ್ಮನಃ ॥೧೦೦॥**

೧೦೦. ಕುರುಡು, (ದೃಷ್ಟಿಯು) ಮಂದವಾಗಿರುವದು, ಚುರುಕಾಗಿರುವದು—ಕಣ್ಣು ಚೆನ್ನಾಗಿರುವದು ಅಥವಾ ಕೆಟ್ಟಿರುವದು–ಇವುಗಳಿಂದಲೇ ಅಲ್ಲವೆ? ಇದರಂತೆಯೇ ಕಿವುಡು, ಮೂಕತನ–ಮುಂತಾದವುಗಳೂ ಶ್ರೋತ್ರವೇ ಮುಂತಾದ ಇಂದ್ರಿಯಗಳ ಧರ್ಮವೇ ಹೊರತು ಅರಿಯುವ ಆತ್ಮನ ಧರ್ಮಗಳಲ್ಲ.[2]

**ಉಚ್ಛ್ವಾಸನಿಃಶ್ವಾಸವಿಜೃಮ್ಭಣಕ್ಷುತ್[3]**
**ಪ್ರಸ್ಪನ್ದನಾದ್ಯುತ್ಕ್ರಮಣಾದಿಕಾಃ ಕ್ರಿಯಾಃ ।**
**ಪ್ರಾಣಾದಿಕರ್ಮಾಣಿ ವದನ್ತಿ ತಜ್ಜ್ಞಾಃ**
**ಪ್ರಾಣಸ್ಯ ಧರ್ಮಾವಶನಾಪಿಪಾಸೇ ॥೧೦೧॥**

೧೦೧. ಉಸಿರುತೆಗೆದುಕೊಳ್ಳುವದು, ಉಸಿರುಬಿಡುವದು, ಆಕಳಿಸುವದು, ಸೀನುವದು, ಚಲಿಸುವದು–ಮುಂತಾದವುಗಳೂ (ಶರೀರವನ್ನು ಬಿಟ್ಟು) ಮೇಲಕ್ಕೆ ಹಾರಿಹೋಗುವದೇ ಮುಂತಾದ ಕ್ರಿಯೆಗಳೂ ಪ್ರಾಣವೇ ಮುಂತಾದವುಗಳ ಧರ್ಮಗಳೆಂದು ಅವನ್ನು ಬಲ್ಲವರು ಹೇಳುತ್ತಾರೆ. ಹಸಿವುನೀರಡಿಕೆಗಳು ಪ್ರಾಣದ ಧರ್ಮಗಳು.

**ಅನ್ತಃಕರಣಮೇತೇಷು ಚಕ್ಷುರಾದಿಷು ವರ್ಷ್ಮಣಿ ।**
**ಅಹಮಿತ್ಯಭಿಮಾನೇನ ತಿಷ್ಠತ್ಯಾಭಾಸತೇಜಸಾ ॥೧೦೨॥**

1. ಕರಣವಾಗಿರುವದರಿಂದಲೇ, ಕರಣವನ್ನು ಬೆಳಗುವ ಚೈತನ್ಯದ ಸ್ವರೂಪನಾಗಿರುವ ಆತ್ಮನು ಅದಕ್ಕಿಂತ ಬೇರೆಯವನಾಗಿರುವದರಿಂದಲೇ.

2. ಆ ಧರ್ಮಗಳೆಲ್ಲ ವೇದ್ಯವಾಗಿರುವದರಿಂದ ವೇತ್ತೃವಿನ ಧರ್ಮವಲ್ಲ.

3. 'ಕ್ಷುತ' ಪಾ.

ಅಹಙ್ಕಾರಃ ಸ ವಿಜ್ಞೇಯಃ ಕರ್ತಾ ಭೋಕ್ತಾಭಿಮಾನ್ಯಯಮ್ ।
ಸತ್ತ್ವಾದಿಗುಣಯೋಗೇನ ಚಾವಸ್ಥಾತ್ರಯಮಶ್ನುತೇ ॥ ೧೦೩ ॥

ವಿಷಯಾಣಾಮಾನುಕೂಲ್ಯೇ ಸುಖೀ ದುಃಖೀ ವಿಪರ್ಯಯೇ ।
ಸುಖಂ ದುಃಖಂ ಚ ತದ್ಧರ್ಮಃ ಸದಾನನ್ದಸ್ಯ ನಾತ್ಮನಃ ॥ ೧೦೪ ॥

೧೦೩–೧೦೪. ಶರೀರದಲ್ಲಿರುವ ಈ ಚಕ್ಷುರಾದಿಗಳಲ್ಲಿ ಅಂತಃಕರಣವು ಚಿದಾಭಾಸನ[1] ಮಹಿಮೆಯಿಂದ 'ನಾನು' ಎಂದು ಅಭಿಮಾನವನ್ನು ಹೊಂದುತ್ತಿರುವದು. ಅದನ್ನೇ ಅಹಂಕಾರವೆಂದು ತಿಳಿಯಬೇಕು. ಇದೇ ಕರ್ತೃವೂ ಭೋಕ್ತೃವೂ ಆಗಿರುವದು ; ಸತ್ತ್ವವೇ ಮುಂತಾದ ಗುಣಗಳ ಸಂಬಂಧದಿಂದ ಅವಸ್ಥಾತ್ರಯವನ್ನು ಹೊಂದುತ್ತದೆ. ವಿಷಯಗಳು ತನಗೆ ಅನುಕೂಲವಾಗಿದ್ದರೆ ಸುಖಿ(ಯಾಗಿರುವದು), ಇಲ್ಲದಿದ್ದರೆ ದುಃಖಿಯಾಗಿರುವದು ; ಸುಖವೂ ದುಃಖವೂ ಅದರ ಧರ್ಮವೇ ಹೊರತು ನಿತ್ಯಾನಂದವಾದ ಆತ್ಮನ ಧರ್ಮವಲ್ಲ.

## ಆತ್ಮನು ಸದಾನಂದಸ್ವರೂಪನು

ಆತ್ಮಾರ್ಥತ್ವೇನ ಹಿ ಪ್ರೇಯಾನ್ ವಿಷಯೋ ನ ಸ್ವತಃ ಪ್ರಿಯಃ ।
ಸ್ವತ ಏವ ಹಿ ಸರ್ವೇಷಾಮಾತ್ಮಾ ಪ್ರಿಯತಮೋ ಯತಃ ॥ ೧೦೫ ॥

ತತ ಆತ್ಮಾ ಸದಾನನ್ದೋ ನಾಸ್ಯ ದುಃಖಂ ಕದಾಚನ ।
ಯತ್ ಸುಷುಪ್ತೌ ನಿರ್ವಿಷಯ ಆತ್ಮಾನನ್ದೋಽನುಭೂಯತೇ ॥ ೧೦೬ ॥
ಶ್ರುತಿಃ ಪ್ರತ್ಯಕ್ಷಮೈತಿಹ್ಯಮನುಮಾನಂ ಚ ಜಾಗ್ರತಿ

೧೦೫–೧೦೬. ವಿಷಯವು ಆತ್ಮನಿಗಾಗಿ ಪ್ರಿಯವಾಗಿರುವದೇ ಹೊರತು ತಾನೇ ಪ್ರಿಯವಲ್ಲ. ಆತ್ಮನು (ಮಾತ್ರ) ಎಲ್ಲರಿಗೂ ತಾನೇ ಪ್ರಿಯತಮನಾಗಿರುತ್ತಾನಷ್ಟೆ.[2] ಆದ್ದರಿಂದ[3] ಆತ್ಮನು ನಿತ್ಯಾನಂದನಾಗಿರುತ್ತಾನೆ. ಇವನಿಗೆ ಎಂದಿಗೂ ದುಃಖವಿಲ್ಲ ; ಏಕೆಂದರೆ ವಿಷಯವಿಲ್ಲದ ಸುಷುಪ್ತಿಯಲ್ಲಿ ಆತ್ಮಾನಂದವು

---

1. ಆತ್ಮಚೈತನ್ಯವನ್ನು ಅರಿಯದೆ ಇದನ್ನೇ ಚೈತನ್ಯವೆಂದು ಜನರು ಮೋಸಹೋಗುತ್ತಾರೆ. ಚೈತನ್ಯದ ಸನ್ನಿಧಿಯಲ್ಲಿ ಇದರಲ್ಲಿನ ಅರಿವಿನಂತಿರುವ ತೋರಿಕೆಯನ್ನು 'ಚಿದಾಭಾಸ' ಎನ್ನುತ್ತಾರೆ.
2. ಆತ್ಮನು ಎಲ್ಲಕ್ಕೂ ಪ್ರಿಯತಮನೆಂಬುದಕ್ಕೆ ಬೃ. ೧–೪–೮ ನೋಡಿ.
3. ಸ್ವತಃಪ್ರಿಯನಾಗಿದ್ದು ಮತ್ತೊಂದಕ್ಕಾಗಿ ಪ್ರಿಯನಲ್ಲದ್ದರಿಂದ.

ಅನುಭವಕ್ಕೆ ಬರುತ್ತದೆ. ಶ್ರುತಿಯೂ ಪ್ರತ್ಯಕ್ಷವೂ ಐತಿಹ್ಯವೂ ಅನುಮಾನವೂ (ಇದಕ್ಕೆ ಪ್ರಮಾಣ)ವಾಗಿರುತ್ತವೆ.[1]

## ಅವ್ಯಕ್ತವೆಂಬ ಅನಾತ್ಮವಿದ್ಯೆ

ಅವ್ಯಕ್ತನಾಮ್ನೀ ಪರಮೇಶಶಕ್ತಿ-
ರನಾದ್ಯವಿದ್ಯಾ ತ್ರಿಗುಣಾತ್ಮಿಕಾ ಪರಾ ।
ಕಾರ್ಯಾನುಮೇಯಾ ಸುಧಿಯೈವ ಮಾಯಾ
ಯಯಾ ಜಗತ್ಸರ್ವಮಿದಂ ಪ್ರಸೂಯತೇ ॥ ೧೦೮ ॥

೧೦೮. ಅವ್ಯಕ್ತವೆಂಬ ಹೆಸರಿನ ಪರಮೇಶ್ವರನ ಪರಶಕ್ತಿಯೇ[2] ಅನಾದ್ಯ ವಿದ್ಯೆಯು.[3] ಈ ಮಾಯೆಯನ್ನು[4] ಜಾಣನಾದವನು (ಇದರ) ಕಾರ್ಯದಿಂದ ಅನುಮಾನಿಸಿ (ತಿಳಿಯ)ಬೇಕು. ಇದರಿಂದ ಈ ಜಗತ್ತೆಲ್ಲವೂ ಹುಟ್ಟಿರುತ್ತದೆ.

ಸನ್ನಾಪ್ಯಸನ್ನಾಪ್ಯುಭಯಾತ್ಮಿಕಾ ನೋ
ಭಿನ್ನಾಪ್ಯಭಿನ್ನಾಪ್ಯುಭಯಾತ್ಮಿಕಾ ನೋ ।
ಸಾಙ್ಗಾಪ್ಯನಙ್ಗಾಪ್ಯುಭಯಾತ್ಮಿಕಾ ನೋ
ಮಹಾದ್ಭುತಾನಿರ್ವಚನೀಯರೂಪಾ ॥ ೧೦೯ ॥

೧೦೯. (ಇದು) ಸತ್ತಲ್ಲ, ಅಸತ್ತಲ್ಲ; (ಈ ಎರಡು) ಸ್ವರೂಪವೂ ಅಲ್ಲ; ಭಿನ್ನವಲ್ಲ, ಅಭಿನ್ನವಲ್ಲ, (ಭಿನ್ನಾಭಿನ್ನಗಳೆಂಬ) ಎರಡು ರೂಪದ್ದೂ ಅಲ್ಲ; ಸಾವಯವವಲ್ಲ, ನಿರವಯವವಲ್ಲ, (ಸಾವಯವನಿರವಯವ ಎಂಬೀ) ಎರಡೂ

---

1. ಸುಷುಪ್ತಿಯಲ್ಲಿ ಸುಖವನ್ನು ಅನುಭವಿಸುವದು ಪ್ರತ್ಯಕ್ಷವು; 'ಸುಖವಾಗಿ ಮಲಗಿರುತ್ತಾನೆ' ಎಂದು ಸುಷುಪ್ತನನ್ನು ಕುರಿತು ಜನರು ಆಡಿಕೊಳ್ಳುವದು ಐತಿಹ್ಯವು; ಸುಷುಪ್ತಿಯಲ್ಲಿ ಆನಂದವಿದೆ; ಏಕೆಂದರೆ ಎಲ್ಲರೂ ಆ ಅವಸ್ಥೆಗಾಗಿ ಹಾತುವರಿಯುತ್ತಾರೆ ಎಂಬುದು ಅನುಮಾನವು. ಸುಷುಪ್ತಿಯಲ್ಲಾಗುವ ಪ್ರತ್ಯಕ್ಷಾನುಭವಕ್ಕೆ ಶಂ. ಗೀ. ೧೩. ೧೩, ೨೭; ೧೮–೧೯ ಇವನ್ನು ನೋಡಿ

2. ಇದನ್ನು ಅಪರಶಕ್ತಿಯೆಂದೂ ಗೀ. ೭–೧೪ನ್ನು ಅನುಸರಿಸಿ ಹೇಳಬಹುದು. ಅದರೆ 'ಅಕ್ಷರಾತ್ ಪರತಃ ಪರಃ' ಎಂಬ ಮುಂ. ೨–೨–೨ ಶ್ರುತಿಗನುಸಾರವಾಗಿ ಪರಶಕ್ತಿಯೆಂದೇ ಗ್ರಂಥಕರ್ತರು ಬರೆದಿರಬಹುದೆಂದು ತೋರುತ್ತದೆ.

3. ಶಂ. ಗೀ. ೭–೧೪.

4. ಅವಿದ್ಯೆಯೂ ಮಾಯೆಯೂ ಒಂದೇ ಎಂದು ಕರೆದಿರುವದನ್ನು ಇಲ್ಲಿ ಲಕ್ಷಿಸಬೇಕು. ಸೂತ್ರಭಾಷ್ಯ ೨–೧–೧೪ರಲ್ಲಿ ಅವಿದ್ಯಾಕಲ್ಪಿತನಾಮರೂಪಗಳಿಗೆ ಮಾಯೆಯೆಂಬ ಹೆಸರನ್ನು ಕೊಟ್ಟಿದೆ.

ರೂಪದ್ದೂ ಅಲ್ಲ. ಮಹಾದ್ಭುತ(ರೂಪವಾಗಿರುತ್ತದೆ.) ಅನಿರ್ವಚನೀಯ ರೂಪವಾಗಿರುತ್ತದೆ.[1]

ಶುದ್ಧಾದ್ವಯಬ್ರಹ್ಮವಿಬೋಧನಾಶ್ಯಾ
　ಸರ್ಪಭ್ರಮೋ ರಜ್ಜುವಿವೇಕತೋ ಯಥಾ ।
ರಜಸ್ತಮಃ ಸತ್ತ್ವಮಿತಿ ಪ್ರಸಿದ್ಧಾ
　ಗುಣಾಸ್ತದೀಯಾಃ ಪ್ರಥಿತೈಃ ಸ್ವಕಾರ್ಯೈಃ ॥ ೧೦೯ ॥

೧೦೯. ಸರ್ಪವೆಂಬ ಭ್ರಾಂತಿಯು ಇದು ರಜ್ಜುವೆಂಬ ವಿವೇಕದಿಂದ ಹೇಗೆ (ಹೋಗುವದೋ) ಹಾಗೆ ಅದ್ವಿತೀಯವಾದ ಶುದ್ಧಬ್ರಹ್ಮದ ಜ್ಞಾನದಿಂದ ಇದು ನಾಶವಾಗುವದು. ತಮ್ಮ ತಮ್ಮ ಪ್ರಸಿದ್ಧಕಾರ್ಯಗಳಿಂದ ತಿಳಿದುಬರುವ ರಜಸ್ಸು, ತಮಸ್ಸು, ಸತ್ತ್ವ– ಎಂಬ ಮೂರು ಗುಣಗಳು[2] ಅದಕ್ಕೆ (ಉಂಟು).

## ಅವಿದ್ಯೆಯ ಗುಣಗಳೂ ಶಕ್ತಿಗಳೂ

ವಿಕ್ಷೇಪಶಕ್ತೀ ರಜಸಃ ಕ್ರಿಯಾತ್ಮಿಕಾ
　ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ।
ರಾಗಾದಯೋಽಸ್ಯಾಃ ಪ್ರಭವನ್ತಿ ನಿತ್ಯಂ
　ದುಃಖಾದಯೋ ಯೇ ಮನಸೋ ವಿಕಾರಾಃ ॥ ೧೧೦ ॥

ಕಾಮಃ ಕ್ರೋಧೋ ಲೋಭದಮ್ಭಾದ್ಯಸೂಯಾ-
　ಹಙ್ಕಾರೇರ್ಷ್ಯಾ ಮತ್ಸರಾದ್ಯಾಸ್ತು ಘೋರಾಃ ।
ಧರ್ಮಾ ಏತೇ ರಾಜಸಾಃ ಪುಂಪ್ರವೃತ್ತಿ-
　ರ್ಯಸ್ಮಾದೇಷಾ[3] ತದ್ರಜೋ ಬನ್ಧಹೇತುಃ ॥ ೧೧೧ ॥

೧೧೦-೧೧೧. ವಿಕ್ಷೇಪಶಕ್ತಿಯು[4] ರಜೋಗುಣಕ್ಕೆ ಸೇರಿದ್ದು, ಕ್ರಿಯಾತ್ಮಕವಾದದ್ದು. ಬಹುಕಾಲದಿಂದಲೂ ಇದರಿಂದ ಪ್ರವೃತ್ತಿಯು ಉಂಟಾಗುತ್ತಾ ಬಂದಿರುತ್ತದೆ. ರಾಗಾದಿಗಳು, ದುಃಖಾದಿಗಳು– ಎಂಬ ಮನಸ್ಸಿನ ವಿಕಾರಗಳಿವೆಯಲ್ಲ, (ಅವು) ಇದರಿಂದ ಉಂಟಾಗುತ್ತಿರುವವು. ಕಾಮ, ಕ್ರೋಧ,

1. ಈ ಅನಿರ್ವಚನೀಯವಾದಕ್ಕೆ ಪೀಠಿಕೆಯನ್ನು ನೋಡಿ.

2. ಸಾಂಖ್ಯರ ಪ್ರಕೃತಿಯನ್ನೇ ಇಲ್ಲಿ ಅವ್ಯಕ್ತವೆಂದೂ ಅವಿದ್ಯೆಯೆಂದೂ ಕರೆದಿದೆ ; ಅದನ್ನು ಅನಿರ್ವಾಚ್ಯವೆಂದು ಕರೆದಿರುವದು ಇಲ್ಲಿ ವಿಶೇಷವು. ರಜ್ಜುಸರ್ಪಕ್ಕೆ ಹೋಲಿಸಿರುವದರಿಂದ ಅದು ಅಧ್ಯಸ್ತವೆಂದೂ ಆಗಿದೆ. ಈ ವಿಷಯಕ್ಕೆ ಪೀಠಿಕೆಯನ್ನು ನೋಡಿ.

3. 'ಯಸ್ಮಾದೇತತ್' ಪಾ॥

4. ಶಂ. ಗೀ. ೩-೧೪.

ಲೋಭ, ದಂಭ, ಮುಂತಾದವು, ಅಸೂಯೆ, ಅಹಂಕಾರ, ಹ.ರುಡು, ಹೊಟ್ಟೆ ಕಿಚ್ಚು–ಮುಂತಾದ ಈ ಘೋರಧರ್ಮಗಳೆಲ್ಲ ರಾಜಸಗಳೇ. ಇದರಿಂದ ಪುರುಷ ನಿಗೆ ಈ ಪ್ರವೃತ್ತಿಯುಂಟಾಗುತ್ತಿರುವದು ; ಈ (ರಜಸ್ಸೇ) ಬಂಧಕ್ಕೆ ಕಾರಣ (ವಾಗಿರುತ್ತದೆ).

ಏಷಾವೃತಿರ್ನಾಮ ತಮೋಗುಣಸ್ಯ
ಶಕ್ತಿರ್ಯಯಾ ವಸ್ತ್ವವಭಾಸತೇಽನ್ಯಥಾ ।
ಸೈಷಾ ನಿದಾನಂ ಪುರುಷಸ್ಯ ಸಂಸೃತೇ-
ರ್ವಿಕ್ಷೇಪಶಕ್ತೇಃ ಪ್ರಸರಸ್ಯ ಹೇತುಃ ॥ ೧೧೨ ॥

೧೧೨. ಯಾವದರಿಂದ ವಸ್ತುವು ಮತ್ತೊಂದು ಪ್ರಕಾರವಾಗಿ ಕಾಣು ತ್ತದೆಯೋ ಆ ಇದೇ ತಮೋಗುಣದ ಆವರಣವೆಂಬ ಶಕ್ತಿಯು. ಮನುಷ್ಯನು ಸಂಸಾರದಲ್ಲಿ ತೊಳಲುವದಕ್ಕೆ ಇದೇ ಕಾರಣವು. ವಿಕ್ಷೇಪಶಕ್ತಿಯು ಹರಡಿ ಕೊಳ್ಳುವದಕ್ಕೆ ಇದೇ ಕಾರಣವು.

ಪ್ರಜ್ಞಾವಾನಪಿ ಪಣ್ಡಿತೋಽಪಿ ಚತುರೋಽಪ್ಯತ್ಯನ್ತಸೂಕ್ಷ್ಮಾರ್ಥದೃಗ್
ವ್ಯಾಲೀಢಸ್ತಮಸಾ ನ ವೇತ್ತಿ ಬಹುಧಾ ಸಂಬೋಧಿತೋಽಪಿ ಸ್ಫುಟಮ್ ।
ಭ್ರಾನ್ತ್ಯಾರೋಪಿತಮೇವ ಸಾಧು ಕಲಯತ್ಯಾಲಮ್ಬತೇ ತದ್ಗುಣಾನ್
ಹನ್ತಾಸೌ ಪ್ರಬಲಾ ದುರನ್ತತಮಸಃ ಶಕ್ತಿರ್ಮಹತ್ಯಾವೃತಿಃ ॥ ೧೧೩ ॥

೧೧೩. ಜಾಣನಾಗಿದ್ದರೂ ಪಂಡಿತನಾಗಿದ್ದರೂ ಚತುರನಾಗಿದ್ದರೂ ಅತ್ಯಂತಸೂಕ್ಷ್ಮವಿಷಯಗಳನ್ನು ನೋಡಿ ತಿಳಿಯಬಲ್ಲವನಾಗಿದ್ದರೂ ಮನುಷ್ಯನು ತಮಸ್ಸಿಗೆ ಸಿಕ್ಕಿಬಿದ್ದರೆ ಸರಿ, (ಎಷ್ಟೇ) ಸ್ಫುಟವಾಗಿ ತಿಳಿಯಹೇಳಿದರೂ (ನಿಜ ವನ್ನು) ತಿಳಿದುಕೊಳ್ಳದೆ ಇರುವನು. ಭ್ರಾಂತಿಯಿಂದ ತಾನು ಕಲ್ಪಿಸಿಕೊಂಡದ್ದೇ ಸರಿಯೆಂದು ತಿಳಿಯುತ್ತಾನೆ. (ವಸ್ತುವಿನ) ಆ ಗುಣಗಳನ್ನೇ ಆಶ್ರಯಿಸಿಕೊಂಡು ಬಿಡುತ್ತಾನೆ. ಅಹಾ! ಈ ಕಡೆಗಾಣದ ತಮಸ್ಸಿನ ಮಹಾಶಕ್ತಿಯಾದ ಆವರಣವು (ಎಷ್ಟು) ಪ್ರಬಲವಾದದ್ದು !

ಅಭಾವನಾ ವಾ ವಿಪರೀತಭಾವನಾ
ಸಂಭಾವನಾ ವಿಪ್ರತಿಪತ್ತಿರಸ್ಯಾಃ ।
ಸಂಸರ್ಗಯುಕ್ತಂ ನ ವಿಮುಞ್ಚತಿ ಧ್ರುವಂ
ವಿಕ್ಷೇಪಶಕ್ತಿಃ ಕ್ಷಪಯತ್ಯಜಸ್ರಮ್ ॥ ೧೧೪ ॥

1. ಆವರಣವು ಬರಿಯ ಮುಸುಕೇ ಹೊರತು ವಸ್ತುವನ್ನು ಬೇರೊಂದೆಂದು ತೋರಿಸುವದಿಲ್ಲ. ಅದ್ದರಿಂದ ಆ ಆವರಣ ಮುಸುಕಿರುವದರಿಂದ ವಿಕ್ಷೇಪಶಕ್ತಿಯು ವಸ್ತುವನ್ನು ಬೇರೊಂದೆಂದು ತೋರಿಸುತ್ತದೆಯೋ ಎಂದು ಅರ್ಥವನ್ನು ಮಾಡಬೇಕು.

೧೧೫. ಇವರ ಸಂಬಂಧದಿಂದ ಕೂಡಿದಾತನನ್ನು ಅಭಾವನೆ (ತಿಳಿಯದಿರುವದು), ವಿಪರೀತಭಾವನೆ (ತಪ್ಪಾಗಿ ತಿಳಿಯುವದು), ಅಸಂಭಾವನೆ (ಹೀಗಿರಲಾರದೆಂದು ತಿಳಿಯುವದು, ವಿಪ್ರತಿಪತ್ತಿ[1] (ವಿರುದ್ಧವಾಗಿ ತಿಳಿದುಕೊಳ್ಳುವದು)—ಇವು ಬಿಡುವದಿಲ್ಲವೆಂಬುದು ನಿಶ್ಚಯವು. (ಅವನನ್ನು) ವಿಕ್ಷೇಪಶಕ್ತಿಯು ಯಾವಾಗಲೂ ಸವೆಯಿಸುತ್ತಲೇ ಇರುವದು.

ಅಜ್ಞಾನಮಾಲಸ್ಯಜಡತ್ವನಿದ್ರಾ-
ಪ್ರಮಾದಮೂಢತ್ವಮುಖಾಸ್ತಮೋಗುಣಾಃ ।
ಏತೈಃ ಪ್ರಯುಕ್ತೋ ನ ಹಿ ವೇತ್ತಿ ಕಿಂಚಿ-
ನ್ನಿದ್ರಾಲುವತ್ ಸ್ತಮ್ಭವದೇವ ತಿಷ್ಠತಿ ॥೧೧೬॥

೧೧೬. ಅಜ್ಞಾನ, ಆಲಸ್ಯ, ಜಡತ್ವ, ನಿದ್ರೆ, ಅವಧಾನವಿಲ್ಲದಿರುವದು, ಮೂಢತನ[2]—ಮುಂತಾದವುಗಳು ತಮಸ್ಸಿನ ಗುಣಗಳು[3]; ಇವುಗಳಿಂದ ಕೂಡಿರುವವನಿಗೆ ಏನೊಂದೂ ತಿಳಿಯುವದಿಲ್ಲ. ಅವನು ನಿದ್ರಿಸುವವನಂತೆಯೂ ಕಂಬದಂತೆಯೂ ಜಡವಾಗಿರುತ್ತಾನೆ.

ಸತ್ತ್ವಂ ವಿಶುದ್ಧಂ ಜಲವತ್ತಥಾಪಿ
ತಾಭ್ಯಾಂ ಮಿಲಿತ್ವಾ ಸರಣಾಯ[4] ಕಲ್ಪತೇ ।
ಯತ್ರಾತ್ಮಬಿಮ್ಬಃ ಪ್ರತಿಬಿಮ್ಬಿತಃ ಸನ್
ಪ್ರಕಾಶಯತ್ಯರ್ಕ ಇವಾಖಿಲಂ ಜಗತ್[5] ॥೧೧೭॥

೧೧೭. ಸತ್ತ್ವಗುಣವು ನೀರಿನಂತೆ ನಿರ್ಮಲವಾಗಿರುತ್ತದೆ. ಆದರೂ (ರಜಸ್ಸು, ತಮಸ್ಸು—) ಈ ಎರಡರೊಡನೆ ಕಲೆತುಕೊಂಡರೆ ಸಂಸಾರಕ್ಕೆ[6] ಕಾರಣವಾಗುತ್ತದೆ. ಇದರಲ್ಲಿ ಆತ್ಮಬಿಂಬವು ಪ್ರತಿಬಿಂಬಿತವಾಗಿ ಸೂರ್ಯನಂತೆ ಜಗತ್ತೆಲ್ಲವನ್ನೂ ಬೆಳಗುತ್ತದೆ.

---

1. ವಿಪರೀತಭಾವನೆ, ವಿಪ್ರತಿಪತ್ತಿ—ಎಂಬ ಎರಡು ಶಬ್ದಗಳೂ ಒಟ್ಟಿಗೆ ಬಂದಿರುವದರಿಂದ ಅವೆರಡಕ್ಕೂ ಏನಾದರೂ ತಾರತಮ್ಯವನ್ನು ಕಲ್ಪಿಸಬೇಕು. ಇಂಥ ಪುನರುಕ್ತಿಗಳು ಈ ಗ್ರಂಥದಲ್ಲಿ ಅಲ್ಲಲ್ಲಿ ಕಂಡುಬರುತ್ತವೆ.

2. ಜಡತ್ವವೆಂಬುದು ಚೇತನವಲ್ಲದ ಕಲ್ಲು, ಮಣ್ಣು—ಮುಂತಾದವುಗಳ ಧರ್ಮವು; ಮೂಢತನವು ವಿಷಯವನ್ನರಿಯಲಾರದ ಚೇತನದ ಧರ್ಮವು.

3. ೧೯. ೭-೮ ನೋಡಿ.

4. 'ಶರಣಾಯ' ಪಾ॥

5. 'ಜಡವತ್' ಎಂದು ಪಾ॥

6. 'ಶರಣಾಯ' ಎಂಬ ಪಾಠಕ್ಕೆ ರಕ್ಷಣೆಗಾಗಿ ಎಂಬರ್ಥವಾಗುತ್ತದೆ: ಅದು ಪ್ರಕೃತೋಪಯೋಗಿಯಲ್ಲ.

ಮಿಶ್ರಸ್ಯ ಸತ್ತ್ವಸ್ಯ ಭವನ್ತಿ ಧರ್ಮಾ-
ಸ್ತ್ವಮಾನಿತಾದ್ಯಾ ನಿಯಮಾ ಯಮಾದ್ಯಾಃ ।
ಶ್ರದ್ಧಾ ಚ ಭಕ್ತಿಶ್ಚ ಮುಮುಕ್ಷುತಾ ಚ
ದೈವೀ ಚ ಸಂಪತ್ತಿರಸನ್ನಿವೃತ್ತಿಃ ॥೧೧೭॥

೧೧೭. ಮಿಶ್ರಸತ್ತ್ವಕ್ಕೆ[1] ಅಮಾನಿತ್ವವೇ ಮುಂತಾದ ಯಮನಿಯಮಾದಿಗಳೂ[2] ಶ್ರದ್ಧೆ, ಭಕ್ತಿ, ಮುಮುಕ್ಷುತ್ವ, ದೈವಸಂಪತ್ತಿ, ಕೆಟ್ಟದ್ದನ್ನು ಬಿಡುವದು-ಎಂಬಿವೂ ಧರ್ಮಗಳಾಗಿರುತ್ತವೆ.

ವಿಶುದ್ಧಸತ್ತ್ವಸ್ಯ ಗುಣಾಃ ಪ್ರಸಾದಃ
ಸ್ವಾತ್ಮಾನುಭೂತಿಃ ಪರಮಾ ಪ್ರಶಾನ್ತಿಃ
ತೃಪ್ತಿಃ ಪ್ರಹರ್ಷಃ ಪರಮಾತ್ಮನಿಷ್ಠಾ
ಯಯಾ ಸದಾನನ್ದರಸಂ ಸಮೃಚ್ಛತಿ ॥೧೧೮॥

೧೧೮. (ಮನಸ್ಸು) ಪ್ರಸನ್ನವಾಗಿರುವದು, ಆತ್ಮಾನುಭವ, ಹೆಚ್ಚಿನ ಶಾಂತಿ, ತೃಪ್ತಿ, ಹೆಚ್ಚಿನ ಹರ್ಷ, ಉತ್ತಮವಾದ ಆನಂದರಸವನ್ನು ದೊರಕಿಸಿ ಕೊಡುತ್ತದೆಯಲ್ಲ, ಆ ಪರಮಾತ್ಮನಿಷ್ಠೆ-ಇವು ವಿಶುದ್ಧಸತ್ತ್ವದ ಗುಣಗಳು.

## ಕಾರಣಶರೀರ

ಅವ್ಯಕ್ತಮೇತತ್ ತ್ರಿಗುಣೈರ್ನಿರುಕ್ತಂ
ತತ್ ಕಾರಣಂ ನಾಮ ಶರೀರಮಾತ್ಮನಃ ।
ಸುಷುಪ್ತಿರೇತಸ್ಯ ವಿಭಕ್ತ್ಯವಸ್ಥಾ
ಪ್ರಲೀನಸರ್ವೇನ್ದ್ರಿಯಬುದ್ಧಿವೃತ್ತಿಃ ॥೧೧೯॥

೧೧೯. ಈ ಮೂರು ಗುಣಗಳಿಂದ (ಕೂಡಿದ್ದೆಂದು) ವರ್ಣಿಸಿರುವದೇ ಅವ್ಯಕ್ತವು. ಇದು ಆತ್ಮನ ಕಾರಣಶರೀರವೆನಿಸುವದು.[4] ಸಕಲೇಂದ್ರಿಯಗಳ

1. ರಜಸ್ತಮೋಗುಣಗಳ ಬೆರಕೆಯಿರುವ ಸತ್ತ್ವಕ್ಕೆ.

2. ಗೀ. ೧೩-೭ರಿಂದ ೧೧ರವರೆಗೆ ಹೇಳಿರುವ ಗುಣಗಳು. ಇವುಗಳಲ್ಲಿ ಶರೀರಪ್ರಧಾನವಾಗಿರುವವನ್ನು ನಿಯಮವೆಂದೂ ಮನಃಪ್ರಧಾನವಾಗಿರುವದನ್ನು ಯಮವೆಂದೂ ಭಾವಿಸಿರುತ್ತದೆ.

3. ರಜಸ್ತಮೋಗುಣಗಳು ಬೆರೆಯದ ಸತ್ತ್ವದ.

4. ಶಂ. ಗೀ. ೧೩-೫ರಲ್ಲಿ ಅವ್ಯಾಕೃತವನ್ನು ಅಜ್ಞಾನವೆಂದೂ ಕಾರಣಶರೀರವೆಂದೂ ಕರೆದಿದೆ. ಅವ್ಯಕ್ತವನ್ನು ಕಾರಣಶರೀರವೆಂದು ಕರೆದಿರುವದು ಪ್ರಸ್ಥಾನತ್ರಯಭಾಷ್ಯದಲ್ಲಿ ಪ್ರಕಟವಾಗಿ ಕಂಡುಬರುವದಿಲ್ಲ.

ಮತ್ತು ಬುದ್ಧಿಯ ವೃತ್ತಿಗಳೂ ಲಯವಾಗುವ ಸುಷುಪ್ತಿಯೇ ಇದಕ್ಕೆ ಗೊತ್ತಾದ ಅವಸ್ಥೆಯು.[1]

ಸರ್ವಪ್ರಕಾರಪ್ರಮಿತಿಪ್ರಶಾನ್ತಿ-
ರ್ಬೀಜಾತ್ಮನಾವಸ್ಥಿತಿರೇವ ಬುದ್ಧೇಃ ।
ಸುಷುಪ್ತಿರೇತಸ್ಯ ಕಿಲ ಪ್ರತೀತಿಃ
ಕಿಞ್ಚಿನ್ನ ವೇದ್ಮೀತಿ ಜಗತ್ಪ್ರಸಿದ್ಧೇಃ ॥ ೧೨೦ ॥

೧೨೦. ಸರ್ವವಿಧವಾದ ಅರಿವುಗಳೂ[2] ಶಾಂತಿಯಾಗುವದು, ಎಂದರೆ ಬುದ್ಧಿಯು (ಅಜ್ಞಾನ)ಬೀಜರೂಪದಿಂದ ನಿಲ್ಲುವ ಅವಸ್ಥೆಯೇ ಸುಷುಪ್ತಿಯು.[3] 'ನನಗೆ ಏನೂ ತಿಳಿಯುವದಿಲ್ಲ' ಎಂಬ ಲೋಕಪ್ರಸಿದ್ಧಿಯಿಂದ ಇದು[4] ಅನುಭವಕ್ಕೆ ಬರುತ್ತದೆ.[5]

## ಅನಾತ್ಮನಿರೂಪಣದ ಉಪಸಂಹಾರ

ದೇಹೇನ್ದ್ರಿಯಪ್ರಾಣಮನೋಽಹಮಾದಯಃ
ಸರ್ವೇ ವಿಕಾರಾ ವಿಷಯಾಃ ಸುಖಾದಯಃ ।
ವ್ಯೋಮಾದಿಭೂತಾನ್ಯಖಿಲಂ ಚ ವಿಶ್ವ-
ಮವ್ಯಕ್ತಪರ್ಯನ್ತಮಿದಂ ಹ್ಯನಾತ್ಮಾ ॥ ೧೨೧ ॥

೧೨೧. ದೇಹ, ಇಂದ್ರಿಯಗಳು, ಪ್ರಾಣ, ಮನಸ್ಸು, ಅಹಂಕಾರ-ಮುಂತಾದ ಎಲ್ಲಾ ವಿಕಾರಗಳು, ಸುಖವೇ ಮುಂತಾದ ವಿಷಯಗಳು, ಆಕಾಶವೇ ಮುಂತಾದ ಭೂತಗಳು – ಅವ್ಯಕ್ತದವರೆಗಿನ ಇದೆಲ್ಲವೂ ಅನಾತ್ಮವು.

1. ನಿರ್ವಿಷಯವಾದ ಆತ್ಮಾನಂದವು ಸುಷುಪ್ತಿಯಲ್ಲಿ ತೋರುವದೆಂದು ಹಿಂದೆ ೧೦೬ನೆಯ ಶ್ಲೋಕದಲ್ಲಿ ಹೇಳಿರುವದನ್ನು ಇದಕ್ಕೆ ಹೋಲಿಸಿರಿ. ಶಂ. ಗೀ. ಯಲ್ಲಿ 'ತಮಸ್ತ್ವಜ್ಞಾನ ಜಂ' (೧೪–೭) ಎಂಬಲ್ಲಿ ಅಜ್ಞಾನವೆಂದರ ಜ್ಞಾನಾಭಾವವಲ್ಲವೆಂದು ಹೇಳಿರುವದನ್ನು ಇಲ್ಲಿ ಅನುಸಂಧಾನಮಾಡಬೇಕು.

2. ಘಟಜ್ಞಾನ, ಪಟಜ್ಞಾನ- ಮುಂತಾದ ವಿಶೇಷಜ್ಞಾನಗಳು.

3. ಬುದ್ಧಿಯು ಬೀಜರೂಪದಲ್ಲಿರುವದೆಂಬ ವಿಷಯಕ್ಕೆ ಸೂ. ಭಾ. ೩-೨-೯ರ ನೂ ಟೀಕೆಯನ್ನೂ ನೋಡಿ.

4. 'ಏತಸ್ಯ' ಎಂಬುದಕ್ಕೆ ಬದಲು 'ಅತ್ರಾಸ್ಯ' ಎಂದಿರುವ ಪಾ॥ ಪಾಠಕ್ಕೆ 'ಇದು ಇಲ್ಲಿ' ಎಂಬ ಅನುವಾದ.

5. ಈ ಅನುಭವದಿಂದ ಅವಿದ್ಯೆಯನ್ನು ಸಾಧಿಸಿರುವದು ಪ್ರಸ್ಥಾನತ್ರಯಭಾಷ್ಯದಲ್ಲಿ ಕಾಣುವದಿಲ್ಲ.

ಮಾಯಾ ಮಾಯಾಕಾರ್ಯಂ ಸರ್ವಂ ಮಹದಾದಿದೇಹಪರ್ಯನ್ತಮ್ |
ಅಸದಿದಮನಾತ್ಮಕಂ ತ್ವಂ[1] ವಿದ್ಧಿ ಮರುಮರೀಚಿಕಾಕಲ್ಪಮ್ ||೧೨೩||

೧೨೩. ಮಾಯೆ, ಮಹದಾದಿಯಾಗಿ ದೇಹಪರ್ಯಂತವಾದ ಮಾಯಾಕಾರ್ಯ, ಇದು ಬಿಸಿಲುಕುದುರೆಯಂತೆ ಅಸತ್ತಾಗಿರುವ ಅನಾತ್ಮವು ಎಂದು ನೀನು ತಿಳಿದುಕೊ.

## ಆತ್ಮಸ್ವರೂಪನಿರೂಪಣೆ

ಅಥ ತೇ ಸಂಪ್ರವಕ್ಷ್ಯಾಮಿ ಸ್ವರೂಪಂ ಪರಮಾತ್ಮನಃ |
ಯದ್ವಿಜ್ಞಾಯ ನರೋ ಬನ್ಧಾನ್ಮುಕ್ತಃ ಕೈವಲ್ಯಮಶ್ನುತೇ ||೧೨೪||

೧೨೪. ಇನ್ನು ನಿನಗೆ ಪರಮಾತ್ಮನ ಸ್ವರೂಪವನ್ನು ಹೇಳುವೆನು, ಇದನ್ನು ತಿಳಿದುಕೊಂಡರೆ ಮನುಷ್ಯನು ಬಂಧದಿಂದ ಮುಕ್ತನಾಗಿ ಕೈವಲ್ಯವನ್ನು ಹೊಂದುತ್ತಾನೆ.

ಅಸ್ತಿ ಕಶ್ಚಿತ್ ಸ್ವಯಂ ನಿತ್ಯಮಹಂಪ್ರತ್ಯಯಲಮ್ಬನಃ |
ಅವಸ್ಥಾತ್ರಯಸಾಕ್ಷೀ ಸನ್ ಪಞ್ಚಕೋಶವಿಲಕ್ಷಣಃ ||೧೨೫||

೧೨೫. ಅಹಂಪ್ರತ್ಯಯಕ್ಕೆ ಯಾವಾಗಲೂ ಆಧಾರನಾಗಿರುವ[2] ಆತ್ಮನೊಬ್ಬನುಂಟು. ಅವನು ಅವಸ್ಥಾತ್ರಯಕ್ಕೆ ಸಾಕ್ಷಿಯು, ಪಂಚಕೋಶಗಳಿಗಿಂತ ಬೇರೆಯ ಸ್ವರೂಪದವನು.

ಯೋ ವಿಜಾನಾತಿ ಸಕಲಂ ಜಾಗ್ರತ್ಸ್ವಪ್ನಸುಷುಪ್ತಿಷು |
ಬುದ್ಧಿತದ್ವೃತ್ತಿಸದ್ಭಾವಮಭಾವಮಹಮಿತ್ಯಯಮ್ ||೧೨೬||

೧೨೬. ಯಾವ ಇವನು ಎಚ್ಚರಕನಸುತನಿನಿದ್ರೆಗಳಲ್ಲಿ ಬುದ್ಧಿ, ಅದರ ವೃತ್ತಿಗಳ ಇರವು, ಅವುಗಳ ಅಭಾವ-(ಈ ಎಲ್ಲವನ್ನೂ) ನಾನು ಎಂದು ಅರಿಯುತ್ತಿರುವನು.

ಯಃ ಪಶ್ಯತಿ ಸ್ವಯಂ ಸರ್ವಂ ಯಂ ನ ಪಶ್ಯತಿ[3] ಕಶ್ಚನ |
ಯಶ್ಚೇತಯತಿ ಬುದ್ಧ್ಯಾದಿ ನ ತು ಯಂ[4] ಚೇತಯತ್ಯಯಮ್ ||

---

1. 'ಅನಾತ್ಮತತ್ತ್ವಂ' ಎಂಬ ವಾ|| ಪಾಠಕ್ಕಿಂತ ಇದೇ ಮೇಲು.
2. ಆತ್ಮನು ಅಹಂಪ್ರತ್ಯಯಕ್ಕೆ ಯಾವಾಗಲೂ ವಿಷಯನಾಗಿರುವದಿಲ್ಲ; ಉದಾಹರಣೆಗೆ ಸುಷುಪ್ತಿಯಲ್ಲಿ ಆತ್ಮನಿದ್ದರೂ ಅಹಂಪ್ರತ್ಯಯವಿರುವದಿಲ್ಲ. ಆದರೂ ಅಹಂಪ್ರತ್ಯಯಕ್ಕೆ ಆಧಾರವು ಅವನೇ.
3. 'ವ್ಯಶ್ನೋತಿ' ವಾ||
4. 'ನ ತದ್ಯಂ ಚೇತಯತ್ಯಯಮ್' ಎಂಬ ಆ|| ವಾ|| ಪಾಠಗಳಿಗಿಂತ ಕ|| ಪಾಠವೇ ಮೇಲು.

೧೨೩. ತಾನು ಎಲ್ಲವನ್ನೂ ನೋಡುತ್ತಿರುತ್ತಾನೆ, ಅವನನ್ನು ಮಾತ್ರ ಜನರೊಬ್ಬರೂ ನೋಡಲಾರರು.[1] ಅವನು ಬುದ್ಧಿ ಮುಂತಾದದ್ದನ್ನು ಅರಿಯುತ್ತಿರುತ್ತಾನೆ, ಉಂಟುಮಾಡುತ್ತಿರುತ್ತಾನೆ; ಆದರೆ ಅದು ಅವನನ್ನು ಅರಿಯುವದಿಲ್ಲ.[2]

ಯೇನ ವಿಶ್ವಮಿದಂ ವ್ಯಾಪ್ತಂ ಯಂ ನ ವ್ಯಾಪ್ನೋತಿ ಕಿಞ್ಚನ ।
ಅಭಾರೂಪಮಿದಂ ಸರ್ವಂ ಯಂ ಭಾನ್ತಮನುಭಾತ್ಯಯಮ್ ॥೧೨೪॥

೧೨೪. ಅವನಿಂದ ಈ ವಿಶ್ವವು ವ್ಯಾಪ್ತವಾಗಿರುತ್ತದೆ[3]; (ಆದರೆ) ಅವನನ್ನು ಯಾವದೂ ವ್ಯಾಪಿಸಿಕೊಂಡಿರುವದಿಲ್ಲ.[4] ಪ್ರಕಾಶರೂಪವಲ್ಲದ ಇದೆಲ್ಲವೂ ಅವನು ಬೆಳಗುವದನ್ನೇ ಅನುಸರಿಸಿ ಬೆಳಗುತ್ತಿರುವದು.[5]

ಯಸ್ಯ ಸನ್ನಿಧಿಮಾತ್ರೇಣ ದೇಹೇನ್ದ್ರಿಯಮನೋಧಿಯಃ ।
ವಿಷಯೇಷು ಸ್ವಕೀಯೇಷು ವರ್ತನ್ತೇ ಪ್ರೇರಿತಾ ಇವ ॥೧೨೫॥

೧೨೫. ಅವನು ಹತ್ತಿರವಿರುವ ಮಾತ್ರದಿಂದ ದೇಹ, ಇಂದ್ರಿಯ, ಮನಸ್ಸು, ಬುದ್ಧಿ–ಇವುಗಳು ಪ್ರೇರಿತವಾದಂತೆ ತಮ್ಮ ತಮ್ಮ ವಿಷಯಗಳಲ್ಲಿ ತೊಡಗುತ್ತಿರುವವು.[6]

ಅಹಙ್ಕಾರಾದಿದೇಹಾನ್ತಾ ವಿಷಯಾಶ್ಚ ಸುಖಾದಯಃ ।
ವೇದ್ಯನ್ತೇ ಘಟವದ್ ಯೇನ ನಿತ್ಯಬೋಧಸ್ವರೂಪಿಣಾ ॥೧೨೬॥

೧೨೬. ಅಹಂಕಾರವು ಮೊದಲಾಗಿ ದೇಹದವರೆಗಿನ (ಆಧ್ಯಾತ್ಮಿಕಭಾಗಗಳೂ) ಸುಖವೇ ಮುಂತಾದ ವಿಷಯಗಳೂ ನಿತ್ಯಜ್ಞಾನಸ್ವರೂಪನಾದ[7] ಅವನಿಂದ ಗಡಿಗೆಯಂತೆ ಅರಿಯಲ್ಪಡುತ್ತಿರುವವು.

1. ಬೃ. ೩–೪–೨ರ ಮತ್ತು –೩–೧೩ರ ಸೂಚನೆ.

2. ಅಂತಃಕರಣದಲ್ಲಿ ಉಂಟಾಗುವ ವೃತ್ತಿಗಳು ಚಿದ್ವ್ಯಾಪ್ತವಾಗಿ ಚಿದಾಭಾಸವಾಗಿಯೇ ಉಂಟಾಗುವದರಿಂದ ವಿಷಯಗಳನ್ನು ಬೆಳಗಬಲ್ಲವಾಗಿರುತ್ತವೆ. ಆದರೆ ಆತ್ಮನು ಸ್ವತಃ ಚಿದ್ರೂಪನಾಗಿರುವದರಿಂದ ಅವನು ವೃತ್ತಿಜ್ಞಾನಕ್ಕೆ ವಿಷಯನೂ ಅಲ್ಲ, ಅವುಗಳಿಂದ ಅವನಿಗೆ ಆಗಬೇಕಾದ ಅರಿವಿನ ಫಲವು ಏನೂ ಇರುವದಿಲ್ಲ.

3. ಗೀ. ೧೧–೪೦.

4. ಕ. ೨–೫–೧. ಎಲ್ಲವೂ ಆತ್ಮನ ಕಾರ್ಯವಾದ್ದರಿಂದ ಕಾರಣವಾದ ಆತ್ಮನನ್ನು ಮೀರಿ ಅದನ್ನೂ ವ್ಯಾಪಿಸಿಕೊಂಡಿರುವ ಸಂಭವವಿಲ್ಲ.

5. ಮುಂ. ೨-೨-೧೦ರ ಅಭಿಪ್ರಾಯ.

6. ಕೇ. ೧–೧.

7. ವೃತ್ತಿಜ್ಞಾನದಂತೆ ಈ ಸ್ವರೂಪಜ್ಞಾನವು ನಾಶವಾಗುವದಲ್ಲ; ಬೃ. ೪-೩-೩೦.

ಏಷೋಽನ್ತರಾತ್ಮಾ ಪುರುಷಃ ಪುರಾಣೋ
ನಿರನ್ತರಾಖಣ್ಡಸುಖಾನುಭೂತಿಃ ।
ಸದೈಕರೂಪಃ ಪ್ರತಿಬೋಧಮಾತ್ರೋ
ಯೇನೇಷಿತಾ ವಾಗಸವಶ್ಚರನ್ತಿ ॥೧೩೦॥

೧೩೦. ಈ ಅಂತರಾತ್ಮನೇ ಪುರಾಣಪುರುಷನು, ನಿತ್ಯಾಖಂಡಸುಖಾನುಭವಸ್ವರೂಪನು, ಯಾವಾಗಲೂ ಒಂದೇ ರೂಪದಿಂದ ಇರುವವನು, ಜ್ಞಾನಮಾತ್ರನಾಗಿರುವನು. ಅವನ ಇಚ್ಛಾಮಾತ್ರದಿಂದ ವಾಕ್ಕೂ ಪ್ರಾಣಗಳೂ ವ್ಯಾಪಾರಮಾಡುತ್ತಿರುವವು.[1]

ಅತ್ರೈವ ಸತ್ತ್ವಾತ್ಮನಿ[2] ಧೀಗುಹಾಯಾ-
ಮವ್ಯಾಕೃತಾಕಾಶ ಉರುಪ್ರಕಾಶಃ ।
ಆಕಾಶ ಉಚ್ಚೈ ರವಿವತ್ ಪ್ರಕಾಶತೇ
ಸ್ವತೇಜಸಾ ವಿಶ್ವಮಿದಂ ಪ್ರಕಾಶಯನ್ ॥೧೩೧॥

೧೩೧. ಅವನು ಈ ಶರೀರದಲ್ಲಿಯೇ ಪರಮಪ್ರಕಾಶನಾಗಿ ಬುದ್ಧಿಯೆಂಬ ಗುಹೆಯಲ್ಲಿ ಅವ್ಯಾಕೃತಾಕಾಶದಲ್ಲಿ[3]–ಆಕಾಶದಲ್ಲಿ ಮೇಲುಗಡೆಯಲ್ಲಿ ಸೂರ್ಯನಂತೆ ತನ್ನ ತೇಜಸ್ಸಿನಿಂದ ಈ ವಿಶ್ವವನ್ನು ಬೆಳಗುತ್ತಾ ಪ್ರಕಾಶಿಸುತ್ತಿರುವನು.

ಜ್ಞಾತಾ ಮನೋಽಹಙ್ಕೃತಿವಿಕ್ರಿಯಾಣಾಂ
ದೇಹೇನ್ದ್ರಿಯಪ್ರಾಣಕೃತಕ್ರಿಯಾಣಾಮ್ ।
ಅಯೋಽಗ್ನಿವತ್ ತಾನನುವರ್ತಮಾನೋ
ನ ಚೇಷ್ಟತೇ ನೋ ವಿಕರೋತಿ ಕಿಞ್ಚನ ॥೧೩೨॥

೧೩೨. ಮನಸ್ಸು, ಅಹಂಕಾರ– ಇವುಗಳ ವಿಕಾರಗಳನ್ನೂ ದೇಹ, ಇಂದ್ರಿಯಗಳು, ಪ್ರಾಣ– ಇವುಗಳಿಂದ ಆಗುವ ಕ್ರಿಯೆಗಳನ್ನೂ ಅರಿಯುತ್ತಾ, ಕಾದ ಕಬ್ಬಿಣದಲ್ಲಿರುವ ಬೆಂಕಿಯಂತೆ ಅವುಗಳನ್ನು ಅನುಸರಿಸುತ್ತಿದ್ದರೂ[4] ಏನೂ ಮಾಡುವದಿಲ್ಲ, ಒಂದಿಷ್ಟೂ ವಿಕಾರವನ್ನು ಹೊಂದುವದಿಲ್ಲ.

---

1. ಕೇ. ೧–೨ರ ಸೂಚನೆ.

2. 'ಸತ್ತ್ವಾತ್ಮನಿ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

3. ಶಂ. ಗೀ. ೧೦–೧೨, ಈ ಶ್ಲೋಕದಲ್ಲಿ ಪ್ರ. ೬–೨, ತೈ. ೨–೧– ಇವುಗಳ ಸೂಚನೆ ಇದೆ. ಭಾಷ್ಯಕಾರರು ತೈತ್ತಿರೀಯಶ್ರುತಿಯಲ್ಲಿ ಗುಹೆ ಎಂಬ ಮಾತಿಗೆ ಅವ್ಯಾಕೃತಾಕಾಶವೆಂಬ ಅರ್ಥವನ್ನೂ ಕೊಟ್ಟು ಕೊನೆಗೆ 'ಹೃದಯಾಕಾಶದಲ್ಲಿರುವ ಬುದ್ಧಿಗುಹೆಯಲ್ಲಿ' ಎಂಬರ್ಥವೇ ಸರಿ ಎಂದು ನಿರ್ಧರಿಸಿರುತ್ತಾರೆ.

4. ಅನುಸರಿಸುವಂತೆ ತೋರುತ್ತಿದ್ದರೂ ಎಂದರ್ಥ.

ನ ಜಾಯತೇ ನೋ ಮ್ರಿಯತೇ ನ ವರ್ಧತೇ
ನ ಕ್ಷೀಯತೇ ನೋ ವಿಕರೋತಿ ನಿತ್ಯಃ ।
ವಿಲೀಯಮಾನೇಽಪಿ ವಪುಷ್ಯಮುಷ್ಮಿನ್
ನ ಲೀಯತೇ ಕುಂಭ ಇವಾಂಬರಂ ಸ್ವಯಮ್ ॥೧೩೩॥

೧೩೩. ಅವನು ಹುಟ್ಟುವದಿಲ್ಲ, ಸಾಯುವದಿಲ್ಲ, ಬೆಳೆಯುವದಿಲ್ಲ, ಸವೆಯುವದಿಲ್ಲ, ವಿಕಾರವನ್ನು ಹೊಂದುವದಿಲ್ಲ, ನಿತ್ಯನಾಗಿರುತ್ತಾನೆ.[1] ಈ ಶರೀರವು ನಾಶವಾದರೂ ಗಡಿಗೆಯಲ್ಲಿರುವ ಆಕಾಶದಂತೆ ತಾನು ಮಾತ್ರ ನಾಶವಾಗದೆ ಇರುತ್ತಾನೆ.

ಪ್ರಕೃತಿವಿಕೃತಿಭಿನ್ನಃ ಶುದ್ಧಬೋಧಸ್ವಭಾವಃ
ಸದಸದಿದಮಶೇಷಂ ಭಾಸಯನ್ನಿರ್ವಿಶೇಷಃ ।
ವಿಲಸತಿ ಪರಮಾತ್ಮಾ ಜಾಗ್ರದಾದಿಷ್ವವಸ್ಥಾ-
ಸ್ವಹಮಹಮಿತಿ ಸಾಕ್ಷಾತ್ ಸಾಕ್ಷಿರೂಪೇಣ ಬುದ್ಧೇಃ ॥೧೩೪॥

೧೩೪. ಪ್ರಕೃತಿ, ವಿಕೃತಿ[3]- (ಈ ಎರಡಕ್ಕೂ) ಭಿನ್ನನಾಗಿ ಶುದ್ಧಚೈತನ್ಯಸ್ವಭಾವನಾಗಿ ಸದಸದ್ರೂಪವಾದ ಇದೆಲ್ಲವನ್ನೂ ಬೆಳಗುತ್ತಾ ಯಾವ ವಿಶೇಷವೂ ಇಲ್ಲದೆ (ಈ) ಪರಮಾತ್ಮನು ಎಚ್ಚರವೇ ಮುಂತಾದ ಅವಸ್ಥೆಗಳಲ್ಲಿ ನಾನು, ನಾನು - ಎಂದು ಬುದ್ಧಿಗೆ ಸಾಕ್ಷಿಯಾಗಿ[4] ಸಾಕ್ಷಾತ್ತಾಗಿ ಹೊಳೆಯುತ್ತಿರುವನು.

1. ಭಾವವಸ್ತು ವಿಕಾರಗಳೆಂದು ಯಾಸ್ಕರೇ ಮುಂತಾದವರು ತಿಳಿಸಿರುವ ಯಾವ ವಿಕಾರವೂ ಇಲ್ಲದವನಾಗಿರುತ್ತಾನೆ - ಎಂದು ಭಾವ. ಈ ವಾಕ್ಯದಲ್ಲಿರುವ 'ವಿಕಾರವನ್ನು ಹೊಂದುವದಿಲ್ಲ' ಎಂಬ ಮಾತಿಗೆ ಪರಿಣಮಿಸುವದಿಲ್ಲ ಎಂದರ್ಥ.

2. ವಿಕಾರಗಳೆಲ್ಲವೂ ಶರೀರಕ್ಕೆ ಸೇರಿರುತ್ತವೆ, ಆತ್ಮನಿಗಲ್ಲ. ಸೂ. ಭಾ. ೧-೧-೪ (ಭಾ. ಭಾ [illegible]೪).

3. ಕಾರಣ, ಕಾರ್ಯ.

. ಅವಸ್ಥೆಗಳಿಗೆಲ್ಲ ಸಾಕ್ಷಿಯಾಗಿ ಎಂದು ಅನ್ವಯ. ಅವಸ್ಥೆಗಳಲ್ಲೆಲ್ಲ 'ನಾನು', 'ನಾನು- ಎಂದು ತಿಳಿದುಬರುತ್ತಾನೆಂದು ಅರ್ಥವಲ್ಲ. 'ನಾನು ನಿದ್ರಿಸುತ್ತಿದ್ದೆನು' ಎಂದು [illegible]ಚ್ಚತ್ತ ಬಳಿಕ ನೆನಪಾಗುವದರಿಂದ ಜಾಗ್ರದ್ದೃಷ್ಟಿಯಿಂದ ಸುಷುಪ್ತಿಯಲ್ಲಿಯೂ ನಾನು [illegible]ಬ ಪ್ರತೀತಿಯಿರುತ್ತದೆ ಎಂದು ಬೇಕಾದರೆ ಇಟ್ಟುಕೊಳ್ಳಬಹುದು.

ನಿಯಮಿತಮನಸಾಮುಂ ತ್ವಂ ಸ್ವಮಾತ್ಮಾನಮಾತ್ಮ-
ನ್ಯಯಮಹಮಿತಿ ಸಾಕ್ಷಾದ್ ವಿದ್ಧಿ ಬುದ್ಧಿಪ್ರಸಾದಾತ್ ।
ಜನಿಮರಣತರಙ್ಗಾಪಾರಸಂಸಾರಸಿನ್ಧುಂ
ಪ್ರತರ ಭವ ಕೃತಾರ್ಥೋ ಬ್ರಹ್ಮರೂಪೇಣ ಸಂಸ್ಥಃ ॥೧೩೫॥

೧೩೫. ನೀನು ಮನಸ್ಸನ್ನು ವಶಪಡಿಸಿಕೊಂಡು ಈ ನಿನ್ನ ಆತ್ಮನನ್ನು ನಿನ್ನಲ್ಲಿಯೇ ಪ್ರಸನ್ನಚಿತ್ತದಿಂದ 'ಇವನೇ ನಾನು' ಎಂದು ನೇರಾಗಿ ಅರಿತುಕೊ ಹುಟ್ಟು, ಸಾವು–ಎಂಬ ಅಲೆಗಳಿಂದ ಕೂಡಿ ಅಪಾರವಾಗಿರುವ ಸಂಸಾರಸಮುದ್ರ ವನ್ನು ದಾಟಿ ಬ್ರಹ್ಮರೂಪದಲ್ಲಿ ನಿಲುಗಡೆಯನ್ನು ಹೊಂದಿ[1] ಕೃತಾರ್ಥನಾಗುವನು.

---

1. ಇದೇ 'ಬ್ರಹ್ಮಾತ್ಮನಾ ಸಂಸ್ಥಿತಿಃ' ಎಂದು ಮೊದಲನೆಯ ಶ್ಲೋಕದಲ್ಲಿ ಹೇಳಿರುವ ಸ್ಥಿತಿ.

# ೪. ಬಂಧಮೋಕ್ಷಗಳು

## ಅಜ್ಞಾನದಿಂದಲೇ ಬಂಧ

**ಅತ್ರಾನಾತ್ಮನ್ಯಹಮಿತಿ ಮತಿರ್ಬನ್ಧ ಏಷೋಽಸ್ಯ ಪುಂಸಃ**
**ಪ್ರಾಪ್ತೋಽಜ್ಞಾನಾಜ್ಜನನಮರಣಕ್ಲೇಶಸಂಪಾತಹೇತುಃ ।**
**ಯೇನೈವಾಯಂ ವಪುರಿದಮಸತ್ಸತ್ಯಮಿತ್ಯಾತ್ಮಬುದ್ಧ್ಯಾ**
**ಪುಷ್ಯತ್ಯುಕ್ಷತ್ಯವತಿ ವಿಷಯೈಸ್ತನ್ತುಭಿಃ ಕೋಶಕೃದ್ವತ್ ॥೧೩೭॥**

೧೩೭. ಈ ಅನಾತ ದಲ್ಲಿ (ಇದು) ನಾನು ಎಂಬ ಬುದ್ಧಿಯೇ ಬಂಧವು. ಇದು ಅಜ್ಞಾನದಿಂದ ಈ ಮನುಷ್ಯನಿಗೆ ಬಂದೊದಗಿರುವದು, ಹುಟ್ಟುಸಾವುಗಳೆಂಬ ಕ್ಲೇಶವುಂಟಾಗುವದಕ್ಕೆ ಕಾರಣವಾಗಿರುವದು. ಇದರಿಂದಲೇ ಇವನು ಈ ಅಸತ್ಯವಾದ ದೇಹವನ್ನು ಸತ್ಯವೆಂದುಕೊಂಡು (ಅದು) ತಾನೇ ಎಂಬ ಬುದ್ಧಿಯಿಂದ ರೇಷ್ಮೆಯಹುಳು ತನ್ನ ಸುತ್ತಲೂ ನೂಲುಗಳ (ಗೂಡನ್ನು) ಕಟ್ಟಿಕೊಳ್ಳುವಂತೆ ವಿಷಯಗಳಿಂದ ಅದನ್ನು ಪೋಷಿಸುತ್ತಾನೆ, ತೊಳೆಯುತ್ತಾನೆ, ಕಾಪಾಡಿಕೊಳ್ಳುತ್ತಾನೆ.

**ಅತಸ್ಮಿಂಸ್ತದ್ಬುದ್ಧಿಃ ಪ್ರಭವತಿ ವಿಮೂಢಸ್ಯ ತಮಸಾ**
**ವಿವೇಕಾಭಾವಾದ್ ವೈ ಸ್ಫುರತಿ ಭುಜಗೇ ರಜ್ಜುಧಿಷಣಾ ।**
**ತತೋಽನರ್ಥವ್ರಾತೋ ನಿಪತತಿ ಸಮಾದಾತುರಧಿಕ-**
**ಸ್ತತೋ ಯೋಽಸದ್ಗ್ರಾಹಃ ಸ ಹಿ ಭವತಿ ಬನ್ಧಃ ಶೃಣು ಸಖೇ ॥**

೧೩೮. ತಮಸ್ಸಿನಿಂದ ವಿಶೇಷವಾಗಿ ಮೂಢನಾದವನಿಗೆ ಅದಲ್ಲದ್ದರಲ್ಲಿ ಅದೆಂಬ ತಿಳಿವಳಿಕೆಯುಂಟಾಗುತ್ತದೆ. ವಿವೇಕವಿಲ್ಲದ್ದರಿಂದಲೇ ಅಲ್ಲವೆ, ಹಾವಿನಲ್ಲಿ ಹಗ್ಗವೆಂಬ ಬುದ್ಧಿಯುಂಟಾಗುತ್ತದೆ ? ಇದರಿಂದ (ಅದನ್ನು) ಅಂಗೀಕರಿಸುವವನಿಗೆ ಹೆಚ್ಚಿನ ಅನರ್ಥಸಮೂಹವೇ ಬಂದುಬಿಡುತ್ತದೆ. ಆದ್ದರಿಂದ ಅಯ್ಯಾ ಸಖನೆ, ಕೇಳು. ಅಸತ್ಯವಾದದ್ದನ್ನು ಸತ್ಯವೆಂದು ಗ್ರಹಿಸುವದಿದೆಯಲ್ಲ, ಅದೇ ಬಂಧವಾಗಿರುತ್ತದೆ.

## ಬಂಧಸ್ವರೂಪವಿವರಣೆ

**ಅಖಣ್ಡನಿತ್ಯಾದ್ವಯಬೋಧಶಕ್ತ್ಯಾ**
**ಸ್ಫುರನ್ತಮಾತ್ಮಾನಮನನ್ತವೈಭವಮ್ ।**
**ಸಮಾವೃಣೋತ್ಯಾವೃತಿಶಕ್ತಿರೇಷಾ**
**ತಮೋಮಯೀ ರಾಹುರಿವಾರ್ಕಬಿಮ್ಬಮ್ ॥೧೩೯॥**

೧೩೮. ಅಖಂಡವೂ ನಿತ್ಯವೂ ಅದ್ವಿತೀಯವೂ ಆಗಿರುವ ಜ್ಞಾನಶಕ್ತಿಯಿಂದ ಹೊಳೆಯುತ್ತಿರುವ ಅನಂತವೈಭವಯುಕ್ತನಾದ ಆತ್ಮನನ್ನು– ರಾಹುವು ಸೂರ್ಯಬಿಂಬವನ್ನು (ಮುಸುಕಿ)ಕೊಳ್ಳುವಂತೆ ತಮೋಮಯವಾದ ಈ ಆವರಣಶಕ್ತಿಯು ಕವಿದುಕೊಂಡಿರುತ್ತದೆ.

ತಿರೋಭೂತೇ ಸ್ವಾತ್ಮನ್ಯಮಲತರತೇಜೋವತಿ ಪುಮಾ-
ನನಾತ್ಮಾನಂ ಮೋಹಾದಹಮಿತಿ ಶರೀರಂ ಕಲಯತಿ
ತತಃ ಕಾಮಕ್ರೋಧಪ್ರಭೃತಿಭಿರಮುಂ ಬನ್ಧಕಗುಣೈಃ[1]
ಪರಂ ವಿಕ್ಷೇಪಾಖ್ಯಾ ರಜಸ ಉರುಶಕ್ತಿರ್ವ್ಯಥಯತಿ ||೧೩೯||

೧೩೯. ಅತಿಶಯವಾಗಿ ನಿರ್ಮಲವಾದ ಕಾಂತಿಯುಳ್ಳ ತನ್ನ ಆತ್ಮನು ಮರೆಯಾಗಲು ಮನುಷ್ಯನು ಅನಾತ್ಮವಾದ ಶರೀರವನ್ನೇ ಭ್ರಾಂತಿಯಿಂದ ನಾನು ಎಂದು ಭಾವಿಸಿಕೊಳ್ಳುತ್ತಾನೆ. ಆಮೇಲೆ ರಜಸ್ಸಿನ ವಿಕ್ಷೇಪವೆಂಬ ಬಲವಾದ ಶಕ್ತಿಯು ಕಾಮ, ಕ್ರೋಧ– ಮುಂತಾದ ಬಂಧನಕಾರಿಗಳಾದ ಗುಣಗಳಿಂದ ಇವನನ್ನು ವ್ಯಥೆಗೊಳಿಸುತ್ತದೆ.

ಮಹಾಮೋಹಗ್ರಾಹಗ್ರಸನಗಲಿತಾತ್ಮಾವಗಮನೋ
ಧಿಯೋ ನಾನಾವಸ್ಥಾಃ ಸ್ವಯಮಭಿನಯಂಸ್ತದ್ಗುಣತಯಾ ।
ಅಪಾರೇ ಸಂಸಾರೇ ವಿಷಯವಿಷಪೂರೇ ಜಲನಿಧೌ
ನಿಮಜ್ಜ್ಯೋನ್ಮಜ್ಜ್ಯಾಯಂ ಭ್ರಮತಿ ಕುಮತಿಃ ಕುತ್ಸಿತಗತಿಃ ||

೧೪೦. ಮಹಾಮೋಹವೆಂಬ ಮೊಸಳೆಯು ನುಂಗಿದ್ದರಿಂದ ಆತ್ಮಜ್ಞಾನವನ್ನು ಕಳೆದುಕೊಂಡು ಬುದ್ಧಿಯ ಬೇರೆಬೇರೆಯ ಅವಸ್ಥೆಗಳನ್ನು[2] ಆಯಾ ಗುಣದ[3] ಅಭಿಮಾನದಿಂದ ತಾನೇ ಅಭಿನಯಿಸುತ್ತಾ[4] ವಿಷಯಗಳೆಂಬ ವಿಷವು ತುಂಬಿರುವ, ಪಾರುಗಾಣದ ಸಂಸಾರಸಮುದ್ರದಲ್ಲಿ ಮುಳುಗುತ್ತಲೂ ಏಳುತ್ತಲೂ ಕುತ್ಸಿತಮಾರ್ಗದಲ್ಲಿ (ನಡೆಯುವ) ಈ ಕುಮತಿಯು ತೊಳಲುತ್ತಿರುವನು.

ಭಾನುಪ್ರಭಾಸಂಜನಿತಾಭ್ರಪಙ್ಕ್ತಿ-
ರ್ಭಾನುಂ ತಿರೋಧಾಯ ವಿಜೃಮ್ಭತೇ ಯಥಾ ।
ಆತ್ಮೋದಿತಾಹಙ್ಕೃತಿರಾತ್ಮತತ್ತ್ವಂ
ತಥಾ ತಿರೋಧಾಯ ವಿಜೃಮ್ಭತೇ ಸ್ವಯಮ್ ||೧೪೧||

---

1. "ಬನ್ಧನಗುಣೈಃ" ಗೋ॥ ೬॥
2. ಜಾಗ್ರತ್ಸ್ವಪ್ನಸುಷುಪ್ತಿಗಳನ್ನು.
3. ಸತ್ತ್ವರಜಸ್ತಮೋಗುಣಗಳ.
4. ತನ್ನವೆಂದೇ ಬಗೆಯುತ್ತಾ.

೧೪೧. ಹೇಗೆ ಸೂರ್ಯನ ಕಿರಣದಿಂದ ಉಂಟಾದ ಮೇಘಮಾಲೆಯು ಸೂರ್ಯನನ್ನೇ ಮರೆಮಾಡಿ ಮೆರೆಯುವದೋ, ಹಾಗೆ ಆತ್ಮನಿಂದ ಹುಟ್ಟಿರುವ ಅಹಂಕಾರವು ಆತ್ಮತತ್ತ್ವವನ್ನೇ ಮರೆಮಾಡಿ ತಾನೇ ಮೆರೆಯುತ್ತಿರುತ್ತದೆ.

ಕವಲಿತದಿನನಾಥೇ ದುರ್ದಿನೇ ಸಾನ್ದ್ರಮೇಘೈ-
ರ್ವ್ಯಥಯತಿ ಹಿಮಝಂಝಾವಾಯುರುಗ್ರೋ ಯಥೈತಾನ್ ।
ಅವಿರತತಮಸಾತ್ಮನ್ಯಾವೃತೇ ಮೂಢಬುದ್ಧಿಂ
ಕ್ಷಪಯತಿ ಬಹುದುಃಖೈಸ್ತೀವ್ರವಿಕ್ಷೇಪಶಕ್ತಿಃ ॥ ೧೪೨ ॥

೧೪೨. ದಟ್ಟವಾಗಿರುವ ಮೋಡಗಳು ಸೂರ್ಯನನ್ನು ಮುಚ್ಚಿಕೊಂಡಿರುವ ದುರ್ದಿನದಲ್ಲಿ ಪ್ರಚಂಡವಾದ ತಣ್ಣನೆಯ ಬಿರುಗಾಳಿಯು ಹೇಗೆ ಅವುಗಳನ್ನು ವ್ಯಥೆಗೊಳಿಸುವದೋ ಹಾಗೆ ಒಂದೇಸಮನೆ ತಮಸ್ಸು ಆತ್ಮನನ್ನು ಮುಚ್ಚಿಕೊಳ್ಳಲಾಗಿ ಮೂಢಬುದ್ಧಿಯಾದ (ಮನುಷ್ಯನನ್ನು) ತೀವ್ರವಾದ ವಿಕ್ಷೇಪಶಕ್ತಿಯು ಬಲುಬಗೆಯ ದುಃಖಗಳಿಂದ ಗೋಳಾಡಿಸುತ್ತದೆ.

ಏತಾಭ್ಯಾಮೇವ ಶಕ್ತಿಭ್ಯಾಂ ಬನ್ಧಃ ಪುಂಸಃ ಸಮಾಗತಃ ।
ಯಾಭ್ಯಾಂ ವಿಮೋಹಿತೋ ದೇಹಂ ಮತ್ವಾತ್ಮಾನಂ ಭ್ರಮತ್ಯಯಮ್ ॥

೧೪೩. ಈ (ಆವರಣವಿಕ್ಷೇಪಗಳೆಂಬ) ಶಕ್ತಿಗಳಿಂದಲೇ ಪುರುಷನಿಗೆ ಬಂಧವು ಉಂಟಾಗಿರುತ್ತದೆ. ಇವೆರಡರಿಂದ ಮೋಹಿತನಾಗಿ ದೇಹವೇ ತಾನೆಂದು ಭಾವಿಸಿಕೊಂಡು ಇವನು ತೊಳಲುತ್ತಿರುವನು.

ಬೀಜಂ ಸಂಸೃತಿಭೂಮಿಜಸ್ಯ ತು ತಮೋ ದೇಹಾತ್ಮಧೀರಙ್ಕುರೋ
ರಾಗಃ ಪಲ್ಲವಮಮ್ಬು ಕರ್ಮ ತು ವಪುಃ ಸ್ಕನ್ಧೋಽಸವಃ ಶಾಖಿಕಾಃ ।
ಅಗ್ರಾಣೀನ್ದ್ರಿಯಸಂಹತಿಶ್ಚ ವಿಷಯಾಃ ಪುಷ್ಪಾಣಿ ದುಃಖಂ ಫಲಮ್
ನಾನಾಕರ್ಮಸಮುದ್ಭವಂ ಬಹುವಿಧಂ ಭೋಕ್ತಾತ್ರ ಜೀವಃ ಖಗಃ ॥

೧೪೪. ಸಂಸಾರವೆಂಬ ಮರಕ್ಕೆ ಅಜ್ಞಾನವೇ ಬೀಜವು; ದೇಹವೇ ತಾನೆಂಬ ಬುದ್ಧಿಯ ಮೊಳಕೆಯು; ಅನುರಾಗವೇ ಚಿಗುರು; ಕರ್ಮವೇ ನೀರು; ಶರೀರವೇ ಬುಡವು; ಪ್ರಾಣಗಳೇ ಕೊಂಬೆಗಳು; ಇಂದ್ರಿಯ ಸಮೂಹವೇ ರೆಂಬೆಗಳು; ವಿಷಯಗಳೇ ಹೂಗಳು; ಬಗೆಬಗೆಯ ಕರ್ಮದಿಂದಾಗುವ ಬಲುಬಗೆಯ ದುಃಖವೇ ಫಲವು; ಇದನ್ನನುಭವಿಸುವ ಜೀವನೇ ಹಕ್ಕಿಯು.

ಅಜ್ಞಾನಮೂಲೋಽಯಮನಾತ್ಮಬನ್ಧೋ
ನೈಸರ್ಗಿಕೋಽನಾದಿರನನ್ತ ಈರಿತಃ ।
ಜನ್ಮಾಪ್ಯಯವ್ಯಾಧಿಜರಾದಿದುಃಖ-
ಪ್ರವಾಹಪಾತಂ ಜನಯತ್ಯಮುಷ್ಯ ॥೧೪೫॥

೧೪೫. ಅಜ್ಞಾನದಿಂದ ಉಂಟಾಗಿರುವ ಈ ಅನಾತ್ಮಬಂಧವು ಸ್ವಾಭಾವಿಕವಾಗಿಯೂ ಅನಾದಿಯಾಗಿಯೂ ಅನಂತವಾಗಿಯೂ ಇರುವದೆಂದು ಹೇಳುತ್ತಾರೆ. ಇದು ಈ ಜೀವನನ್ನು ಹುಟ್ಟು, ಸಾವು, ಬೇನೆ, ಮುಪ್ಪು-ಮುಂತಾದ ದುಃಖಪ್ರವಾಹದಲ್ಲಿ ಬೀಳುವಂತೆ ಮಾಡಿರುತ್ತದೆ.

## ಬಂಧಪರಿಹಾರಕ್ಕೆ ಉಪಾಯ

ನಾಸ್ತ್ರೈರ್ನ ಶಸ್ತ್ರೈರನಿಲೇನ ವಹ್ನಿನಾ
ಛೇತ್ತುಂ ನ ಶಕ್ಯೋ ನ ಚ ಕರ್ಮಕೋಟಿಭಿಃ ।
ವಿವೇಕವಿಜ್ಞಾನಮಹಾಸಿನಾ ವಿನಾ
ಧಾತುಃ ಪ್ರಸಾದೇನ ಶಿತೇನ[1] ಮಞ್ಜುನಾ ॥ ೧೪೬ ॥

೧೪೬. (ಈ ಬಂಧವನ್ನು) ಪರಮೇಶ್ವರನ ಪ್ರಸಾದದಿಂದ[2] ವಿವೇಕವಿಜ್ಞಾನವೆಂಬ ಹರಿತವಾದ[3] ಮನೋಹರವಾದ ಮಹಾಖಡ್ಗದಿಂದಲ್ಲದೆ ಮತ್ತೆ ಯಾವ ಅಸ್ತ್ರಗಳಿಂದಲಾಗಲಿ ಶಸ್ತ್ರಗಳಿಂದಲಾಗಲಿ ಗಾಳಿಯಿಂದಲಾಗಲಿ ಬೆಂಕಿಯಿಂದಲಾಗಲಿ ಕತ್ತರಿಸಿಹಾಕುವದು ಆಗಲಾರದು; ಕೋಟಿಗಟ್ಟಲೆಯ ಕರ್ಮಗಳಿಂದಲೂ ಆಗಲಾರದು.

ಶ್ರುತಿಪ್ರಮಾಣೈಕಮತೇಃ ಸ್ವಧರ್ಮ-
ನಿಷ್ಠಾ ತಯೈವಾತ್ಮವಿಶುದ್ಧಿರಸ್ಯ ।
ವಿಶುದ್ಧಬುದ್ಧೇಃ ಪರಮಾತ್ಮವೇದನಂ
ತೇನೈವ ಸಂಸಾರಸಮೂಲನಾಶಃ ॥ ೧೪೭ ॥

೧೪೭. ಶ್ರುತಿಪ್ರಮಾಣವೊಂದರಲ್ಲಿಯೇ ಮನಸ್ಸಿಟ್ಟುಕೊಂಡಿರುವವನಿಗೆ ಸ್ವಧರ್ಮದಲ್ಲಿ ನಿಷ್ಠೆಯುಂಟಾಗುವದು. ಅವನಿಗೆ ಅದರಿಂದಲೇ ಚಿತ್ತಶುದ್ಧಿಯುಂಟಾಗುವದು.[4] ಚಿತ್ತಶುದ್ಧಿಯಾದವನಿಗೆ ಪರಮಾತ್ಮಜ್ಞಾನವುಂಟಾಗುವದು, ಅದರಿಂದಲೇ ಸಂಸಾರವು ಬೇರುಸಹಿತವಾಗಿ ನಾಶವಾಗುವದು.

ಕೋಶೈರನ್ನಮಯಾದ್ಯೈಃ ಪಞ್ಚಭಿರಾತ್ಮಾ ನ ಸಂವೃತೋ ಭಾತಿ ।
ನಿಜಶಕ್ತಿಸಮುತ್ಪನ್ನೈಃ ಶೈವಲಪಟಲೈರಿವಾಮ್ಬು ವಾಪೀಸ್ಥಮ್ ॥

೧೪೮. ಪಾಚಿಯ ಪದರಗಳು ಮುಚ್ಚಿಕೊಂಡಿರುವದರಿಂದ ಬಾವಿಯಲ್ಲಿರುವ ನೀರು ಕಾಣದೆ ಇರುವಂತೆ ಆತ್ಮನು ತನ್ನ ಶಕ್ತಿಯಿಂದ[5] ಉಂಟಾಗಿರುವ

---

1 'ಶಿತೇನ' ಎಂಬ ಗೋ|| ಅ|| ಪಾಠಗಳಿಗಿಂತ ಈ ವಾ|| ಪಾಠವೇ ಮೇಲು.

2. ಕ. ೧ ೨-೨ .

3. 'ಶಿತೇನ' ಎಂಬ ಪಾಠಕ್ಕೆ ಶುಭ್ರವಾದ ಎಂದರ್ಥ.

4. ಚಿತ್ತಶುದ್ಧಿಗಾಗಿ ವೇದಾಧಿಕಾರವುಳ್ಳವನು ಸ್ವಧರ್ಮಾಚರಣೆಯನ್ನೇ ಮಾಡಬೇಕು; ಹಠಯೋಗಾದಿಗಳನ್ನು ಅನುಸರಿಸಬಾರದು ಎಂದು ಭಾವ. ಶಂ. ಗೀ. ೪-೧, ೧೮-೪೪.

5. ಮಾಯೆಯಿಂದ, ಅಜ್ಞಾನದಿಂದ.

ಅನ್ನಮಯವೇ ಮುಂತಾದ ಐದು ಕೋಶಗಳು[1] ಮುಚ್ಚಿಕೊಂಡಿರುವದ ರಿಂದ ಕಾಣಿಸಿಕೊಳ್ಳದೆ ಇರುತ್ತಾನೆ.

ಶೈವಾಲಾಪನಯೇ ಸಮ್ಯಕ್ ಸಲಿಲಂ ಪ್ರತೀಯತೇ ಶುದ್ಧಮ್ ।
ತೃಷ್ಣಾಸನ್ತಾಪಹರಂ ಸದ್ಯಃ ಸೌಖ್ಯಪ್ರದಂ ಪರಂ ಪುಂಸಃ ॥೧೯೯॥
ಪಞ್ಚಾನಾಮಪಿ ಕೋಶಾನಾಮಪವಾದೇ ವಿಭಾತ್ಯಯಂ ಶುದ್ಧಃ ।
ನಿತ್ಯಾನನ್ದೈಕರಸಃ ಪ್ರತ್ಯಗ್ರೂಪಃ ಪರಂ ಸ್ವಯಂಜ್ಯೋತಿಃ ॥೨೦೦॥

೧೯೯-೨೦೦. ಆ ಪಾಚಿಯನ್ನು ತೆಗೆದುಹಾಕಿದರೆ ಶುದ್ಧವಾದ ನೀರು ಚೆನ್ನಾಗಿ ಕಾಣಿಸಿಕೊಳ್ಳುತ್ತದೆ; (ಅದು) ನೀರಡಿಕೆಯ ಸಂತಾಪವನ್ನು ಹೋಗ ಲಾಡಿಸುವದು, ಮನುಷ್ಯನಿಗೆ ಕೂಡಲೆ ಹೆಚ್ಚಿನ ಸೌಖ್ಯವನ್ನು ಕೊಡುವದು. (ಇದರಂತೆ) ಐದು ಕೋಶಗಳನ್ನೂ ಅಲ್ಲಗಳೆಧರೆ ಈ ಶುದ್ಧನೂ ನಿತ್ಯಾನಂದೈಕ ರಸನೂ ಪ್ರತ್ಯಗಾತ್ಮರೂಪನೂ ಸ್ವಯಂಪ್ರಕಾಶನೂ ಆದ ಪರಮಾತ್ಮನು ಕಾಣಿಸಿ ಕೊಳ್ಳುತ್ತಾನೆ.

ಆತ್ಮಾನಾತ್ಮವಿವೇಕಃ ಕರ್ತವ್ಯೋ ಬನ್ಧಮುಕ್ತಯೇ ವಿದುಷಾ ।
ತೇನೈವಾನನ್ದೀ ಭವತಿ ಸ್ವಂ ವಿಜ್ಞಾಯ ಸಚ್ಚಿದಾನನ್ದಮ್ ॥೨೦೧॥

೨೦೧. ಬಂಧದಿಂದ ಬಿಡುಗಡೆಹೊಂದುವದಕ್ಕೆ, ಜ್ಞಾನವಾದವನು ಆತ್ಮಾ ನಾತ್ಮವಿವೇಕವನ್ನು ಮಾಡಿಕೊಳ್ಳಬೇಕು. ಅದರಿಂದಲೇ ತನ್ನ ಸಚ್ಚಿದಾನಂದ ಸ್ವರೂಪವನ್ನು ತಿಳಿದುಕೊಂಡು ಆನಂದವುಳ್ಳವನಾಗುತ್ತಾನೆ.

ಮುಞ್ಜಾದಿಷೀಕಾಮಿವ ದೃಶ್ಯವರ್ಗಾತ್
ಪ್ರತ್ಯಞ್ಚಮಾತ್ಮಾನಮಸಙ್ಗಮಕ್ರಿಯಮ್ ।
ವಿವಿಚ್ಯ ತತ್ರ ಪ್ರವಿಲಾಪ್ಯ ಸರ್ವಂ
ತದಾತ್ಮನಾ ತಿಷ್ಠತಿ ಯಃ ಸ ಮುಕ್ತಃ ॥೨೦೨॥

೨೦೨. ನೊಸೆಯಹುಲ್ಲಿನ ಆದರೊಳಗಿರುವ ದಂಟನ್ನು (ಬಿಡಿಸಿಕೊಳ್ಳು ವಂತೆ[2]) ಯಾವನು ದೃಶ್ಯಸಮೂಹದಿಂದ ಅಸಂಗನೂ ನಿಷ್ಕ್ರಿಯನೂ ಆಗಿರುವ ಪ್ರತ್ಯಗಾತ್ಮನನ್ನು ಬಿಡಿಸಿಕೊಂಡು ಆ (ಆತ್ಮ)ನಲ್ಲಿ ಎಲ್ಲವನ್ನೂ ಪ್ರವಿಲಯ ಮಾಡಿಕೊಂಡು[3] ಆ ಆತ್ಮನ ರೂಪದಿಂದಲೇ ನೆಲೆನಿಲ್ಲುವನೋ ಅವನೇ ಮುಕ್ತನು.

---

1. ತೈತ್ತಿರೀಯದಲ್ಲಿ ಹೇಳಿರುವ ಕೋಶಗಳು; ಇವನ್ನು ಇನ್ನುಮುಂದೆ ವಿವರಿಸ ಲಾಗುವದು.

2. ಕ. ೨-೬-೧೭.

3. ಹಿಂದೆ ೬೩ನೆಯ ಶ್ಲೋಕವನ್ನು ನೋಡಿರಿ. ಪ್ರಪಂಚಲಯವನ್ನು ಗ್ರಂಥ ಕರ್ತರು ಮತ್ತೆಮತ್ತೆ ಹೇಳುತ್ತಾರೆ.

# ೫. ಪಂಚಕೋಶವಿವೇಕ

## ಅನ್ನಮಯಕೋಶವಿವೇಕ

ದೇಹೋಽಯಮನ್ನಭವನೋಽನ್ನಮಯಸ್ತು ಕೋಶೋ
ಹ್ಯನ್ನೇನ ಜೀವತಿ ವಿನಶ್ಯತಿ ತದ್ವಿಹೀನಃ ।
ತ್ವಕ್ಚರ್ಮಮಾಂಸರುಧಿರಾಸ್ಥಿಪುರೀಷರಾಶಿ-
ರ್ನಾಯಂ ಸ್ವಯಂ ಭವಿತುಮರ್ಹತಿ ನಿತ್ಯಶುದ್ಧಃ ॥೧೫೩॥

೧೫೩. ಅನ್ನದಿಂದ ಹುಟ್ಟಿರುವ ಈ ದೇಹವು ಅನ್ನಮಯಕೋಶವು. ಇದು ಅನ್ನದಿಂದಲೇ ಬದುಕಿರುತ್ತದೆ, ಅದಿಲ್ಲದಿದ್ದರೆ ನಾಶವಾಗುವದು. ತ್ವಕ್ಕು, ಚರ್ಮ[1], ಮಾಂಸ, ರಕ್ತ, ಎಲುಬು, ಮಲ–ಇವುಗಳ ರಾಶಿಯಾಗಿರುವ ಇದು ತಾನೇ ನಿತ್ಯಶುದ್ಧನಾದ ಆತ್ಮನಾಗಲಾರದು.

ಪೂರ್ವಂ ಜನೇರಪಿ ಮೃತೇರಥ ನಾಯಮಸ್ತಿ
ಜಾತಃ ಕ್ಷಣಂ[2] ಕ್ಷಣಗುಣೋಽನಿಯತಸ್ವಭಾವಃ ।
ನೈಕೋ ಜಡಶ್ಚ ಘಟವತ್ ಪರಿದೃಶ್ಯಮಾನಃ
ಸ್ವಾತ್ಮಾ ಕಥಂ ಭವತಿ ಭಾವವಿಕಾರವೇತ್ತಾ ॥೧೫೪॥

೧೫೪. (ಇದು) ಹುಟ್ಟುವದಕ್ಕೆ ಮೊದಲೂ ಸತ್ತ(ಮೇಲೂ) ಇರುವದಿಲ್ಲ (ಒಂದು) ಕ್ಷಣದಲ್ಲಿ ಹುಟ್ಟಿ ಕ್ಷಣಿಕವಾದ ಗುಣಗಳುಳ್ಳದ್ದಾಗಿ ಗೊತ್ತಾದ ಒಂದು ಸ್ವಭಾವವಿಲ್ಲದ್ದಾಗಿರುತ್ತದೆ; ಅನೇಕ (ಧಾತು)ಗಳಿಂದಾಗಿರುತ್ತದೆ, ಜಡವಾಗಿರುತ್ತದೆ, ಗಡಿಗೆಯಂತೆ ದೃಶ್ಯವಾಗಿರುತ್ತದೆ. (ಇದು) ಭಾವವಿಕಾರಗಳನ್ನು ಅರಿಯುವ ಆತ್ಮನು ಹೇಗಾದೀತು[3] ?

---

1. ತ್ವಕ್ಕು, ಚರ್ಮ- ಎಂಬ ಪದಗಳಿಗೆ ಯಾವ ಬೇರೆಬೇರೆಯ ಅರ್ಥಗಳನ್ನಿಟ್ಟು ಕೊಂಡಿದೆಯೋ ತಿಳಿಯದು. ತ್ವಕ್ಚರ್ಮಗಳೆಂಬಿವು ಒಂದೇ ಧಾತುವಿನ ವಿಶೇಷಗಳು; ಒಳಗಿನ ಮತ್ತು ಹೊರಗಿನ ಭೇದದಿಂದ ನಾಮಭೇದ ಎಂದು ತೈ ಆ. ನಾರಾಯಣ ೬೫ನೆಯ ಅನುವಾಕದ ಸಾಯಣಭಾಷ್ಯದಲ್ಲಿದೆ.

2. 'ಜಾತಕ್ಷಣಕ್ಷಣಗುಣೋ' ಎಂದು ಪಾ॥ ಪಾಠ. 'ಜಾತಃ ಕ್ಷಣೇ' ಎಂದಿದ್ದರೂ ಆಗುತ್ತಿತ್ತು.

3. ಇರುವದು, ಹುಟ್ಟುವದು, ಬೆಳೆಯುವದು, ಪರಿಣಮಿಸುವದು, ಸೊರಗುವದು ನಾಶವಾಗುವದು—ಎಂಬೀ ಭಾವವಿಕಾರಗಳು ಶರೀರಕ್ಕೂ ಸೇರಿವೆ. ಆತ್ಮನು ವಿಕಾರಗಳನ್ನು ನೋಡುವವನಾದ್ದರಿಂದ ಅವನಿಗೆ ವಿಕಾರಗಳಿಲ್ಲ.

ಪಾಣಿಪಾದಾದಿಮಾನ್ ದೇಹೋ ನಾತ್ಮಾ ವ್ಯಙ್ಗೇಽಪಿ ಜೀವನಾತ್ ।
ತತ್ತಚ್ಛಕ್ತೇರನಾಶಾಚ್ಚ ನ ನಿಯಮ್ಯೋ ನಿಯಾಮಕಃ ॥ ೧೫೫ ॥

೧೫೫. ಕೈಕಾಲು–ಮುಂತಾದ (ಅವಯವ)ಗಳುಳ್ಳ ದೇಹವು ಆತ್ಮನಲ್ಲ; ಏಕೆಂದರೆ ಅಂಗಗಳು ಊನವಾದರೂ (ಮನುಷ್ಯನು) ಬದುಕಿರುತ್ತಾನೆ; ಮತ್ತು ಆಯಾ ಶಕ್ತಿಗಳೂ ನಾಶವಾಗದೆ ಇರುತ್ತವೆ.[1] ಆಳಲ್ಪಡುವ (ದೇಹವು) ಆಳುವ (ಆತ್ಮ)ನಾಗಲಾರದು.

ದೇಹತದ್ಧರ್ಮತತ್ಕರ್ಮತದವಸ್ಥಾದಿ[2] ಸಾಕ್ಷಿಣಃ ।
ಸ್ವತ[3] ಏವ ಸ್ವತಃ ಸಿದ್ಧಂ ತದ್ವೈಲಕ್ಷಣ್ಯಮಾತ್ಮನಃ ॥ ೧೫೬ ॥

೧೫೬. ದೇಹ, ಅದರ ಧರ್ಮಗಳು, ಅದರ ಕರ್ಮಗಳು, ಅದರ ಅವಸ್ಥೆಗಳು–ಇವೇ ಮುಂತಾದವಕ್ಕೆ ಸಾಕ್ಷಿಯಾಗಿರುವ ಆತನು ಅವುಗಳಿಗಿಂತ ಬೇರೆಯ ಸ್ವಭಾವದವನೆಂಬುದು ತಾನೇ ಸ್ವತಃಸಿದ್ಧವಾಗಿರುತ್ತದೆ.

ಶಲ್ಯರಾಶಿ[4]ರ್ಮಾಂಸಲಿಪ್ತೋ ಮಲಪೂರ್ಣೋಽತಿಕಶ್ಮಲಃ ।
ಕಥಂ ಭವೇದಯಂ ವೇತ್ತಾ ಸ್ವಯಮೇತದ್ವಿಲಕ್ಷಣಃ ॥ ೧೫೭ ॥

೧೫೭. ಮಾಂಸದಿಂದ ಬಳಿದಿರುವ ಮೂಳೆಗಳ ರಾಶಿಯಾಗಿ ಮಲವು ತುಂಬಿ ಬಲುಹೊಲಸಾಗಿರುವ ಈ ಶರೀರವು ಇದಕ್ಕಿಂತ ವಿಲಕ್ಷಣವಾಗಿರುವ (ಇದನ್ನು) ಅರಿಯುವವನಾದ ಆತ್ಮನು ಹೇಗಾದೀತು?

ತ್ವಙ್ಮಾಂಸಮೇದೋಽಸ್ಥಿಪುರೀಷರಾಶಾ–
ವಹಂಮತಿಂ ಮೂಢಜನಃ ಕರೋತಿ ।
ವಿಲಕ್ಷಣಂ ವೇತ್ತಿ ವಿಚಾರಶೀಲೋ
ನಿಜಸ್ವರೂಪಂ ಪರಮಾರ್ಥಭೂತಮ್ ॥ ೧೫೮ ॥

---

1. ಶರೀರದ ಯಾವದಾದರೊಂದು ಅವಯವವು ಹೋದರೂ ಆ ಅವಯವವನ್ನು ಉಪಯೋಗಿಸುವ ಶಕ್ತಿಯು ಇದ್ದೇ ಇರುತ್ತದೆ– ಎಂಬುದನ್ನು ಮರಗಾಲು ಮುಂತಾದವುಗಳನ್ನು ಉಪಯೋಗಿಸುವದನ್ನು ನೋಡಿ ನಿಶ್ಚಯಿಸಬಹುದಾಗಿದೆ.

2. 'ದೇಹತದ್ಧರ್ಮತತ್ಕರ್ಮತದವಸ್ಥಾ' ಎಂಬ ಮಾತು ಗ್ರಂಥಕರ್ತರಿಗೆ ಮೆಚ್ಚಾದದ್ದು. ಶಂ. ಗೀ. ೨-೨, ೬-೨೪, ೧೩-೧ ಮುಂತಾದ ಕಡೆಗಳಲ್ಲಿ ಇದನ್ನು ಕಾಣಬಹುದು.

3. ಪುನರುಕ್ತಿಯನ್ನು ತಪ್ಪಿಸುವದಕ್ಕೆ 'ಸತಃ' ಎಂಬ ಪಾ॥ ಪಾಠವು ಸಹಾಯಕವಾದರೂ ಅರ್ಥದಲ್ಲಿ ಯಾವ ವಿಶೇಷವೂ ಇಲ್ಲ.

4. 'ಕುಲ್ಯರಾಶಿಃ' ಎಂಬ ಗೋ॥ ಪಾಠವು ಸರಿಯಲ್ಲ.

೧೫೮. ತ್ವಕ್ಕು, ಮಾಂಸ, ಕೊಬ್ಬು, ಮೂಳೆ, ಮಲ – ಇವುಗಳ ರಾಶಿಯಾಗಿರುವ[1] (ಈ ದೇಹದಲ್ಲಿ) ಮೂಢಜನವು ನಾನೆಂಬ ಬುದ್ಧಿಯನ್ನು ಮಾಡುತ್ತಿರುವದು. ವಿಚಾರಶೀಲನಾದವನು ಇದಕ್ಕಿಂತ ಬೇರೆಯಾಗಿ ಪರಮಾರ್ಥವಾಗಿರುವ ತನ್ನ ಸ್ವರೂಪವನ್ನು ಅರಿತುಕೊಳ್ಳುತ್ತಾನೆ.

ದೇಹೋಽಹಮಿತ್ಯೇವ ಜಡಸ್ಯ ಬುದ್ಧಿ-
ರ್ದೇಹೇ ಚ ಜೀವೇ ವಿದುಷಸ್ತ್ವಹಂಧೀಃ ।
ವಿವೇಕವಿಜ್ಞಾನವತೋ ಮಹಾತ್ಮನೋ
ಬ್ರಹ್ಮಾಹಮಿತ್ಯೇವ ಮತಿಃ ಸದಾತ್ಮನಿ ॥ ೧೫೯ ॥

೧೫೯. ಮೂಢನಿಗೆ ದೇಹವು ನಾನು ಎಂದು ಬುದ್ಧಿ(ಯುಂಟಾಗಿರುತ್ತದೆ). (ಸ್ವಲ್ಪ) ತಿಳಿದವನಿಗೆ ದೇಹದಲ್ಲಿಯೂ ಜೀವನಲ್ಲಿಯೂ ನಾನೆಂಬ ಬುದ್ಧಿಯಿರುತ್ತದೆ. ಆದರೆ ವಿವೇಕವಿಜ್ಞಾನದಿಂದ ಕೂಡಿರುವ ಮಹಾತ್ಮನಿಗೆ ಸದ್ರೂಪನಾದ ಆತ್ಮನಲ್ಲಿಯೇ[2] 'ನಾನು ಬ್ರಹ್ಮವು' ಎಂಬ ಬುದ್ಧಿ(ಯುಂಟಾಗಿರುತ್ತದೆ).

ಅತ್ರಾತ್ಮಬುದ್ಧಿಂ ತ್ಯಜ ಮೂಢಬುದ್ಧೇ
ತ್ವಙ್ಮಾಂಸಮೇದೋಽಸ್ಥಿಪುರೀಷರಾಶೌ ।
ಸರ್ವಾತ್ಮನಿ ಬ್ರಹ್ಮಣಿ ನಿರ್ವಿಕಲ್ಪೇ
ಕುರುಷ್ವ ಶಾನ್ತಿಂ ಪರಮಾಂ ಭಜಸ್ವ ॥ ೧೬೦ ॥

೧೬೦. ತಿಳಿಗೇಡಿಯೆ, ತ್ವಕ್ಕು, ಮಾಂಸ, ಕೊಬ್ಬು, ಮೂಳೆ, ಮಲ- ಇವುಗಳ ರಾಶಿಯಾದ ಈ ದೇಹದಲ್ಲಿ ನಾನೆಂಬ ಬುದ್ಧಿಯನ್ನು ಬಿಡು. ಎಲ್ಲರ ಆತ್ಮನೂ ನಿರ್ವಿಕಲ್ಪವೂ ಆದ ಬ್ರಹ್ಮದಲ್ಲಿ (ನಾನೆಂಬ ಬುದ್ಧಿಯನ್ನು) ಮಾಡಿಕೊ, ಪರಮಶಾಂತಿಯನ್ನು ಹೊಂದು.

ದೇಹೇನ್ದ್ರಿಯಾದಾವಸತಿ ಭ್ರಮೋದಿತಾಂ
ವಿದ್ವಾನಹನ್ತಾಂ ನ ಜಹಾತಿ ಯಾವತ್ ।
ತಾವನ್ನ ತಸ್ಯಾಸ್ತಿ ವಿಮುಕ್ತಿವಾರ್ತಾ-
ಪ್ಯಸ್ತ್ವೇಷ ವೇದಾನ್ತನಯಾನ್ತದರ್ಶೀ ॥ ೧೬೧ ॥

1. ದೇಹವನ್ನು ವರ್ಣಿಸುವದಕ್ಕೆ ಈ ಮಾತನ್ನು ಗ್ರಂಥಕರ್ತರು ಮತ್ತೆಮತ್ತೆ ಉಪಯೋಗಿಸುತ್ತಾರೆ.

2. 'ಸದಾತ್ಮನಿ' ಎಂಬುದನ್ನು (ಸತ್–ಆತ್ಮನಿ ಎಂದು) ಸವಿಭಾಸಪದವಾಗಿ ತೆಗೆದುಕೊಂಡರೆ ಈ ಅರ್ಥವಾಗುತ್ತದೆ. (ಸದಾ ಆತ್ಮನಿ ಎಂದು) ಬೇರೆಬೇರೆಯ ಪದಗಳಾಗಿಟ್ಟುಕೊಂಡರೆ ತನ್ನ ವಿಷಯದಲ್ಲಿ ಯಾವಾಗಲೂ ನಾನು ಬ್ರಹ್ಮವು ಎಂಬ ತಿಳಿವಳಿಕೆಯಿರುತ್ತದೆ-ಎಂದು ಅರ್ಥವನ್ನು ಮಾಡಿಕೊಳ್ಳಬೇಕಾಗುವದು.

೧೬೧. ವಿವೇಕಿಯಾಗಿ ದೇಹೇಂದ್ರಿಯಾದಿಗಳಲ್ಲಿ ಭ್ರಾಂತಿಯಿಂದುಂಟಾಗುವ ನಾನೆಂಬ (ಬುದ್ಧಿಯ)ನ್ನು ಎಲ್ಲಿಯವರೆಗೆ ಬಿಡುವದಿಲ್ಲವೋ ಅಲ್ಲಿಯವರೆಗೆ ಅವನು ವೇದಾಂತಯುಕ್ತಿಗಳ ಆಚೆಯ ದಡವನ್ನೇ ಕಂಡುಕೊಂಡಿರಲಿ,[1] ಅವನಿಗೆ ಮುಕ್ತಿಯ ಸುದ್ದಿಯು ಕೂಡ ಇರುವದಿಲ್ಲ

ಛಾಯಾಶರೀರೇ ಪ್ರತಿಬಿಮ್ಬಗಾತ್ರೇ
ಯತ್ಸ್ವಪ್ನದೇಹೇ ಹೃದಿ ಕಲ್ಪಿತಾಙ್ಗೇ ।
ಯಥಾತ್ಮಬುದ್ಧಿಸ್ತವ ನಾಸ್ತಿ ಕಿಞ್ಚಿ-
ಜ್ಜೀವಚ್ಛರೀರೇ ಚ ತಥೈವ ಮಾಸ್ತು ॥೧೬೨॥

೧೬೨. ನಿನಗೆ ನೆಳಲಿನ ದೇಹ, ಪ್ರತಿಬಿಂಬದ ದೇಹ, ಸ್ವಪ್ನದ ದೇಹ, ಮನೋರಥಕಲ್ಪಿತದೇಹ-ಇವುಗಳಲ್ಲಿ ನಾನೆಂಬ ಬುದ್ಧಿಯು ಒಂದಿಷ್ಟೂ ಹೇಗೆ ಇರುವದಿಲ್ಲವೋ ಬದುಕಿರುವ ಈ ಶರೀರದಲ್ಲಿಯೂ[2] ಅದರಂತೆಯೇ ನಾನೆಂಬ ಬುದ್ಧಿಯು ಇಲ್ಲದಿರಲಿ.

ದೇಹಾತ್ಮಧೀರೇವ ನೃಣಾಮಸದ್ಧಿಯಾಂ
ಜನ್ಮಾದಿದುಃಖಪ್ರಭವಸ್ಯ ಬೀಜಮ್ ।
ಯತಸ್ತತಸ್ತ್ವಂ ಜಹಿ ತಾಂ ಪ್ರಯತ್ನಾತ್
ತ್ಯಕ್ತೇ ತು ಚಿತ್ತೇ ನ ಪುನರ್ಭವಾಶಾ ॥೧೬೩॥

೧೬೩. ತಪ್ಪುತಿಳಿವಳಿಕೆಯ ಜನರಿಗೆ ದೇಹವು ನಾನೆಂಬ ಬುದ್ಧಿಯೇ, ಜನ್ಮವೇ ಮುಂತಾದ ದುಃಖವುಂಟಾಗುವದಕ್ಕೆ ಕಾರಣವು. ಆದ್ದರಿಂದ ನೀನು ಆ (ಬುದ್ಧಿಯನ್ನು) ಬಿಟ್ಟುಬಿಡು. ಆ ಬುದ್ಧಿಯನ್ನು ಬಿಟ್ಟರೆ ಮರಳಿ ಹುಟ್ಟುವ ಶಂಕೆಯೇ ಇರುವದಿಲ್ಲ.

## ಪ್ರಾಣಮಯಕೋಶವಿವೇಕ

ಕರ್ಮೇನ್ದ್ರಿಯೈಃ ಪಞ್ಚಭಿರಞ್ಚಿತೋಽಯಂ
ಪ್ರಾಣೋ ಭವೇತ್ ಪ್ರಾಣಮಯಸ್ತು ಕೋಶಃ ।
ಯೇನಾತ್ಮವಾನನ್ನಮಯೋಽನುಪೂರ್ಣಃ[3]
ಪ್ರವರ್ತತೇಽಸೌ ಸಕಲಕ್ರಿಯಾಸು ॥೧೬೪॥

1. ಅನುಭವವಿಲ್ಲದ ವೇದಾಂತಯುಕ್ತಿಗಳ ತಿಳಿವಳಿಕೆಯು ಮೋಕ್ಷವನ್ನು ಕೊಡಲಾರದು-ಎಂದು ಅಭಿಪ್ರಾಯ.

2. "ಜೀವಚ್ಛವೇಽಸ್ಮಿಂಶ್ಚ" ಎಂಬ ಪಾಠಕ್ಕೆ 'ಬದುಕಿರುವ ಈ ಹೆಣದಲ್ಲಿಯೂ' ಎಂದರ್ಥ. ಇಲ್ಲಿಟ್ಟುಕೊಂಡಿರುವ ಪಾಠವೇ ಮೇಲು.

3. 'ಅನ್ನಪೂರ್ಣಃ' ಎಂಬ ಗೋ॥ ಅ॥ ಪಾಠಕ್ಕಿಂತ ಈ ವಾ॥ ಪಾಠವು ಮೇಲು. ಏಕೆಂದರೆ ಇದೇ ತೈತ್ತಿರೀಯಶ್ರುತಿಗೆ ಅನುಗುಣವಾಗಿದೆ.

೧೬೪. ಐದು ಕರ್ಮೇಂದ್ರಿಯಗಳೊಡನೆ ಕೂಡಿರುವ ಈ ಪ್ರಾಣವು ಪ್ರಾಣಮಯಕೋಶವಾಗುವದು. ಅನ್ನಮಯ(ಕೋಶ)ವು ಈ (ಪ್ರಾಣಮಯ)ನಿಂದ ಆತ್ಮಸ್ವರೂಪದ್ದಾಗಿ ತುಂಬಲ್ಪಟ್ಟಿದೆ. ಈ (ಪ್ರಾಣಮಯವು) ಎಲ್ಲಾ ಕ್ರಿಯೆಗಳಲ್ಲಿಯೂ ತೊಡಗುತ್ತಿರುವದು.[1]

ನೈವಾತ್ಮಾಪಿ ಪ್ರಾಣಮಯೋ ವಾಯುವಿಕಾರೋ
ಗನ್ತಾಽಽಗನ್ತಾ ವಾಯುವದನ್ತರ್ಬಹಿರೇಷಃ ।
ಯಸ್ಮಾತ್ ಕಿಞ್ಚಿತ್ ಕ್ವಾಪಿ ನ ವೇತ್ತೀಷ್ಟಮನಿಷ್ಟಂ
ಸ್ವಂ ವಾನ್ಯಂ ವಾ ಕಿಞ್ಚನ ನಿತ್ಯಂ ಪರತನ್ತ್ರಃ ।೧೬೫॥

೧೬೫. ವಾಯುವಿನ ರೂಪಾಂತರನಾಗಿ ವಾಯುವಿನಂತೆ ಒಳಕ್ಕೂ ಹೊರಕ್ಕೂ ಹೋಗುತ್ತಲೂ ಬರುತ್ತಲೂ ಇರುವ ಈ ಪ್ರಾಣಮಯಕೋಶವೂ ಆತ್ಮನಲ್ಲ. ಏಕೆಂದರೆ ಇದು ಎಲ್ಲಿಯೂ ಬೇಕಾದದ್ದನ್ನಾಗಲಿ ಬೇಡವಾದದ್ದನ್ನಾಗಲಿ ಒಂದಿಷ್ಟೂ ತಿಳಿದುಕೊಳ್ಳಲಾರದು. ತನ್ನನ್ನಾಗಲಿ ಮತ್ತೊಬ್ಬನನ್ನಾಗಲಿ ಒಂದಿಷ್ಟೂ (ತಿಳಿದುಕೊಳ್ಳಲಾರದು). ಯಾವಾಗಲೂ ಪರತಂತ್ರ(ವಾಗಿರುತ್ತದೆ).

## ಮನೋಮಯಕೋಶವಿವೇಕ

ಜ್ಞಾನೇನ್ದ್ರಿಯಾಣಿ ಚ ಮನಶ್ಚ ಮನೋಮಯಃ ಸ್ಯಾತ್
ಕೋಶೋ ಮಮಾಹಮಿತಿ ವಸ್ತುವಿಕಲ್ಪಹೇತುಃ ।
ಸಂಜ್ಞಾದಿಭೇದಕಲನಾಕಲಿತೋ ಬಲೀಯಾಂ-
ಸ್ತತ್ಪೂರ್ವಕೋಶಮಭಿಪೂರ್ಯ ವಿಜೃಮ್ಭತೇ ಯಃ ॥೧೬೬॥

೧೬೬. ಜ್ಞಾನೇಂದ್ರಿಯಗಳೂ ಮನಸ್ಸೂ (ಸೇರಿದರೆ) ಮನೋಮಯಕೋಶವಾಗುತ್ತದೆ. ಇದು 'ನಾನು', 'ನನ್ನದು'–ಎಂಬ ವಸ್ತುವಿಕಲ್ಪಕ್ಕೆ[2] ಕಾರಣವಾಗಿರುತ್ತದೆ. ನಾಮವೇ ಮುಂತಾದ[3] ಭೇದಗಳನ್ನು ಅರಿಯುವದರಿಂದ ತಿಳಿಯಬರುವದಾಗಿದೆ; ಬಹಳ ಬಲಿಷ್ಠವಾಗಿರುತ್ತದೆ. ತನ್ನ ಪೂರ್ವಕೋಶ(ವಾದ ಪ್ರಾಣಮಯವನ್ನು) ತುಂಬಿಕೊಂಡು ಎಲ್ಲೆಲ್ಲಿಯೂ ಹರಡಿಕೊಂಡಿರುತ್ತದೆ.

---

1. ಕ್ರಿಯೆಗಳಿಗೆ ಪ್ರಾಣಮಯಕೋಶವೇ ಕಾರಣ.

2. ಪರಿಪೂರ್ಣವಸ್ತುವಿನಲ್ಲಿ 'ನಾನು', 'ನನ್ನದು' ಎಂದು ಭೇದವನ್ನು ಕಲ್ಪಿಸಿಕೊಂಡು ಪ್ರತ್ಯೇಕವಾಗಿ ತಿಳಿಯುವದಕ್ಕೆ.

3. ನಾಮ, ಜಾತಿ, ಗುಣ, ಕ್ರಿಯೆ– ಮುಂತಾದ ರೂಪದಿಂದ ವಸ್ತುವನ್ನು ಅರಿಯುವದು ಯಾವದೋ ಅದು ಮನಸ್ಸು– ಎಂದು ಮನಸ್ಸನ್ನು ಇಂದ್ರಿಯಗಳಿಂದ ಬೇರ್ಪಡಿಸಿಕೊಂಡು ತಿಳಿಯಬಹುದು.

ಪಞ್ಚೇನ್ದ್ರಿಯೈಃ ಪಞ್ಚಭಿರೇವ ಹೋತೃಭಿಃ
ಪ್ರಚೀಯಮಾನೋ ವಿಷಯಾಜ್ಯಧಾರಯಾ ।
ಜಾಜ್ವಲ್ಯಮಾನೋ ಬಹುವಾಸನೇನ್ಧನೈ-
ರ್ಮನೋಮಯಾಗ್ನಿರ್ದಹತಿ ಪ್ರಪಞ್ಚಮ್ ॥ ೧೬೭ ॥

೧೬೭. ಮನೋಮಯರೂಪವಾದ ಅಗ್ನಿಯು ಪಂಚೇಂದ್ರಿಯಗಳೆಂಬ ಐದು ಜನ ಹೋತೃಗಳಿಂದ ವಿಷಯಗಳೆಂಬ ತುಪ್ಪದ ಧಾರೆಯಿಂದ ಬೆಳೆಸಲ್ಪಡುತ್ತಾ ಬಲು ಬಗೆಯ ವಾಸನೆಗಳೆಂಬ ಕಟ್ಟಿಗೆಗಳಿಂದ ಹತ್ತಿಕೊಂಡು ಉರಿಯುತ್ತಾ ಪ್ರಪಂಚವನ್ನೇ ಸುಡುತ್ತಿರುವದು.

ನ ಹ್ಯಸ್ತ್ಯವಿದ್ಯಾ ಮನಸೋಽತಿರಿಕ್ತಾ
ಮನೋ ಹ್ಯವಿದ್ಯಾ ಭವಬನ್ಧಹೇತುಃ ।
ತಸ್ಮಿನ್ ವಿನಷ್ಟೇ ಸಕಲಂ ವಿನಷ್ಟಂ
ವಿಜೃಮ್ಭಿತೇಽಸ್ಮಿನ್ ಸಕಲಂ ವಿಜೃಮ್ಭತೇ ॥ ೧೬೮ ॥

೧೬೮. ಮನಸ್ಸಿಗಿಂತ ಬೇರೆಯಾದ ಯಾವ ಅವಿದ್ಯೆಯೂ[1] ಇರುವದಿಲ್ಲ ಮನಸ್ಸೇ ಸಂಸಾರಬಂಧಕ್ಕೆ ಕಾರಣವಾಗಿರುವ ಅವಿದ್ಯೆಯು. ಅದು ನಷ್ಟವಾದರೆ ಎಲ್ಲವೂ ನಷ್ಟವಾದಂತೆ, ಅದು ಎದ್ದು ಹರಡಿಕೊಂಡರೆ ಎಲ್ಲವೂ ಹರಡಿಕೊಳ್ಳುತ್ತದೆ.

ಸ್ವಪ್ನೇಽರ್ಥಶೂನ್ಯೇ ಸೃಜತಿ ಸ್ವಶಕ್ತ್ಯಾ
ಭೋಕ್ತ್ರಾದಿವಿಶ್ವಂ ಮನ ಏವ ಸರ್ವಮ್ ।
ತಥೈವ ಜಾಗ್ರತ್ಯಪಿ ನೋ ವಿಶೇಷ-
ಸ್ತತ್ಸರ್ವಮೇತನ್ಮನಸೋ ವಿಜೃಮ್ಭಣಮ್ ॥ ೧೬೯ ॥

೧೬೯. (ಯಾವ) ಪದಾರ್ಥವೂ ಇಲ್ಲದ ಸ್ವಪ್ನದಲ್ಲಿ ಭೋಕ್ತೃವೇ ಮುಂತಾದ[2] ಪ್ರಪಂಚವೆಲ್ಲವನ್ನೂ ಮನಸ್ಸೇ ಸೃಜಿಸುತ್ತದೆ. ಎಚ್ಚರದಲ್ಲಿಯೂ

1. ಮನಸ್ಸಿನ ಕಾರ್ಯವೇ ಅಧ್ಯಾಸರೂಪವಾದ ಅವಿದ್ಯೆಯು. ಇದಕ್ಕಿಂತ ಬೇರೆಯಾಗಿ ಇದರ ಕಾರಣವಾಗಿರುವ ಅವ್ಯಕ್ತವೆಂಬ ಅವಿದ್ಯೆಯನ್ನು ಗ್ರಂಥಕರ್ತರು ಹಿಂದೆಯೇ (೧೦೭ನೆಯ ಶ್ಲೋಕದಲ್ಲಿ) ಹೇಳಿರುವದರಿಂದ ಕಾರ್ಯಾವಿದ್ಯೆಯು ಮನೋಧರ್ಮವೇ ಹೊರತು ಬೇರೆಯಲ್ಲ ಎಂದೇ ಈ ವಾಕ್ಯಕ್ಕೆ ತಾತ್ಪರ್ಯವನ್ನು ಕಲ್ಪಿಸಬೇಕು.

2. ಭೋಕ್ತೃ, ಭೋಜ್ಯ, ಭೋಗ – ಎಂಬ ಮೂರನ್ನೂ.

ಹಾಗೆಯೇ ಹೊರತು ಮತ್ತೆ ಯಾವ ವಿಶೇಷವೂ ಇರುವದಿಲ್ಲ.[1] ಆದ್ದರಿಂದ ಇದೆಲ್ಲವೂ ಮನಸ್ಸಿನ ಹರಡಿಕೆಯೇ.

ಸುಷುಪ್ತಿಕಾಲೇ ಮನಸಿ ಪ್ರಲೀನೇ
ನೈವಾಸ್ತಿ ಕಿಞ್ಚಿತ್ ಸಕಲಪ್ರಸಿದ್ಧೇಃ ।
ಅತೋ ಮನಃಕಲ್ಪಿತ ಏವ ಪುಂಸಃ
ಸಂಸಾರ ಏತಸ್ಯ ನ ವಸ್ತುತೋಽಸ್ತಿ ॥ ೧೭೦ ॥

೧೭೦. ಸುಷುಪ್ತಿಕಾಲದಲ್ಲಿ ಮನಸ್ಸು ಪ್ರಲಯವಾಗಲಾಗಿ[2] ಯಾವದೊಂದು ಪದಾರ್ಥವೂ ಇರುವದಿಲ್ಲವೆಂಬುದು ಎಲ್ಲರಿಗೂ ತಿಳಿದ ವಿಷಯವು. ಆದ್ದರಿಂದ ಈ ಪುರುಷನಿಗೆ ಸಂಸಾರವು ಮನಸ್ಸಿನಿಂದಲೇ ಕಲ್ಪಿತವಾಗಿರುವದು, ನಿಜವಾಗಿರುವದಿಲ್ಲ.

ವಾಯುನಾ ನೀಯತೇ ಮೇಘಃ ಪುನಸ್ತೇನೈವ ನೀಯತೇ[3] ।
ಮನಸಾ ಕಲ್ಪ್ಯತೇ ಬನ್ಧೋ ಮೋಕ್ಷಸ್ತೇನೈವ ಕಲ್ಪ್ಯತೇ ॥ ೧೭೧

೧೭೧. ಮೋಡವು ಗಾಳಿಯಿಂದ ಕೊಚ್ಚಿಕೊಂಡು ಬರುತ್ತದೆ, ಮತ್ತೆ ಅದರಿಂದಲೇ ಒಯ್ಯಲ್ಪಡುತ್ತದೆ. (ಇದರಂತೆ) ಬಂಧವು ಮನಸ್ಸಿನಿಂದ ಕಲ್ಪಿತವಾಗುತ್ತದೆ; ಮೋಕ್ಷವು ಅದರಿಂದಲೇ ಕಲ್ಪಿತವಾಗುತ್ತದೆ.

ದೇಹಾದಿಸರ್ವವಿಷಯೇ ಪರಿಕಲ್ಪ್ಯ ರಾಗಂ
ಬಧ್ನಾತಿ ತೇನ ಪುರುಷಂ ಪಶುವದ್ ಗುಣೇನ ।
ವೈರಸ್ಯಮತ್ರ ವಿಷವತ್ ಸುವಿಧಾಯ ಪಶ್ಚಾ-
ದೇನಂ ವಿಮೋಚಯತಿ ತನ್ಮನ ಏವ ಬನ್ಧಾತ್ ॥ ೧೭೨ ॥

೧೭೨. ಈ ಮನಸ್ಸು ದೇಹವೇ ಮುಂತಾದ ಸರ್ವವಿಷಯಗಳಲ್ಲಿಯೂ ಅನುರಾಗವನ್ನುಂಟುಮಾಡಿ ಅದರಿಂದ ಪುರುಷನನ್ನು – ಹಗ್ಗದಿಂದ ಪಶುವನ್ನು ಕಟ್ಟುವಂತೆ – ಕಟ್ಟಿಹಾಕುತ್ತದೆ. ಆ ಮನಸ್ಸೇ ಈ (ವಿಷಯ)ಗಳಲ್ಲಿ ವಿಷದಲ್ಲಿರುವಂಥ ವಿರಾಗವನ್ನುಂಟುಮಾಡಿ ಈ (ಜೀವನನ್ನು) ಬಂಧದಿಂದ ಬಿಡುಗಡೆ ಮಾಡಿಸುತ್ತದೆ.

1. ಎಚ್ಚರದಲ್ಲಿರುವ ಭೋಕ್ತೃ, ಭೋಜ್ಯ, ಭೋಗ – ಈ ಮೂರೂ ಮನಸ್ಸಿನ ರೂಪಗಳೇ ಎಂದು ಹೇಳಿರುವದು ಮನಸ್ಸಿನಿಂದ ಕಲ್ಪಿತವಾಗಿ ಭೋಕ್ತೃತ್ವವುಂಟಾಗಿದೆ ಎಂದು ತಿಳಿಯುವದಕ್ಕೆ.

2. ಬೀಜರೂಪವಾದ ಅವ್ಯಕ್ತವೆಂಬ ಅವಿದ್ಯೆಯಾಗಿ ಅಡಗಿಕೊಳ್ಳಲಾಗಿ ಎಂದರ್ಥ. ಹಿಂದೆ ೨೦ನೆಯ ಶ್ಲೋಕವನ್ನು ನೋಡಿ.

3. 'ಲೀಯತೇ' ಎಂಬ ಪಾ॥ ಪಾಠವು ಬೇಕಿಲ್ಲ.

ತಸ್ಮಾನ್ಮನಃ ಕಾರಣಮಸ್ಯ ಜನ್ತೋ-
ರ್ಬನ್ಧಸ್ಯ ಮೋಕ್ಷಸ್ಯ ಚ ವಾ ವಿಧಾನೇ |
ಬನ್ಧಸ್ಯ ಹೇತುರ್ಮಲಿನಂ ರಜೋಗುಣೈ-
ರ್ಮೋಕ್ಷಸ್ಯ ಶುದ್ಧಂ ವಿರಜಸ್ತಮಸ್ಕಮ್ ||೧೭೩||

೧೭೩. ಆದ್ದರಿಂದ ಈ ಜೀವನಿಗೆ ಬಂಧವನ್ನಾಗಲಿ ಮೋಕ್ಷವನ್ನಾಗಲಿ ಉಂಟುಮಾಡುವದರಲ್ಲಿ ಮನಸ್ಸೇ ಕಾರಣವಾಗಿರುತ್ತದೆ.[1] ರಜೋಗುಣಗಳಿಂದ[2] ಮಲಿನವಾಗಿರುವಾಗ ಬಂಧಕ್ಕೆ ಕಾರಣವಾಗಿರುತ್ತದೆ. ರಜೋಗುಣತಮೋಗುಣ ಗಳಿಲ್ಲದೆ ಶುದ್ಧವಾಗಿರುವಾಗ[3] ಮೋಕ್ಷಕ್ಕೆ (ಕಾರಣವಾಗಿರುತ್ತದೆ).

ವಿವೇಕವೈರಾಗ್ಯಗುಣಾತಿರೇಕಾ-
ಚ್ಛುದ್ಧತ್ವಮಾಸಾದ್ಯ ಮನೋ ವಿಮುಕ್ತ್ಯೈ |
ಭವತ್ಯತೋ ಬುದ್ಧಿಮತೋ ಮುಮುಕ್ಷೋ-
ಸ್ತಾಭ್ಯಾಂ ದೃಢಾಭ್ಯಾಂ ಭವಿತವ್ಯಮಗ್ರೇ ||೧೭೪||

೧೭೪. ವಿವೇಕ, ವೈರಾಗ್ಯ[4]- ಎಂಬ ಗುಣಗಳು ಹೆಚ್ಚಿದರೆ ಮನಸ್ಸು ಶುದ್ಧವಾಗಿ ಮೋಕ್ಷಕ್ಕೆ ಕಾರಣವಾಗುತ್ತದೆ. ಆದ್ದರಿಂದ ಬುದ್ಧಿವಂತನಾದ ಮುಮುಕ್ಷುವು ಮೊದಲು ಆವೆರಡನ್ನೂ ಗಟ್ಟಿಗೊಳಿಸಿಕೊಳ್ಳಬೇಕು.

ಮನೋ ನಾಮ ಮಹಾವ್ಯಾಘ್ರೋ ವಿಷಯಾರಣ್ಯಭೂಮಿಷು |
ಚರತ್ಯತ್ರ ನ ಗಚ್ಛನ್ತು ಸಾಧವೋ ಯೇ ಮುಮುಕ್ಷವಃ ||೧೭೫||

೧೭೫. ಮನಸ್ಸೆಂಬ ದೊಡ್ಡ ಹುಲಿಯು ವಿಷಯಗಳೆಂಬ ಕಾಡಿನ ಪ್ರದೇಶ ಗಳಲ್ಲಿ ಅಡ್ಡಾಡುತ್ತಿರುತ್ತದೆ. ಯಾರು ಮುಮುಕ್ಷುಗಳಾಗಿರುವರೋ (ಅಂಥ) ಸಾಧು(ಜನರು) ಅಲ್ಲಿಗೆ ಹೋಗದಿರಲಿ !

ಮನಃ ಪ್ರಸೂತೇ ವಿಷಯಾನಶೇಷಾನ್
ಸ್ಥೂಲಾತ್ಮನಾ ಸೂಕ್ಷ್ಮತಯಾ ಚ ಭೋಕ್ತುಃ |
ಶರೀರವರ್ಣಾಶ್ರಮಜಾತಿಭೇದಾನ್
ಗುಣಕ್ರಿಯಾಹೇತುಫಲಾನಿ ನಿತ್ಯಮ್ ||೧೭೬||

---

1. ಅ. ಬಿಂ. ೨; ಮೈ. ೪–೧೧–ಈ ಉಪನಿಷತ್ತುಗಳ ಭಾವವಿದು. ಶಂ. ಗೀ. ೨–೪ .

2. ರಜಸ್ತಮೋಗುಣಗಳಿಂದ ಎಂದರ್ಥ.

3. ಶುದ್ಧಸತ್ತ್ವಗುಣದಿಂದ ಕೂಡಿರುವಾಗ ಎಂದರ್ಥ ; ೧೧೮ನೆಯ ಶ್ಲೋಕ ವನ್ನು ನೋಡಿ.

4. ಇವುಗಳ ಸ್ವರೂಪವನ್ನು ಹಿಂದೆ ಅಧಿಕಾರಲಕ್ಷಣದಲ್ಲಿ ೨೦, ೨೧ನೆಯ ಶ್ಲೋಕ ಗಳಲ್ಲಿ ವರ್ಣಿಸಿರುತ್ತದೆ.

೧೭೬. ಮನಸ್ಸೇ ಭೋಕ್ತೃವಿಗೆ ಸ್ಥೂಲರೂಪದಿಂದಲೂ ಸೂಕ್ಷ್ಮರೂಪ ದಿಂದಲೂ[1] ವಿಷಯಗಳೆಲ್ಲವನ್ನೂ ಆಯಾ ಶರೀರ, ವರ್ಣ, ಆಶ್ರಮ, ಜಾತಿ ಇವುಗಳನ್ನೂ ಗುಣಗಳ ಕ್ರಿಯೆಗಳನ್ನೂ ಹೇತುಫಲಗಳನ್ನೂ[2] ಯಾವಾಗಲೂ ಉಂಟುಮಾಡುತ್ತಿರುವದು.

ಅಸಙ್ಗಚಿದ್ರೂಪಮಮುಂ ವಿಮೋಹ್ಯ
ದೇಹೇನ್ದ್ರಿಯಪ್ರಾಣಗುಣೈರ್ನಿಬಧ್ಯ ।
ಅಹಂ ಮಮೇತಿ ಭ್ರಮಯತ್ಯಜಸ್ರಂ
ಮನಃ ಸ್ವಕೃತ್ಯೇಷು ಫಲೋಪಭುಕ್ತಿಷು ॥೧೭೭॥

೧೭೭. ಅಸಂಗಚಿದ್ರೂಪನಾದ[3] ಈ (ಆತ್ಮನನ್ನು ಈ) ಮನಸ್ಸೇ ಮೋಹ ಗೊಳಿಸಿ ದೇಹ, ಇಂದ್ರಿಯ, ಪ್ರಾಣ-ಇವುಗಳ ಗುಣಗಳಿಂದ ಕಟ್ಟಿಹಾಕಿ ತನ್ನ ಕರ್ಮಗಳಲ್ಲಿಯೂ ಅವುಗಳ ಫಲೋಪಭೋಗಗಳಲ್ಲಿಯೂ ಒಂದೇಸಮನೆ 'ನಾನು' 'ನನ್ನದು' ಎಂಬ ಭ್ರಾಂತಿಯನ್ನುಂಟುಮಾಡುತ್ತಿರುವದು.

ಅಧ್ಯಾಸದೋಷಾತ್ ಪುರುಷಸ್ಯ ಸಂಸೃತಿ[4]-
ರಧ್ಯಾಸಬನ್ಧಸ್ತ್ವಮುನೈವ ಕಲ್ಪಿತಃ ।
ರಜಸ್ತಮೋದೋಷವತೋಽವಿವೇಕಿನೋ
ಜನ್ಮಾದಿದುಃಖಸ್ಯ ನಿದಾನಮೇತತ್ ॥೧೭೮॥

೧೭೮. ಮನುಷ್ಯನಿಗೆ ಅಧ್ಯಾಸದೋಷದಿಂದಲೇ ಸಂಸಾರವಾಗಿರುತ್ತದೆ; ಆದರೆ ಅಧ್ಯಾಸಬಂಧವು ಈ ಮನಸ್ಸಿನಿಂದಲೇ ಕಲ್ಪಿತವಾಗಿರುತ್ತದೆ. ರಜಸ್ಸು, ತಮಸ್ಸು-ಇವುಗಳ ದೋಷವುಳ್ಳ ಅವಿವೇಕಿಗೆ ಜನ್ಮವೇ ಮುಂತಾದ ದುಃಖಕ್ಕೆ ಇದೇ ಕಾರಣವು.

ಅತಃ ಪ್ರಾಹುರ್ಮನೋಽವಿದ್ಯಾಂ ಪಣ್ಡಿತಾಸ್ತತ್ತ್ವದರ್ಶಿನಃ ।
ಯೇನೈವ ಭ್ರಾಮ್ಯತೇ ವಿಶ್ವಂ ವಾಯುನೇವಾಭ್ರಮಣ್ಡಲಮ್ ॥೧೭೯॥

೧೭೯. ಆದ್ದರಿಂದ ತತ್ತ್ವವನ್ನು ಬಲ್ಲ ಪಂಡಿತರು ಮನಸ್ಸನ್ನೇ ಅವಿದ್ಯೆ ಯೆಂದು ಕರೆಯುತ್ತಾರೆ. ಗಾಳಿಯಿಂದ ಮೋಡಗಳು ಅಲೆದಾಡುವಂತೆ ಈ (ಮನಸ್ಸಿ)ನಿಂದಲೇ ಪ್ರಪಂಚವೆಲ್ಲವೂ ಅಲೆದಾಡುತ್ತಿರುವದು.

---

1. ವಾಸನಾರೂಪದಿಂದಲೂ.

2. ಗುಣಕ್ರಿಯೆಗಳೆಂದರೆ ಮೂರು ಗುಣಗಳ ವಿಕಾರಗಳು ; ಹೇತುಫಲಗಳೆಂದರೆ ಧರ್ಮಾಧರ್ಮ, ಶರೀರಗ್ರಹಣ-ಇವು.

3. ಅಸಂಗಚಿದ್ರೂಪನೆಂಬ ಶಬ್ದವು ಈ ಗ್ರಂಥಕಾರರಿಗೆ ಬಹಳ ಮೆಚ್ಚು. 'ಕೂಟಸ್ಥಾ ಸಂಗಚಿದ್ರೂಪ' ಎಂಬ ಮಾತು ಶಂ. ಗೀ. ಯಲ್ಲಿ ತುಂಬಿತುಳುಕಾಡುತ್ತಿದೆ.

4. ಇಲ್ಲಿ ಛಂದಸ್ಸು ತಪ್ಪಿರುವಂತೆ ಕಾಣುತ್ತದೆ ; "ಸಂಸೃತಿರ್ಹ್ಯಧ್ಯಾಸ" ಎಂದಿದ್ದ ರಾಗಿತ್ತು.

ತಸ್ಮಾನ್ಮನಃಶೋಧನಂ ಕಾರ್ಯಂ ಪ್ರಯತ್ನೇನ ಮುಮುಕ್ಷುಣಾ ।
ವಿಶುದ್ಧೇ ಸತಿ ಚೈತಸ್ಮಿನ್ ಮುಕ್ತಿಃ ಕರಫಲಾಯತೇ ॥೧೮೦॥

೧೮೦. ಆದ್ದರಿಂದ ಮುಮುಕ್ಷುವು ಪ್ರಯತ್ನದಿಂದ ಮನಸ್ಸನ್ನು ಶುದ್ಧಿಗೊಳಿಸಿಕೊಳ್ಳಬೇಕು.[1] ಇದು ಶುದ್ಧವಾದರೆ ಮುಕ್ತಿಯು ಕೈಯೊಳಗಿನ ಹಣ್ಣಾಗುವದು.

ಮೋಕ್ಷೈಕಸಕ್ತ್ಯಾ ವಿಷಯೇಷು ರಾಗಂ
ನಿರ್ಮೂಲ್ಯ ಸಂನ್ಯಸ್ಯ ಚ ಸರ್ವಕರ್ಮ ।
ಸಚ್ಛ್ರದ್ಧಯಾ ಯಃ ಶ್ರವಣಾದಿನಿಷ್ಠೋ
ರಜಃಸ್ವಭಾವಂ ಸ ಧುನೋತಿ ಬುದ್ಧೇಃ ॥೧೮೧॥

೧೮೧. ಮೋಕ್ಷದಲ್ಲಿಯೇ ಆಸಕ್ತಿಯಿಟ್ಟು ವಿಷಯಗಳಲ್ಲಿರುವ ರಾಗವನ್ನು ಬೇರುಸಹಿತ ಕಿತ್ತುಹಾಕಿ ಸರ್ವಕರ್ಮಗಳನ್ನೂ ಸಂನ್ಯಾಸಮಾಡಿ[2] ಉತ್ತಮವಾದ ಶ್ರದ್ಧೆಯಿಂದ ಯಾವನು ಶ್ರವಣಾದಿಗಳಲ್ಲಿ[3] ತತ್ಪರನಾಗಿರುವನೋ ಆವನು ಮನಸ್ಸಿನ ರಾಜಸಸ್ವಭಾವವನ್ನು ಹೋಗಲಾಡಿಸಿಕೊಳ್ಳುತ್ತಾನೆ.

ಮನೋಮಯೋ ನಾಪಿ ಭವೇತ್ ಪರಾತ್ಮಾ
ಹ್ಯಾದ್ಯನ್ತವತ್ತ್ವಾತ್ ಪರಿಣಾಮಿಭಾವಾತ್ ।
ದುಃಖಾತ್ಮಕತ್ವಾದ್ ವಿಷಯತ್ವಹೇತೋ-
ರ್ದ್ರಷ್ಟಾ ಹಿ ದೃಶ್ಯಾತ್ಮತಯಾ ನ ದೃಷ್ಟಃ ॥೧೮೨॥

೧೮೨. ಮನೋಮಯನೂ ಪರಮಾತ್ಮನಲ್ಲ. ಏಕೆಂದರೆ ಇದಕ್ಕೆ ಮೊದಲುಕೊನೆಗಳುಂಟು[4]. (ಇದು) ಮಾರ್ಪಾಡುಗಳನ್ನು ಹೊಂದುವ ಸ್ವಭಾವವುಳ್ಳದ್ದು, ದುಃಖರೂಪವಾದದ್ದು, ದೃಶ್ಯರೂಪವಾದದ್ದು. ದ್ರಷ್ಟೃವು ದೃಶ್ಯರೂಪನಾಗಿರುವದು ಕಂಡುಬಂದೇ ಇಲ್ಲವಷ್ಟೆ ?

---

1. ಶಾಸ್ತ್ರೀಯಕರ್ಮವನ್ನು ಮಾಡಿ ಚಿತ್ತಶುದ್ಧಿಯನ್ನು ಮಾಡಿಕೊಳ್ಳಬೇಕು-ಎಂದರ್ಥ. ೧೪೬ನೆಯ ಶ್ಲೋಕವನ್ನು ನೋಡಿ.

2. ಸರ್ವಕರ್ಮಸಂನ್ಯಾಸವನ್ನು ಮಾಡಿದವನೇ ಶ್ರವಣಕ್ಕೆ ಅಧಿಕಾರಿ ಎಂಬುದು ಈ ಗ್ರಂಥಕಾರರ ಅಭಿಪ್ರಾಯವು. ಹಿಂದೆ ೧೦ನೆಯ ಶ್ಲೋಕವನ್ನು ನೋಡಿ.

3. ಶ್ರವಣ, ಮನನ, ನಿದಿಧ್ಯಾಸನ, ಸಮಾಧಿ ಎಂಬ ಸಾಧನಗಳು ಎಂದರ್ಥ. ೩[illegible]ನೆಯ ಶ್ಲೋಕಗಳನ್ನು ನೋಡಿರಿ.

4. ಸುಷುಪ್ತಿಯಲ್ಲಿ ಲಯವಾಗಿ ಎಚ್ಚರದಲ್ಲಿ ತಲೆದೋರುತ್ತದೆ.

## ವಿಜ್ಞಾನಮಯಕೋಶವಿವೇಕ

ಬುದ್ಧಿರ್ಬುದ್ಧೀನ್ದ್ರಿಯೈಃ ಸಾರ್ಧಂ ಸವೃತ್ತಿಃ ಕರ್ತೃಲಕ್ಷಣಃ ।
ವಿಜ್ಞಾನಮಯಕೋಶಃ ಸ್ಯಾತ್ ಪುಂಸಃ ಸಂಸಾರಕಾರಣಮ್ ॥೧೮೪॥

೧೮೪. ಬುದ್ಧೀಂದ್ರಿಯಗಳಿಂದಕೂಡಿದ[1] ವೃತ್ತಿಸಹಿತವಾದ ಬುದ್ಧಿಯು[2] ಕರ್ತೃರೂಪವಾಗಿರುವ ವಿಜ್ಞಾನಮಯಕೋಶವಾಗಿರುತ್ತದೆ. ಇದೇ ಮನುಷ್ಯನಿಗೆ ಸಂಸಾರಕ್ಕೆ ಕಾರಣವು.

ಅನುವ್ರಜಚ್ಚಿತ್ಪ್ರತಿಬಿಮ್ಬಶಕ್ತಿ-
ರ್ವಿಜ್ಞಾನಸಂಜ್ಞಃ ಪ್ರಕೃತೇರ್ವಿಕಾರಃ ।
ಜ್ಞಾನಕ್ರಿಯಾವಾನಹಮಿತ್ಯಜಸ್ರಂ
ದೇಹೇನ್ದ್ರಿಯಾದಿಷ್ವಭಿಮನ್ಯತೇ ಭೃಶಮ್ ॥೧೮೫॥

೧೮೫. (ತನ್ನನ್ನೇ) ಅನುಸರಿಸಿಕೊಂಡು ಬರುವ ಚಿತ್ಪ್ರತಿಬಿಂಬದ[3] ಶಕ್ತಿಯುಳ್ಳ ವಿಜ್ಞಾನವೆಂಬ ಪ್ರಕೃತಿಯ ವಿಕಾರವು ಜ್ಞಾನಕ್ರಿಯೆಗಳುಳ್ಳದ್ದು (ಇದು) ದೇಹೇಂದ್ರಿಯಾದಿಗಳಲ್ಲಿ 'ನಾನು' ಎಂದು ಬಹಳವಾಗಿ ಅಭಿಮಾನವನ್ನು ಮಾಡಿಕೊಂಡಿರುತ್ತದೆ.

ಅನಾದಿಕಾಲೋಽಯಮಹಂಸ್ವಭಾವೋ
ಜೀವಃ ಸಮಸ್ತವ್ಯವಹಾರವೋಢಾ ।
ಕರೋತಿ ಕರ್ಮಾಣ್ಯಪಿ[4] ಪೂರ್ವವಾಸನಃ
ಪುಣ್ಯಾನ್ಯಪುಣ್ಯಾನಿ ಚ ತತ್ಫಲಾನಿ ॥೧೮೬॥

ಭುಙ್ಕ್ತೇ ವಿಚಿತ್ರಾಸ್ವಪಿ ಯೋನಿಷು ವ್ರಜ-
ನ್ನಾಯಾತಿ ನಿರ್ಯಾತ್ಯಧ ಊರ್ಧ್ವಮೇಷಃ ।
ಅಸ್ಯೈವ ವಿಜ್ಞಾನಮಯಸ್ಯ ಜಾಗ್ರತ್
ಸ್ವಪ್ನಾದ್ಯವಸ್ಥಾಃ ಸುಖದುಃಖಭೋಗಃ ॥೧೮೭॥

೧೮೬-೧೮೭. ಅನಾದಿಕಾಲದಿಂದಲೂ ನಡೆದುಬಂದಿರುವ ಈ ನಾನೆಂಬ ಸ್ವಭಾವವೇ ಸಮಸ್ತವ್ಯವಹಾರಗಳನ್ನೂ ನಿರ್ವಹಿಸುತ್ತಿರುವ ಜೀವನು. ಇವನು

---

1. ೯ ನೆಯ ಶ್ಲೋಕದಲ್ಲಿ ಹೇಳಿರುವ ಜ್ಞಾನೇಂದ್ರಿಯಗಳಿಂದೊಡಗೂಡಿದ.

2. ಬುದ್ಧಿಯು ಎಂದರೆ ಅಂತಃಕರಣವು. ನಿಶ್ಚಯರೂಪವಾದ ವೃತ್ತಿಯಿಂದ ಕೂಡಿದ ಅಂತಃಕರಣಕ್ಕೆ ಈ ಹೆಸರು

3. ಅಂತಃಕರಣದಲ್ಲಿರುವ ಚೈತನ್ಯದ ಹುಸಿತೋರಿಕೆ.

4. 'ಕರ್ಮಾಣ್ಯಸೌ' ಎಂಬ ಪಾಠಕ್ಕಿಂತ ಇದೇ ಮೇಲು.

ಹಿಂದಿನ ವಾಸನೆಯಿಂದ ಪುಣ್ಯಪಾಪಕರ್ಮಗಳನ್ನು ಮಾಡುತ್ತಾನೆ; ಅವುಗಳ ಫಲವನ್ನು ಅನುಭವಿಸುತ್ತಾನೆ; ಬಗೆಬಗೆಯ ಯೋನಿಗಳನ್ನು ಹೊಂದಿ ಅಧೋಗತಿಯನ್ನೂ ಊರ್ಧ್ವಗತಿಯನ್ನೂ ಹೊಂದುತ್ತಾ ಬರುತ್ತಲೂ ಹೋಗುತ್ತಲೂ ಇರುತ್ತಾನೆ. ಈ ವಿಜ್ಞಾನಮಯನಿಗೇ ಎಚ್ಚರಕನಸು ಮುಂತಾದ ಅವಸ್ಥೆಗಳೂ[1] ಸುಖದುಃಖಭೋಗಗಳೂ ಉಂಟಾಗುತ್ತಿರುವವು.

ದೇಹಾದಿನಿಷ್ಠಾಶ್ರಮಧರ್ಮಕರ್ಮ-
ಗುಣಾಭಿಮಾನಃ ಸತತಂ ಮಮೇತಿ ।
ವಿಜ್ಞಾನಕೋಶೋಽಯಮತಿಪ್ರಕಾಶಃ
ಪ್ರಕೃಷ್ಟಸಾನ್ನಿಧ್ಯವಶಾತ್ ಪರಾತ್ಮನಃ ॥ ೧೮೭ ॥
ಅತೋ ಭವತ್ಯೇಷ ಉಪಾಧಿರಸ್ಯ
ಯದಾತ್ಮಧೀಃ ಸಂಸರತಿ ಭ್ರಮೇಣ

೧೮೭. ದೇಹಾದಿಗಳಲ್ಲಿರುವ ಆಶ್ರಮಧರ್ಮಗಳು, ಕರ್ಮಗಳು, ಗುಣಗಳು– ಇವುಗಳಲ್ಲಿ 'ನನ್ನವು' ಎಂಬ ನಿತ್ಯಾಭಿಮಾನವಿರುವದು ಈ ವಿಜ್ಞಾನಕೋಶವು ಪರಮಾತ್ಮನಿಗೆ ಬಹಳ ಹತ್ತಿರವಿರುವದರಿಂದ ಬಹಳ ಪ್ರಕಾಶಮಯವಾಗಿರುತ್ತದೆ. ಆದ್ದರಿಂದ ಈ ಆತ್ಮನಿಗೆ ಇದು ಉಪಾಧಿಯಾಗಿರುತ್ತದೆ. ಇದೇ ನಾನೆಂಬ ತಿಳಿವಳಿಕೆಯಿಂದ ಮನುಷ್ಯನು ಭ್ರಮೆಯಿಂದ ಸಂಸಾರದಲ್ಲಿ ತೊಳಲುತ್ತಿರುತ್ತಾನೆ.

ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದಿ
ಸ್ಫುರತ್ ಸ್ವಯಂಜ್ಯೋತಿಃ ।
ಕೂಟಸ್ಥಃ ಸನ್ನಾತ್ಮಾ ಕರ್ತಾ ಭೋಕ್ತಾ ಭವತ್ಯುಪಾಧಿಸ್ಥಃ ॥೧೮೮॥

೧೮೮. ಹೃದಯದಲ್ಲಿ ಸ್ವಯಂಪ್ರಕಾಶನಾಗಿ ಪ್ರಾಣಗಳ ಹತ್ತಿರವಿರುವ ಈ ವಿಜ್ಞಾನಮಯನಿದಾನಲ್ಲ[2], ಈ ಆತ್ಮನು ಕೂಟಸ್ಥನಾಗಿದ್ದರೂ ಉಪಾಧಿಯಲ್ಲಿರುವದರಿಂದ[3] ಕರ್ತೃವೂ ಭೋಕ್ತೃವೂ ಆಗಿರುತ್ತಾನೆ.

ಸ್ವಯಂ ಪರಿಚ್ಛೇದಮುಪೇತ್ಯ ಬುದ್ಧೇ-
ಸ್ತಾದಾತ್ಮ್ಯದೋಷೇಣ ಪರಂ ಮೃಷಾತ್ಮನಃ ।
ಸರ್ವಾತ್ಮಕಃ ಸನ್ನಪಿ ವೀಕ್ಷತೇ ಸ್ವಯಂ
ಸ್ವತಃ ಪೃಥಕ್ತ್ವೇನ ಮೃದೋ ಘಟಾನಿವ ॥ ೧೮೯ ॥

---

1. ಹಿಂದೆ ೧೦೬ನೆಯ ಶ್ಲೋಕದಲ್ಲಿ ಅಹಂಕಾರಕ್ಕೇ ಮೂರವಸ್ಥೆಗಳೇ ಎಂದು ಹೇಳಿದೆ. ಇಲ್ಲಿ ಕರ್ತೃತ್ವವನ್ನು ವಿಜ್ಞಾನಕ್ಕೆ ಸೇರಿಸಿರುವದರಿಂದ ಇದರಲ್ಲಿ ಅಹಂಕಾರವನ್ನೂ ಏಕಮಾಡಿರುವಂತೆ ಕಾಣುತ್ತದೆ.

2. ಬೃ. ೪–೩–೭ರ ಸೂಚನೆ.

3. ವಿಜ್ಞಾನನೆಂಬ ಉಪಾಧಿಯಿಂದೊಡಗೂಡಿರುವದರಿಂದ.

೧೮೯. ಮಿಥ್ಯಾರೂಪವಾದ ಬುದ್ಧಿಯೇ ತಾನೆಂದು (ತಿಳಿದುಕೊಂಡ) ದೋಷದಿಂದ ತಾನೂ ಪರಿಚ್ಛೇದವನ್ನು ಹೊಂದಿ ನಿಜವಾಗಿ ತಾನು ಸರ್ವಾತ್ಮನಾಗಿದ್ದರೂ ಮಣ್ಣಿಗಿಂತ ಗಡಿಗೆಗಳು ಬೇರೆ ಎಂದು (ಜನರು) ತಿಳಿಯುವಂತೆ ತನ್ನನ್ನೇ ತನಗಿಂತ ಬೇರೆಯಾಗಿ ಕಾಣುತ್ತಿರುವನು

ಉಪಾಧಿಸಂಬನ್ಧವಶಾತ್ ಪರಾತ್ಮಾ
ಹ್ಯುಪಾಧಿ[1]ಧರ್ಮಾನನುಭಾತಿ ತದ್ಗುಣಃ ।
ಅಯೋವಿಕಾರಾನವಿಕಾರಿವಹ್ನಿವತ್
ಸದೈಕರೂಪೋಽಪಿ ಪರಃ ಸ್ವಭಾವಾತ್ ॥ ೧೯೦ ॥

೧೯೦. (ಈ) ಪರಮಾತ್ಮನು ಸ್ವಭಾವದಿಂದ ಯಾವಾಗಲೂ ಒಂದೇ ರೂಪದಿಂದ ಪರತಮರೂಪನೇ ಆಗಿರುತ್ತಿದ್ದರೂ ಉಪಾಧಿಸಂಬಂಧದಿಂದ ಅದರ ಗುಣವುಳ್ಳವನಾಗಿ, ಯಾವ ಮಾರ್ಪಾಡೂ ಇಲ್ಲದ ಬೆಂಕಿಯು ಕಬ್ಬಿಣದ ವಿಕಾರಗಳನ್ನು ಅನುಸರಿಸುವಂತೆ[2], ಉಪಾಧಿಯ ಧರ್ಮಗಳನ್ನನುಸರಿಸಿ ತಾನೂ ತೋರುತ್ತಾನೆ.

## ಶಿಷ್ಯನ ಪ್ರಶ್ನೆ : ಅನಾದಿಯಾದ ಉಪಾಧಿಗೆ ನಾಶವುಂಟೆ ?

**ಶಿಷ್ಯ ಉವಾಚ :-**

ಭ್ರಮೇಣಾಪ್ಯನ್ಯಥಾ ವಾಽಸ್ತು ಜೀವಭಾವಃ ಪರಾತ್ಮನಃ ।
ತದುಪಾಧೇರನಾದಿತ್ವಾನ್ನಾನಾದೇರ್ನಾಶ ಇಷ್ಯತೇ ॥ ೧೯೧ ॥
ಅತೋಽಸ್ಯ ಜೀವಭಾವೋಽಪಿ ನಿತ್ಯೋ ಭವತಿ ಸಂಸೃತಿಃ ।
ನ ನಿವರ್ತೇತ ತನ್ಮೋಕ್ಷಃ ಕಥಂ ಮೇ ಶ್ರೀಗುರೋ ವದ ॥ ೧೯೨ ॥

೧೯೧-೧೯೨. ಶಿಷ್ಯನು ಇಂತೆಂದನು : ಶ್ರೀಗುರುವೆ, ಪರಮಾತ್ಮನು ಜೀವನಾಗಿರುವದು ಭ್ರಾಂತಿಯಿಂದಲಾಗಿರಲಿ[3], ಬೇರೆ ಯಾವ ಕಾರಣದಿಂದಲಾದರೂ ಆಗಿರಲಿ, ಉಪಾಧಿಯು ಅನಾದಿಯಾಗಿರುವದರಿಂದ ಅನಾದಿಯಾದ ಉಪಾಧಿಗೆ ನಾಶವಿಲ್ಲದೆಹೋಗುವದಲ್ಲ ! ಆದ್ದರಿಂದ ಇವನ ಜೀವತ್ವವೂ ನಿತ್ಯವಾಗುತ್ತದೆ ;

---

1. 'ಹ್ಯುಪಾಧಿ' ಎಂದು ಪಾ॥

2. ಬೆಂಕಿಗೆ ಆಕಾರವು ಇಲ್ಲವಾದರೂ ಕಾದಕಬ್ಬಿಣವು ಯಾವ ಆಕಾರದ್ದಾದರೆ ಆ ಆಕಾರದ್ದಾಗಿಯೇ ತೋರುತ್ತಿರುವಂತೆ.

3. ಭ್ರಾಂತಿಯಿಂದಾದದ್ದು ಸರಿಯಾದ ತಿಳಿವಳಿಕೆಯಿಂದ ಬಾಧಿತವಾಗಬಹುದಲ್ಲ. ಆದರೂ ಇಲ್ಲಿ ಶಿಷ್ಯನು ಭ್ರಾಂತಿಯಿಂದಾಗಿರುವ ಜೀವತ್ವವು ಹೋಗಲಾರದು ಎಂದು ಶಂಕಿಸಿರುವದಕ್ಕೆ ಕಾರಣವೇನೋ ತಿಳಿಯದು.

ಸಂಸಾರವು ತೊಲಗುವದೇ ಇಲ್ಲ. ಹೀಗಿರುವಲ್ಲಿ (ಇವನಿಗೆ) ಮೋಕ್ಷವು ಹೇಗೆ : ಇದನ್ನು ಹೇಳಬೇಕು.

## ಗುರುವಿನ ಉತ್ತರ :
## ಜ್ಞಾನದಿಂದ ಜೀವಭ್ರಾಂತಿಯು ತೊಲಗುವದು

**ಶ್ರೀಗುರುರುವಾಚ :**

ಸಮ್ಯಕ್ ಪೃಷ್ಟಂ ತ್ವಯಾ ವಿದ್ವನ್ ಸಾವಧಾನೇನ ತಚ್ಛೃಣು ।
ಪ್ರಾಮಾಣಿಕೀ ನ ಭವತಿ ಭ್ರಾನ್ತ್ಯಾ ಮೋಹಿತಕಲ್ಪನಾ ॥ ೧೯೩ ॥

೧೯೩. ಶ್ರೀಗುರುವಿಂತೆಂದನು : ಎಲೈ ವಿವೇಕಿಯೆ, ನೀನು ಸರಿಯಾಗಿ ಕೇಳಿರುವೆ. ಸಾವಧಾನವಾಗಿ ಇದನ್ನು ಕೇಳು : ಮೂಢರಾದವರು ಭ್ರಾಂತಿಯಿಂದ ಕಲ್ಪಿಸಿಕೊಂಡಿರುವದು ಪ್ರಾಮಾಣಿಕವಾಗುವದಿಲ್ಲ.

ಭ್ರಾನ್ತಿಂ ವಿನಾ ತ್ವಸಙ್ಗಸ್ಯ ನಿಷ್ಕ್ರಿಯಸ್ಯ ನಿರಾಕೃತೇಃ ।
ನ ಘಟೇತಾರ್ಥಸಂಬನ್ಧೋ ನಭಸೋ ನೀಲತಾದಿವತ್ ॥ ೧೯೪ ॥

೧೯೪. ಆದರೆ ಅಸಂಗನೂ ನಿಷ್ಕ್ರಿಯನೂ ಆಕಾರರಹಿತನೂ ಆಗಿರುವ ಆತ್ಮನಿಗೆ ಭ್ರಾಂತಿಯಿಂದಲ್ಲದೆ– ಆಕಾಶಕ್ಕೆ ನೀಲತ್ವವೇ ಮುಂತಾದದ್ದರ ಸಂಬಂಧದಂತೆ– (ಮತ್ತೆ ಹೇಗೂ) ವಿಷಯಗಳ ಸಂಬಂಧವು ಉಂಟಾಗಲಾರದು.

ಸ್ವಸ್ಯ ದ್ರಷ್ಟುರ್ನಿರ್ಗುಣಸ್ಯಾಕ್ರಿಯಸ್ಯ
ಪ್ರತ್ಯಗ್ ಬೋಧಾನನ್ದರೂಪಸ್ಯ ಬುದ್ಧೇಃ ।
ಭ್ರಾನ್ತ್ಯಾ ಪ್ರಾಪ್ತೋ ಜೀವಭಾವೋ ನ ಸತ್ಯೋ
ಮೋಹಾಪಾಯೇ ನಾಸ್ತ್ಯವಸ್ತು ಸ್ವಭಾವಾತ್ ॥ ೧೯೫ ॥

೧೯೫. (ಎಲ್ಲವನ್ನೂ) ನೋಡುತ್ತಿರುವ ನಿರ್ಗುಣನಾದ ನಿಷ್ಕ್ರಿಯನಾದ ಒಳಗಿನ ಜ್ಞಾನಾನಂದಸ್ವರೂಪನಾಗಿರುವ ಆತ್ಮನಿಗೆ ಬುದ್ಧಿಯ ಭ್ರಾಂತಿಯಿಂದ ಉಂಟಾಗಿರುವ ಜೀವತ್ವವು ಸತ್ಯವಲ್ಲ. ಇದು ಸ್ವಭಾವದಿಂದಲೇ ಅಸತ್ಯವಾಗಿರುವದರಿಂದ ಮೋಹವು ಹೋದಬಳಿಕ ಇರುವದೇ ಇಲ್ಲ.

ಯಾವದ್ ಭ್ರಾನ್ತಿಸ್ತಾವದೇವಾಸ್ಯ ಸತ್ತಾ
ಮಿಥ್ಯಾಜ್ಞಾನೋಜ್ಜೃಮ್ಭಿತಸ್ಯ ಪ್ರಮಾದಾತ್ ।
ರಜ್ಜ್ವಾಂ ಸರ್ಪೋ ಭ್ರಾನ್ತಿಕಾಲೀನ ಏವ
ಭ್ರಾನ್ತೇರ್ನಾಶೇ ನೈವ ಸರ್ಪೋಽಪಿ[1] ತದ್ವತ್ ॥ ೧೯೬ ॥

1. 'ಸರ್ಪೋಽಸ್ತಿ' ಪಾ॥

೧೯೬. ಹಗ್ಗದಲ್ಲಿ ಹಾವು ಭ್ರಾಂತಿಯ ಕಾಲದಲ್ಲಿಯೇ (ತೋರುತ್ತದೆ) ಭ್ರಾಂತಿಯು ನಾಶವಾದರೆ ಹಾವೂ (ಇರುವ)ದಿಲ್ಲ. ಅಲ್ಲವೆ? ಅದರಂತೆ ಅವಧಾನವಿಲ್ಲದೆ ತಪ್ಪುತಿಳಿವಳಿಕೆಯಿಂದ ಆಗಿರುವ ಈ (ಜೀವತ್ವಕ್ಕೆ) ಎಲ್ಲಿಯವರೆಗೆ ಭ್ರಾಂತಿಯಿರುವದೋ ಅಲ್ಲಿಯವರೆಗೇ ಇರವು.

ಅನಾದಿತ್ವಮವಿದ್ಯಾಯಾಃ ಕಾರ್ಯಸ್ಯಾಪಿ ತಥೇಷ್ಯತೇ
ಉತ್ಪನ್ನಾಯಾಂ ತು ವಿದ್ಯಾಯಾಮಾವಿದ್ಯಕಮನಾದ್ಯಪಿ ।
ಪ್ರಬೋಧೇ ಸ್ವಪ್ನವತ್ ಸರ್ವಂ ಸಹಮೂಲಂ ವಿನಶ್ಯತಿ ॥ ೧೯೭ ॥

೧೯೬–೧೯೭. ಅವಿದ್ಯೆಯ ಕಾರ್ಯವು ಅನಾದಿ ಎಂಬುದೂ ಹೀಗೆಯೇ. ವಿದ್ಯೆಯು ಹುಟ್ಟಿದೊಡನೆಯೇ ಅವಿದ್ಯಾಕಾರ್ಯವು ಅನಾದಿಯಾಗಿದ್ದರೂ ಎಚ್ಚರವಾದ ಕೂಡಲೆ ಕನಸು ನಾಶವಾಗುವಂತೆ ಎಲ್ಲವೂ ಮೂಲಸಹಿತವಾಗಿ[1] ನಾಶವಾಗಿಬಿಡುತ್ತದೆ.

ಅನಾದ್ಯಪೀದಂ ನೋ ನಿತ್ಯಂ ಪ್ರಾಗಭಾವ ಇವ ಸ್ಫುಟಮ್ ।
ಅನಾದೇರಪಿ ವಿಧ್ವಂಸಃ ಪ್ರಾಗಭಾವಸ್ಯ ವೀಕ್ಷಿತಃ ॥ ೧೯೮ ॥

೧೯೮. ಈ (ಜೀವತ್ವವು) ಅನಾದಿಯಾದರೂ ಪ್ರಾಗಭಾವದಂತೆ[2] ನಿತ್ಯವಲ್ಲವೆಂಬುದು ಸ್ಫುಟವಾಗಿದೆ. ಪ್ರಾಗಭಾವವು ಅನಾದಿಯಾದರೂ ಅದಕ್ಕೆ ನಾಶವಾಗುವದು ಕಂಡುಬಂದಿರುತ್ತದೆ.[3]

ಯದ್ಬುದ್ಧ್ಯುಪಾಧಿಸಂಬನ್ಧಾತ್ ಪರಿಕಲ್ಪಿತಮಾತ್ಮನಿ ।
ಜೀವತ್ವಂ ನ ತತೋಽನ್ಯತ್ತು ಸ್ವರೂಪೇಣ ವಿಲಕ್ಷಣಮ್ ॥ ೧೯೯ ॥

೧೯೯. ಬುದ್ಧಿಯೆಂಬ ಉಪಾಧಿಯ ಸಂಬಂಧದಿಂದ ಆತ್ಮನಲ್ಲಿ ಯಾವ ಜೀವತ್ವವು ಪರಿಕಲ್ಪಿತವಾಗಿರುವದೋ ಅದು ಆ (ಉಪಾಧಿಗಿಂತ) ಬೇರೆಯ ವಿಲಕ್ಷಣಸ್ವರೂಪದ್ದಾಗಿರುವದಿಲ್ಲ.[4]

---

1. ಅವಿದ್ಯೆಯೊಡನೆ.

2. ಗ್ರಂಥಕಾರರ ಮತದಲ್ಲಿ ಅವಿದ್ಯೆಯು ಭಾವರೂಪವಾದ್ದರಿಂದ ಈ ದೃಷ್ಟಾಂತವು ಅಷ್ಟು ಹೊಂದುವದಿಲ್ಲ.

3. ಪ್ರಾಗಭಾವವು ಅನಾದಿ, ನಾಶವುಳ್ಳದ್ದು; ಆದರೆ ಪ್ರಧ್ವಂಸಾಭಾವವು ಸಾದಿ, ನಾಶವಿಲ್ಲದ್ದು – ಎಂಬುದು ತಾರ್ಕಿಕರ ಮತ. ಇದರ ಖಂಡನೆಯು ತೈ. ಭಾ. ದ ವಿವರಣಿಕೆಯಲ್ಲಿದೆ.

4. ಅದೂ ಉಪಾಧಿಯಂತೆ ಮಿಥ್ಯೆಯೇ.

ಸಂಬನ್ಧಃ ಸ್ವಾತ್ಮನೋः ಬುದ್ಧ್ಯಾ ಮಿಥ್ಯಾಜ್ಞಾನಪುರಃಸರಃ ।
ವಿನಿವೃತ್ತಿರ್ಭವೇತ್ತಸ್ಯ ಸಮ್ಯಗ್ಜ್ಞಾನೇನ ನಾನ್ಯಥಾ ॥೨೦೦॥

೨೦೦. ಬುದ್ಧಿಗೂ ತನ್ನ ಆತ್ಮನಿಗೂ ಇರುವ ಸಂಬಂಧವು ಮಿಥ್ಯಾಜ್ಞಾನ ಪೂರ್ವಕವಾದದ್ದು. ಸರಿಯಾದ ಜ್ಞಾನವುಂಟಾದರೆ ಅದರ ನಿವೃತ್ತಿಯಾದೀತೇ ಹೊರತು ಬೇರೆಯ ರೀತಿಯಿಂದ ಆಗಲಾರದು.

ಬ್ರಹ್ಮಾತ್ಮೈಕತ್ವವಿಜ್ಞಾನಂ ಸಮ್ಯಗ್ಜ್ಞಾನಂ ಶ್ರುತೇರ್ಮತಮ್ ।
ತದಾತ್ಮಾನಾತ್ಮನೋಃ ಸಮ್ಯಗ್ವಿವೇಕೇನೈವ ಸಿಧ್ಯತಿ ॥
ತತೋ ವಿವೇಕಃ ಕರ್ತವ್ಯಃ ಪ್ರತ್ಯಗಾತ್ಮಸದಾತ್ಮನೋಃ ॥೨೦೧॥

೨೦೧. ಬ್ರಹ್ಮಾತ್ಮೈಕತ್ವಜ್ಞಾನವೇ ಸರಿಯಾದ ಜ್ಞಾನವೆಂದು ಶ್ರುತಿಯು ಮತವಾಗಿರುತ್ತದೆ. ಆ (ಜ್ಞಾನವು) ಆತ್ಮ, ಅನಾತ್ಮ– ಇವೆರಡನ್ನೂ ಚೆನ್ನಾಗಿ ವಿಂಗಡಿಸಿ ತಿಳಿದುಕೊಳ್ಳುವದರಿಂದಲೇ ಉಂಟಾಗುತ್ತದೆ.[1] ಆದ್ದರಿಂದ ಪ್ರತ್ಯಗಾತ್ಮ ಮತ್ತು ಮಿಥ್ಯಾತ್ಮ–ಈ ಎರಡನ್ನೂ ವಿಂಗಡಿಸಿ ತಿಳಿದುಕೊಳ್ಳಬೇಕು.

ಜಲಂ ಪಙ್ಕವದತ್ಯನ್ತಂ[2] ಪಙ್ಕಾಪಾಯೇ ಜಲಂ ಸ್ಫುಟಮ್ ।
ಯಥಾ ಭಾತಿ ತಥಾಽಽತ್ಮಾಪಿ ದೋಷಾಭಾವೇ ಸ್ಫುಟಪ್ರಭಃ ॥೨೦೨॥

೨೦೨. ಬಹಳ ಬಗ್ಗಡವಾಗಿರುವ ನೀರು ಬಗ್ಗಡವು ಹೋದಮೇಲೆ ಹೇಗೆ (ಸ್ವಚ್ಛವಾದ) ನೀರಾಗಿ ಸ್ಫುಟವಾಗಿ ತೋರುವದೋ ಹಾಗೆ ಆತ್ಮನೂ ದೋಷವಿಲ್ಲವಾಗಲು ಸ್ಫುಟವಾಗಿ ತೋರುತ್ತಾನೆ.

ಅಸನ್ನಿವೃತ್ತೌ ತು ಸದಾತ್ಮನಾ ಸ್ಫುಟಂ
ಪ್ರತೀತಿರೇತಸ್ಯ ಭವೇತ್ ಪ್ರತೀಚಃ ।
ತತೋ ನಿರಾಸಃ ಕರಣೀಯ ಏವಾ–
ಸದಾತ್ಮನಃ ಸಾಧ್ವಹಮಾದಿವಸ್ತುನಃ ॥೨೦೩॥

೨೦೩. ಅಸತ್ತಾದದ್ದು ತೊಲಗಲು ಈ ಪ್ರತ್ಯಗಾತ್ಮನಿಗೆ ಸದ್ರೂಪದಿಂದ[3] ಸ್ಫುಟವಾಗಿ ತೋರಿಕೆಯಾಗುವದು. ಆದ್ದರಿಂದ ಅಸದ್ರೂಪವಾದ ಅಹಂಕಾರವೇ ಮುಂತಾದ ವಸ್ತುವನ್ನು ನಿರಾಸಮಾಡಲೇಬೇಕು.

1. ಇದು ಮುಂದಿನ ಖಂಡದಲ್ಲಿ ಸ್ಫುಟವಾಗುತ್ತದೆ.

2. 'ಪಙ್ಕವದಸ್ಪಷ್ಟಂ' ಪಾ॥ ಇಲ್ಲಿ 'ಜಲಂ' ಎಂಬ ಮಾತು ಎರಡು ಸಲ ಏಕೆ ಬಂದಿದೆ ಎಂಬುದು ತಿಳಿಯಲಿಲ್ಲ. ಈ ಶ್ಲೋಕಾರ್ಧದಲ್ಲಿ ಏನೋ ಅಕ್ಷರವ್ಯತ್ಯಾಸವಾಗಿರಬೇಕೆಂದು ತೋರುತ್ತದೆ.

3. 'ಸದಾತ್ಮನಃ' ಎಂಬ ಪಾ॥ ಪಾಠಕ್ಕೆ 'ಸದಾತ್ಮನಾದ ಪ್ರತ್ಯಗಾತ್ಮನಿಗೆ' ಎಂದು ಅನುವಾದ.

ಅತೋ ನಾಯಂ ಪರಾತ್ಮಾ ಸ್ಯಾತ್ ವಿಜ್ಞಾನಮಯಶಬ್ದಭಾಕ್ ॥
ವಿಕಾರಿತ್ವಾಜ್ಜಡತ್ವಾಚ್ಚ ಪರಿಚ್ಛಿನ್ನತ್ವಹೇತುತಃ ।
ದೃಶ್ಯತ್ವಾದ್ ವ್ಯಭಿಚಾರಿತ್ವಾನ್ನಾನಿತ್ಯೋ ನಿತ್ಯ ಇಷ್ಯತೇ ॥೨೦೪॥

೨೦೪. ಆದ್ದರಿಂದ ಈ ವಿಜ್ಞಾನಮಯಶಬ್ದಕ್ಕೆ ವಾಚ್ಯವಾದ (ಕೋಶವೂ) ಪರಾತ್ಮನಾಗಲಾರದು. ಏಕೆಂದರೆ (ಇದು) ವಿಕಾರಗಳುಳ್ಳದ್ದು, ಜಡವು, ಪರಿಚ್ಛಿನ್ನವಾದದ್ದೆಂಬ ಕಾರಣವುಳ್ಳದ್ದು, ದೃಶ್ಯವಾಗಿ, ಬೇರ್ಪಡುವದಾಗಿದೆ.[1] ಅನಿತ್ಯವಾದದ್ದು ನಿತ್ಯವಾದದ್ದೆಂದು ಒಪ್ಪುವದಾಗದಷ್ಟೆ ?

## ಆನಂದಮಯಕೋಶವಿವೇಕ

ಆನನ್ದಪ್ರತಿಬಿಮ್ಬಚುಮ್ಬಿತತನುರ್ವೃತ್ತಿಸ್ತಮೋಜೃಮ್ಭಿತಾ
ಸ್ಯಾದಾನನ್ದಮಯಃ ಪ್ರಿಯಾದಿಗುಣಕಃ ಸ್ವೇಷ್ಟಾರ್ಥಲಾಭೋದಯಃ ।
ಪುಣ್ಯಸ್ಯಾನುಭವೇ ವಿಭಾತಿ ಕೃತಿನಾಮಾನನ್ದರೂಪಃ ಸ್ವಯಂ
ಭೂತ್ವಾ ನನ್ದತಿ ಯತ್ರ ಸಾಧು ತನುಭೃನ್ಮಾತ್ರಃ ಪ್ರಯತ್ನಂ ವಿನಾ ॥

೨೦೫. ಆನಂದದ ಪ್ರತಿಬಿಂಬದಿಂದ ಕೂಡಿದ ಸ್ವರೂಪವುಳ್ಳ ತಮೋಗುಣದಿಂದ ಎದ್ದ ವೃತ್ತಿಯು ಆನಂದಮಯಕೋಶವಾಗುತ್ತದೆ.[2] ಇದು ಪ್ರಿಯವೇ ಮುಂತಾದ ಗುಣಗಳುಳ್ಳದ್ದು, ತನಗೆ ಬೇಕಾದ ಪದಾರ್ಥವು ಸಿಕ್ಕಿದರೆ ಪ್ರಕಟವಾಗುತ್ತದೆ, ಪುಣ್ಯವಂತರಿಗೆ ಪುಣ್ಯದ ಫಲದ ಅನುಭವವಾಗುವಾಗ ತೋರಿಕೊಳ್ಳುತ್ತದೆ. ಅದರಲ್ಲಿ ಪ್ರತಿಯೊಬ್ಬ ಶರೀರಿಯೂ ಯಾವ ಪ್ರಯತ್ನವೂ ಇಲ್ಲದೆ ತಾನೇ ಸಂಪೂರ್ಣ ಆನಂದರೂಪವಾಗಿ ಹೃಷ್ಟನಾಗುತ್ತಾನೆ.

ಆನನ್ದಮಯಕೋಶಸ್ಯ ಸುಷುಪ್ತೌ ಸ್ಫೂರ್ತಿರುತ್ಕಟಾ ।
ಸ್ವಪ್ನಜಾಗರಯೋರೀಷದಿಷ್ಟಸಂದರ್ಶನಾದಿನಾ ॥೨೦೬॥

೨೦೬. ಆನಂದಮಯಕೋಶವು ಸುಷುಪ್ತಿಯಲ್ಲಿ ಉತ್ಕಟವಾಗಿ ತೋರಿಕೊಳ್ಳುತ್ತದೆ.[3] ಸ್ವಪ್ನಜಾಗರಿತಗಳಲ್ಲಿ ಇಷ್ಟವಸ್ತುಗಳನ್ನು ಕಂಡದ್ದೇ ಮುಂತಾದ

---

1. ಶಂ. ಗೀ. ೧೩–೨ ನೋಡಿ.

2. ಆನಂದಮಯಕೋಶವನ್ನು ಭಾಷ್ಯಕಾರರು ಹೀಗೆ ವರ್ಣಿಸಿರುವದಿಲ್ಲ. ಶಂ. ತೈ. ೨–೫ರ ವ್ಯಾಖ್ಯಾನವನ್ನೂ ಶಂ. ಛಾಂ. ೩ನೆಯ ಮಂತ್ರವ್ಯಾಖ್ಯಾನವನ್ನೂ ಇದು ಹೋಲುತ್ತದೆ.

3. ಸುಷುಪ್ತಿಯಲ್ಲಿ ಪ್ರಿಯಮೋದಾದಿಗಳು ಇರುವದಿಲ್ಲವಾದ್ದರಿಂದ ಇಲ್ಲಿ ಆನಂದಮಯವು ಉತ್ಕಟವಾಗಿರುವದೆಂಬುದು ಯುಕ್ತಿಗೆ ಹೊಂದುವದಿಲ್ಲ. ವಿಕ್ಷೇಪವಿಲ್ಲದೆ ಬರಿಯ ಆವರಣವೇ ಇರುವದರಿಂದ ಅಲ್ಲಿ ಆನಂದವು ಪ್ರಚುರವಾಗಿರಬೇಕೆಂದು ಗ್ರಂಥಕರ್ತರ ಅಭಿಪ್ರಾಯವಾಗಿರಬೇಕು. ಶಂ. ವಸಾಂ. ೩ನ್ನು ನೋಡಿ.

ಕಾರಣದಿಂದ ಒಂದಿಷ್ಟು ತೋರುತ್ತದೆ.[1]

ನೈವಾಯಮಾನನ್ದಮಯಃ ಪರಾತ್ಮಾ
ಸೋಪಾಧಿಕತ್ವಾತ್ ಪ್ರಕೃತೇರ್ವಿಕಾರಾತ್ ।
ಕಾರ್ಯತ್ವಹೇತೋಃ ಸುಕೃತಕ್ರಿಯಾಯಾ
ವಿಕಾರಸಙ್ಘಾತಸಮಾಹಿತತ್ವಾತ್ || ೨೦೭ ||

೨೦೭. ಈ ಆನಂದಮಯಕೋಶವೂ ಪರಮಾತ್ಮನಲ್ಲವೇ ಅಲ್ಲ. ಏಕೆಂದರೆ (ಇದು) ಉಪಾಧಿಯಿಂದ ಕೂಡಿದೆ, ಪ್ರಕೃತಿಯ ವಿಕಾರವಾಗಿರುತ್ತದೆ[2]; ಪುಣ್ಯಕರ್ಮದ ಕಾರ್ಯವಾಗಿರುತ್ತದೆ; ವಿಕಾರಗಳ ಗುಂಪಾದ (ದೇಹವನ್ನು) ಆಶ್ರಯಿಸಿಕೊಂಡಿರುತ್ತದೆ.[3]

## ಆತ್ಮನು ಪಂಚಕೋಶಗಳಿಗೂ ಸಾಕ್ಷಿಯು

ಪಞ್ಚಾನಾಮಪಿ ಕೋಶಾನಾಂ ನಿಷೇಧೇ ಯುಕ್ತಿತಃ ಶ್ರುತೇಃ ।
ತನ್ನಿಷೇಧಾವಧಿಃ ಸಾಕ್ಷೀ ಬೋಧರೂಪೋಽವಶಿಷ್ಯತೇ || ೨೦೮ ||

೨೦೮. ಶ್ರುತಿಯಿಂದಲೂ ಯುಕ್ತಿಯಿಂದಲೂ[4] ಈ ಐದು ಕೋಶಗಳನ್ನೂ ಅಲ್ಲಗಳೆದರೆ ಅವುಗಳ ನಿಷೇಧಕ್ಕೆ ಅವಧಿಯಾಗಿ ಸಾಕ್ಷಿಯಾಗಿರುವ ಜ್ಞಾನರೂಪನಾದ (ಆತ್ಮನು) ಉಳಿದುಕೊಳ್ಳುತ್ತಾನೆ.

ಯೋಽಯಮಾತ್ಮಾ ಸ್ವಯಂಜ್ಯೋತಿಃ ಪಞ್ಚಕೋಶವಿಲಕ್ಷಣಃ ।
ಅವಸ್ಥಾತ್ರಯಸಾಕ್ಷೀ ಸನ್ನಿರ್ವಿಕಾರೋ ನಿರಞ್ಜನಃ || ೨೦೯ ||
ಸದಾನನ್ದಃ ಸ ವಿಜ್ಞೇಯಃ ಸ್ವಾತ್ಮತ್ವೇನ ವಿಪಶ್ಚಿತಾ

---

1. ತೈ. ಭಾ. ೨–೫(ಭಾ. ಭಾ. ೧೬೫)ರಲ್ಲಿರುವ ಆನಂದಮಯನ ವರ್ಣನೆಯನ್ನು ಇದಕ್ಕೆ ಹೋಲಿಸಿರಿ.

2. ಸುಷುಪ್ತಿಯಲ್ಲಿ ಪ್ರಕೃತಿಯ ವಿಕಾರವು ಹೇಗೆ ತೋರಿಕೊಳ್ಳುವದೆಂಬುದು ತಿಳಿಯುವದಿಲ್ಲ.

3. 'ವಿಕಾರಸಂಘಾತಸಮಾಹಿತತ್ವಾತ್' ಎಂಬ ಮೂಲಕ್ಕೆ ಅನುವಾದವಿದು. ಈ ಪದಕ್ಕೆ ಸರಿಯಾದ ಅರ್ಥವೇನೆಂಬುದು ನಮಗೆ ಇನ್ನೂ ಚೆನ್ನಾಗಿ ಮನದಟ್ಟಾಗಿಲ್ಲ.

4. ಮಾಂಡೂಕ್ಯ, ಬೃಹದಾರಣ್ಯಕ, ಮುಂಡಕ – ಮುಂತಾದ ಶ್ರುತಿಗಳಲ್ಲಿ ಪಂಚಕೋಶಗಳ ಧರ್ಮವು ಆತ್ಮನಿಗೆ ಇಲ್ಲವೆಂದು ನಿಷೇಧಿಸಿದೆ. ನಿಷೇಧಕಯುಕ್ತಿಗಳು ಕೆಲವನ್ನು ಈ ಹಿಂದೆ ಗ್ರಂಥಕಾರರೂ ಕೊಟ್ಟಿರುತ್ತಾರೆ. 'ಯುಕ್ತಿತಃ ಕೃತೇ' ಎಂಬ ಪಾ|| ಪಾಠಕ್ಕೆ 'ಯುಕ್ತಿಯಿಂದ ನಿಷೇಧ ಮಾಡಲಾಗಿ' ಎಂದರ್ಥ. ಆ ಪಾಠಕ್ಕಿಂತ ಈಗ ನಾವು ಇಟ್ಟುಕೊಂಡಿರುವ ಪಾಠವೇ ಮೇಲೆಂದು ತೋರುತ್ತದೆ.

೨೦೯. ಹೀಗೆ ಸ್ವಪ್ರಕಾಶನಾಗಿ, ಪಂಚಕೋಶವಿಲಕ್ಷಣನಾಗಿ, ಅವಸ್ಥಾತ್ರಯಸಾಕ್ಷಿಯಾಗಿ[1] ವಿಕಾರರಹಿತನಾಗಿ, ನಿರ್ಮಲನಾಗಿ, ನಿತ್ಯಾನಂದಸ್ವರೂಪನಾಗಿರುವವನನ್ನು, ಆ ಈ ಆತ್ಮನೇ ತನ್ನ ಆತ್ಮನೆಂದು ಜಾಣನಾದವನು ತಿಳಿದುಕೊಳ್ಳಬೇಕು.

## ಶಿಷ್ಯನ ಶಂಕೆ

ಶಿಷ್ಯ ಉವಾಚ —

ಮಿಥ್ಯಾತ್ವೇನ ನಿಷಿದ್ಧೇಷು ಕೋಶೇಷ್ವೇತೇಷು ಪಞ್ಚಸು ।
ಸರ್ವಾಭಾವಂ ವಿನಾ ಕಿಞ್ಚಿನ್ನ ಪಶ್ಯಾಮ್ಯತ್ರ ಹೇ ಗುರೋ ॥ ೨೧೦ ॥
ವಿಜ್ಞೇಯಂ ಕಿಮು ವಸ್ತ್ವಸ್ತಿ ಸ್ವಾತ್ಮನಾತ್ರ ವಿಪಶ್ಚಿತಾ

೨೧೦. ಶಿಷ್ಯನು ಕೇಳಿದನೇನೆಂದರೆ: ಗುರುವೆ, ಈ ಐದು ಕೋಶಗಳನ್ನು ಮಿಥ್ಯೆಯೆಂದು[2] ಅಲ್ಲಗಳೆದ ಬಳಿಕ ಯಾವದೂ ಇಲ್ಲವೆಂಬ ಅತ್ಯಂತಾಭಾವವಲ್ಲದೆ ಇಲ್ಲಿ ನನಗೆ ಮತ್ತೆ ಯಾವದೂ ಕಾಣಿಸುವದಿಲ್ಲವಲ್ಲ! ಇಲ್ಲಿ ಜಾಣನಾದವನು ತನ್ನ ಆತ್ಮನೆಂದು ತಿಳಿದುಕೊಳ್ಳತಕ್ಕ ಯಾವ ವಸ್ತು ತಾನೆ ಇರುವದು?

## ಗುರುವಿನ ಉತ್ತರ

ಶ್ರೀಗುರುರುವಾಚ —

ಸತ್ಯಮುಕ್ತಂ ತ್ವಯಾ ವಿದ್ವನ್ನಿಪುಣೋಽಸಿ ವಿಚಾರಣೇ ।
ಅಹಮಾದಿವಿಕಾರಾಸ್ತೇ ತದಭಾವೋಽಯಮಪ್ಯನು[3] ॥ ೨೧೧ ॥
ಸರ್ವೇ ಯೇನಾನುಭೂಯನ್ತೇ ಯಃ ಸ್ವಯಂ ನಾನುಭೂಯತೇ ।
ತಮಾತ್ಮಾನಂ ವೇದಿತಾರಂ ವಿದ್ಧಿ ಬುದ್ಧ್ಯಾ ಸುಸೂಕ್ಷ್ಮಯಾ ॥ ೨೧೨ ॥

೨೧೧-೨೧೨. ಅಯ್ಯ ವಿವೇಕಿಯೆ, ನೀನು ಹೇಳಿದ್ದು ನಿಜವೇ; ನೀನು ವಿಚಾರಮಾಡುವದರಲ್ಲಿ ನಿಪುಣನಾಗಿರುವೆ. ಅಹಂಕಾರವೇ ಮುಂತಾದ ಆ ವಿಕಾರಗಳೂ ಮತ್ತು ಅವುಗಳ ಈ ಅಭಾವವೂ ಎಲ್ಲವೂ ಯಾವನಿಂದ ಅನುಭವಿಸಲ್ಪಡುತ್ತಿವೆಯೋ ಯಾವನು ತಾನು ಮಾತ್ರ (ಯಾವದರಿಂದಲೂ) ಅನುಭವಿಸಲ್ಪಡುವದಿಲ್ಲವೋ, ಆ ಎಲ್ಲವನ್ನೂ ಅರಿಯುವವನೇ ಆತ್ಮನೆಂದು ಅತಿಸೂಕ್ಷ್ಮವಾದ ಬುದ್ಧಿಯಿಂದ ಅರಿತುಕೊ.

1. ಪಂಚಕೋಶವಿಲಕ್ಷಣಃ, ಅವಸ್ಥಾತ್ರಯಸಾಕ್ಷೀ – ಎಂಬ ಮಾತುಗಳು ಗ್ರಂಥಕಾರರಿಗೆ ಮೆಚ್ಚಾಗಿವೆ.

2. ಪಂಚಕೋಶಗಳು ಮಿಥ್ಯೆಯೆಂದು ಈವರೆಗೆ ತೋರಿಸಿಲ್ಲ; ಅವು ಆತ್ಮನಲ್ಲವೆಂದು ಮಾತ್ರ ತೋರಿಸಿದೆ.

3. 'ಅಯಮಪ್ಯಥ' ಪಾ॥

ತತ್ಸಾಕ್ಷಿಕಂ ಭವೇತ್ತತ್ತದ್ಯದ್ಯದ್ಯೇನಾನುಭೂಯತೇ ।
ಕಸ್ಯಾಪ್ಯನನುಭೂತಾರ್ಥೇ ಸಾಕ್ಷಿತ್ವಂ ನೋಪಯುಜ್ಯತೇ[1] ॥೨೧೪॥
ಅಸೌ ಸ್ವಸಾಕ್ಷಿಕೋ ಭಾವೋ ಯತಃ ಸ್ವೇನಾನುಭೂಯತೇ ।
ಅತಃ ಪರಂ ಸ್ವಯಂ ಸಾಕ್ಷಾತ್ ಪ್ರತ್ಯಗಾತ್ಮಾ ನ ಚೇತರಃ ॥೨೧೫॥

೨೧೪-೨೧೫. ಯಾವಯಾವದು ಏತೇತರಿಂದ ಅನುಭೂತವಾಗುವದೋ ಅದದು ಅದರ ಸಾಕ್ಷಿಯುಳ್ಳದ್ದೆಂದಾಗುವದು ; ಅನುಭೂತವಾಗದಿರುವ ಅರ್ಥದಲ್ಲಿ ಯಾವನಾದರೂ ಸಾಕ್ಷಿಯೆಂಬುದು ಯುಕ್ತವಾಗುವದಿಲ್ಲ.[2] ಈ ವಸ್ತು ಸ್ವಸಾಕ್ಷಿಕನಾಗಿರುತ್ತಾನೆ, ಏಕೆಂದರೆ ತನ್ನಿಂದಲೇ ಅನುಭವಿಸಲ್ಪಡುತ್ತಿದಾನೆ.[3] ಆದ್ದರಿಂದ (ಇದು) ಎಲ್ಲಕ್ಕೂ ಹೆಚ್ಚಿನ ತಾನೇ ನೇರಾದ ಪ್ರತ್ಯಗಾತ್ಮನೇ ಹೊರತು ಮತ್ತೊಬ್ಬನಲ್ಲ[4].

ಜಾಗ್ರತ್ಸ್ವಪ್ನಸುಷುಪ್ತಿಷು ಸ್ಫುಟತರಂ ಯೋಽಸೌ ಸಮುಜ್ಜೃಮ್ಭತೇ[5]
ಪ್ರತ್ಯಗ್ರೂಪತಯಾ ಸದಾಹಮಹಮಿತ್ಯನ್ತಃ ಸ್ಫುರನ್ನೇಕಧಾ[6]

1. 'ನೋಪಪದ್ಯತೇ' ಎಂದಿದ್ದರೆ ಚೆನ್ನಾಗಿರುತ್ತಿತ್ತೆಂದು ತೋರುತ್ತದೆ. ಟಿಪ್ಪಣಿಯನ್ನು ನೋಡಿ.

2. ಸಾಕ್ಷಿಯ ಲಕ್ಷಣವು ಇಷ್ಟೇ ಆದರೆ ಅತಿವ್ಯಾಪ್ತಿಯಾಗುತ್ತದೆ ; ಎಂದರೆ ಇಂದ್ರಿಯಾದಿಗಳನ್ನು ತಮ್ಮ ತಮ್ಮ ವಿಷಯಕ್ಕೆ ಸಾಕ್ಷಿಯೆಂದು ಕರೆಯಬೇಕಾಗುತ್ತದೆ, ಏಕೆಂದರೆ ಅವುಗಳಿಂದಲೇ ವಿಷಯಗಳು ಅನುಭೂತವಾಗುತ್ತವೆ. ಒಂದು ವಸ್ತುವನ್ನು ನೋಡದೆ ತಾನು ಅದನ್ನು ಕಂಡಿದೇನೆಂದು ಹೇಳುವದಕ್ಕೆ ಆಗುವದಿಲ್ಲ-ಎಂಬುದಕ್ಕೆ ಇದು ಸಾಕಾಗಿದೆ. ಪ್ರತಿಯೊಂದು ವಸ್ತುವಿನ ಸಿದ್ಧಿಗೂ ಅದನ್ನು ಅನುಭವಿಸುವವನೊಬ್ಬನು ಬೇಕು ಎಂಬುದರಲ್ಲಿ ವಾಕ್ಯಕ್ಕೆ ತಾತ್ಪರ್ಯ. ಅಥವಾ 'ಮಿಕ್ಕದ್ದೆಲ್ಲವೂ ತನಗಿಂತ ಬೇರೆಯಾದ ಮತ್ತೊಂದರಿಂದ ಅನುಭವಿಸಲ್ಪಡುತ್ತದೆಯಾದ್ದರಿಂದ ತತ್ಸಾಕ್ಷಿಕವೆನ್ನಬಹುದು ; ಆದರೆ ಈ ಆತ್ಮನು ಮತ್ತೆ ಯಾರಿಂದಲೂ ಅನುಭವಿಸಲ್ಪಡುವದಿಲ್ಲವಾದ್ದರಿಂದ ಇವನಿಗೆ ಮತ್ತೊಬ್ಬನ ಸಾಕ್ಷಿತ್ವವು ಉಪಯೋಗಕ್ಕೆ ಬರುವದಿಲ್ಲ'- ಎಂದಾದರೂ ಈ ವಾಕ್ಯಕ್ಕೆ ತಾತ್ಪರ್ಯವನ್ನು ಕಲ್ಪಿಸಬಹುದು.

3. ಆತ್ಮನು ತನ್ನಿಂದ ತಾನೇ ಅನುಭವಿಸಲ್ಪಡುತ್ತಾನೆಂಬುದನ್ನು ಅಕ್ಷರಶಃ ತೆಗೆದುಕೊಂಡರೆ ಬೌದ್ಧರು ಹೇಳುವ ವಿಜ್ಞಾನವಾದವೇ ಆಗುತ್ತದೆ ; ಮತ್ತೊಂದರ ಬೆಳಕಿನ ಸಹಾಯವನ್ನು ಬಯಸದೆ ತಾನೇ ಅನುಭವರೂಪನಾಗಿ ಬೆಳಗುತ್ತಾನೆ ಎಂದಿಷ್ಟೇ ಇಲ್ಲಿ ಅರ್ಥವನ್ನು ಮಾಡಿಕೊಳ್ಳಬೇಕು.

4. ಎಲ್ಲವನ್ನೂ ಅನುಭವಿಸುವವನಾಗಿ ತಾನು ಮತ್ತೊಂದರಿಂದ ಅನುಭೂತನಾಗದೆ ಇರುವದರಿಂದ ಇವನೇ ಎಲ್ಲಕ್ಕೂ ಒಳಗಿರುವ ಆತ್ಮನು ಎಂಬುದು ವಾಕ್ಯದ ಅಭಿಪ್ರಾಯವೆಂದು ತೋರುತ್ತದೆ.

5. 'ಜಾಗ್ರತ್ಸ್ವಪ್ನಸುಷುಪ್ತಿಷು ಸ್ಫುಟತರಾ ಯಾ ಸಂವಿದುಜ್ಜೃಮ್ಭತೇ' ಎಂಬ ಮನೀಷಾಪಂಚಕದ ಪಾಠವನ್ನೇ ಇದಕ್ಕೆ ಹೋಲಿಸಿರಿ.

6. 'ನ್ನೈಕಧಾ' ಎಂಬುದಕ್ಕಿಂತ ಈ ಪಾಠವೇ ಮೇಲು.

ನಾನಾಕಾರವಿಕಾರಭಾಗಿನ ಇಮಾನ್ ಪಶ್ಯನ್ನಹಂಧೀಮುಖಾನ್ ।
ನಿತ್ಯಾನಂದಚಿದಾತ್ಮನಾ ಸ್ಫುರತಿ ತಂ ವಿದ್ಧಿ ಸ್ವಮೇತಂ ಹೃದಿ ॥೨೧೩॥

೨೧೩. ಯಾವ ಈತನು ಎಚ್ಚರ, ಕನಸು, ಗಾಢನಿದ್ರೆ- ಇವುಗಳಲ್ಲಿ ಪ್ರತ್ಯಗಾತ್ಮರೂಪದಿಂದ ಯಾವಾಗಲೂ 'ನಾನು', 'ನಾನು' ಎಂದು ಒಂದೇ ರೂಪದಿಂದ ಒಳಗೆ ಹೊಳೆಯುತ್ತಾ[1] ಎದ್ದುಕಾಣಿಸಿಕೊಳ್ಳುತ್ತಿರುವನೋ ಬಗೆ ಬಗೆಯ ಆಕಾರಗಳನ್ನೂ ವಿಕಾರಗಳನ್ನೂ ತಳೆಯುತ್ತಿರುವ ಈ ಅಹಂಕಾರ, ಬುದ್ಧಿ- ಮುಂತಾದವುಗಳನ್ನು ಕಾಣುತ್ತಿದ್ದರೂ ನಿತ್ಯಾನಂದಚಿದ್ರೂಪದಿಂದ ತೋರಿಕೊಳ್ಳುತ್ತಿರುವನೋ, ಆ ಇವನನ್ನು ಆತ್ಮನೆಂದು ಹೃದಯದಲ್ಲಿಯೇ ನೋಡಿ ತಿಳಿದುಕೊ.

ಘಟೋದಕೇ ಬಿಮ್ಬಿತಮರ್ಕಬಿಮ್ಬ-
ಮಾಲೋಕ್ಯ ಮೂಢೋ ರವಿಮೇವ ಮನ್ಯತೇ ।
ತಥಾ ಚಿದಾಭಾಸಮುಪಾಧಿಸಂಸ್ಥಂ
ಭ್ರಾನ್ತ್ಯಾಽಹಮಿತ್ಯೇವ ಜಡೋಽಭಿಮನ್ಯತೇ ॥೨೧೪॥

ಘಟಂ ಜಲಂ ತದ್ಗತಮರ್ಕಬಿಮ್ಬಂ
ವಿಹಾಯ ಸರ್ವಂ ವಿನಿರೀಕ್ಷ್ಯತೇಽರ್ಕಃ ।
ತಟಸ್ಥ ಏತತ್ತ್ರಿತಯಾವಭಾಸಕಃ[2]
ಸ್ವಯಂಪ್ರಕಾಶೋ ವಿದುಷಾ ಯಥಾ ತಥಾ ॥೨೧೫॥

ದೇಹಂ ಧಿಯಂ ಚಿತ್ಪ್ರತಿಬಿಮ್ಬಮೇವಂ
ವಿಸೃಜ್ಯ ಬುದ್ಧೌ ನಿಹಿತಂ ಗುಹಾಯಾಮ್ ।
ದ್ರಷ್ಟಾರಮಾತ್ಮಾನಮಖಣ್ಡಬೋಧಂ
ಸರ್ವಪ್ರಕಾಶಂ ಸದಸದ್ವಿಲಕ್ಷಣಮ್ ॥೨೧೬॥

ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮ-
ಮನ್ತರ್ಬಹಿಃಶೂನ್ಯಮನನ್ಯಮಾತ್ಮನಃ ।
ವಿಜ್ಞಾಯ ಸಮ್ಯಙ್ನಿಜರೂಪಮೇತತ್
ಪುಮಾನ್ ವಿಪಾಪ್ಮಾ ವಿರಜೋ ವಿಮೃತ್ಯುಃ ॥೨೧೭॥

1. ೧೨೪ನೆಯ ಶ್ಲೋಕದ ಅರ್ಥವನ್ನೂ, ಅದರ ನಾಲ್ಕನೆಯ ಟಿಪ್ಪಣಿಯನ್ನೂ ನೋಡಿ. ಅಹಂಕಾರವೇ ಮುಂತಾದದ್ದಕ್ಕೆ ಸಾಕ್ಷಿಯಾಗಿರುವದೇ ಅಹಂಪದಾರ್ಥವೆಂಬುದು ಗ್ರಂಥಕಾರರ ಮತ. ಮುಂದೆ ೨೯೩ನೆಯ ಶ್ಲೋಕವನ್ನು ನೋಡಿ.

2. ತಟಸ್ಥಿತಸ್ತತ್ ಪಾ॥

ವಿಶೋಕ ಆನನ್ದಘನೋ ವಿಪಶ್ಚಿತ್
ಸ್ವಯಂ ಕುತಶ್ಚಿನ್ನ ಬಿಭೇತಿ ಕಶ್ಚಿತ್[1] ।
ನಾನ್ಯೋಽಸ್ತಿ ಪನ್ಥಾ ಭವಬನ್ಧಮುಕ್ತೇ-
ರ್ವಿನಾ ಸ್ವತತ್ತ್ವಾವಗಮಂ ಮುಮುಕ್ಷೋಃ ॥ ೨೨೦ ॥

೨೧೬–೨೨೦. ಗಡಿಗೆಯ ನೀರಿನಲ್ಲಿ ಪ್ರತಿಬಿಂಬಿಸಿರುವ ಸೂರ್ಯಬಿಂಬವನ್ನು ಕಂಡು ಮೂಢನಾದವನು (ಅದನ್ನು) ಸೂರ್ಯನೆಂದೇ ಭಾವಿಸುತ್ತಾನೆ. ಇದರಂತೆಯೇ ಉಪಾಧಿಯಲ್ಲಿರುವ ಚಿದಾಭಾಸವನ್ನು ಅಜ್ಞಾನಿಯಾದವನು ಭ್ರಾಂತಿಯಿಂದ ನಾನೆಂದೇ ಅಭಿಮಾನಪಡುತ್ತಾನೆ. ಗಡಿಗೆ, ನೀರು, ಅದರಲ್ಲಿರುವ ಸೂರ್ಯಪ್ರತಿಬಿಂಬ – ಇದೆಲ್ಲವನ್ನೂ ಬಿಟ್ಟು ಸ್ವಯಂಪ್ರಕಾಶನಾದ ಸೂರ್ಯನು ಬೇರೆಯಿದ್ದುಕೊಂಡು ಇವು ಮೂರನ್ನೂ ಬೆಳಗುತ್ತಿರುವನೆಂಬುದನ್ನು ವಿವೇಕಿಯಾದವನು ಹೇಗೆ ಕಂಡಿರುತ್ತಾನೋ[2] ಹಾಗೆಯೇ ದೇಹವನ್ನೂ ಬುದ್ಧಿಯನ್ನೂ (ಈ) ಚಿದಾಭಾಸವನ್ನೂ ಬಿಟ್ಟು ಬುದ್ಧಿಯಲ್ಲಿ ಗುಹೆಯಲ್ಲಿ[3] ಅಡಗಿರುವ ಸಾಕ್ಷಿರೂಪನೂ ಅಖಂಡಬೋಧರೂಪನೂ ಎಲ್ಲವನ್ನೂ ಬೆಳಗುವವನೂ ಸದಸತ್ತುಗಳೆರಡಕ್ಕೂ ವಿಲಕ್ಷಣನೂ[4] ನಿತ್ಯನೂ ವಿಭುವೂ ಸರ್ವಗತನೂ ಅತಿಸೂಕ್ಷ್ಮನೂ[5] ಒಳಗುಹೊರಗೆಂಬುದಿಲ್ಲದವನೂ[6] ತನಗಿಂತ ಬೇರೆಯಲ್ಲದವನೂ (ಆಗಿರುವ ಆತ್ಮನನ್ನು), ಈ ತನ್ನ ಆತ್ಮನನ್ನು ಅರಿತುಕೊಂಡ ಮನುಷ್ಯನು ಧರ್ಮಾಧರ್ಮಗಳೆಂಬ ಪಾಪವಿಲ್ಲದವನೂ ಧೂಳಿಲ್ಲದವನೂ ಮೃತ್ಯುರಹಿತನೂ[7] ಶೋಕರಹಿತನೂ ಆನಂದಘನನೂ ಆದ ಜ್ಞಾನಿಯಾಗಿ ತಾನು ಏತಕ್ಕೂ ಒಂದಿಷ್ಟೂ ಅಂಜದೆ ಇರುತ್ತಾನೆ. ಮುಮುಕ್ಷುವಾದವನಿಗೆ ಸಂಸಾರಬಂಧದಿಂದ ಮುಕ್ತನಾಗುವದಕ್ಕೆ ಆತ್ಮತತ್ತ್ವವನ್ನು ಅರಿತುಕೊಳ್ಳುವದಲ್ಲದೆ ಮತ್ತೆ ಯಾವ ಹಾದಿಯೂ ಇರುವದಿಲ್ಲ.[8]

---

1. ಇದು 'ಕಿಂಚಿತ್' ಎಂದಿದ್ದರೆ ಸರಳವಾಗಿ ಅನ್ವಯವಾಗುವದು.

2. 'ದಿವಿ ವೀಕ್ಷ್ಯತೇಽರ್ಕ' ಎಂಬ ಪಾಠಕ್ಕೆ 'ಆಕಾಶದಲ್ಲಿ ಹೇಗೆ ಕಾಣುತ್ತಾನೋ' ಎಂದು ಅರ್ಥ.

3. ಹಿಂದೆ ೧೪೫ನೆಯ ಶ್ಲೋಕದಲ್ಲಿ 'ಧೀಗುಹಾಯಾಮವ್ಯಾಕೃತಾಕಾಶೇ' ಎಂದಿರುವದನ್ನೂ ಅದಕ್ಕೆ ಕೊಟ್ಟಿರುವ ಟಿಪ್ಪಣಿಯನ್ನೂ ನೋಡಿ.

4. ಮಹದಾದಿಕಾರ್ಯವು ಸತ್ತು, ಅದಕ್ಕೆ ಕಾರಣವಾಗಿರುವ ಅವ್ಯಕ್ತವು ಅಸತ್ತು; ಅವೆರಡಕ್ಕಿಂತಲೂ ವಿಲಕ್ಷಣನು ಎಂದರ್ಥ. ಶಂ. ಗೀ. ೧೪–೧೨ ನೋಡಿ.

5. ಮುಂ. ೧–೧–೬ರಲ್ಲಿ ಪರಮಾತ್ಮನಿಗೆ ಈ ನಾಲ್ಕು ವಿಶೇಷಣಗಳನ್ನು ಕೊಟ್ಟಿದೆ.

6. "ಅನ್ತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ" (ತೈ. ನಾ. ೩೦) ಎಂಬ ವಾಕ್ಯದ ಸೂಚನೆ.

7. ಕ. ೨–೩–೧೮. 8. ಶ್ವೇ. ೩–೮.

# ೭. ಬ್ರಹ್ಮಾತ್ಮೈಕ್ಯಜ್ಞಾನ

## ಐಕ್ಯಜ್ಞಾನದ ಪ್ರಶಂಸೆ

ಬ್ರಹ್ಮಾಭಿನ್ನತ್ವವಿಜ್ಞಾನಂ ಭವಮೋಕ್ಷಸ್ಯ ಕಾರಣಮ್ ।
ಯೇನಾಽದ್ವಿತೀಯಮಾನನ್ದಂ ಬ್ರಹ್ಮ ಸಂಪದ್ಯತೇ ಬುಧೈಃ ॥ ೨೨೦ ॥
ಬ್ರಹ್ಮಭೂತಸ್ತು ಸಂಸೃತ್ಯೈ ವಿದ್ವಾನ್ನಾವರ್ತತೇ ಪುನಃ ।
ವಿಜ್ಞಾತವ್ಯಮತಃ ಸಮ್ಯಗ್ಬ್ರಹ್ಮಾಭಿನ್ನತ್ವಮಾತ್ಮನಃ ॥ ೨೨೧ ॥
ಸತ್ಯಂ ಜ್ಞಾನಮನನ್ತಂ ಬ್ರಹ್ಮ ವಿಶುದ್ಧಂ ಪರಂ ಸ್ವತಃ ಸಿದ್ಧಮ್ ।
ನಿತ್ಯಾನನ್ದೈಕರಸಂ ಪ್ರತ್ಯಗಭಿನ್ನಂ ನಿರನ್ತರಂ ಜಯತಿ ॥ ೨೨೩ ॥

೨೨೦-೨೨೩. ಬ್ರಹ್ಮಕ್ಕಿಂತ ತಾನು ಬೇರೆಯಲ್ಲವೆಂಬ ಜ್ಞಾನವು ಸಂಸಾರದಿಂದ ಬಿಡುಗಡೆಹೊಂದುವದಕ್ಕೆ ಕಾರಣವಾಗಿರುತ್ತದೆ; ವಿವೇಕಿಗಳಾದವರು[1] ಆ (ಜ್ಞಾನ)ದಿಂದ ತನಗೆರಡನೆಯದಿಲ್ಲದ ಆನಂದಸ್ವರೂಪವಾದ ಬ್ರಹ್ಮವನ್ನು ಪಡೆದುಕೊಳ್ಳುತ್ತಾರೆ. ಬ್ರಹ್ಮಸ್ವರೂಪನಾದ ಜ್ಞಾನಿಯಾದರೋ ಮರಳಿ ಸಂಸಾರಕ್ಕೆ ಬರುವದಿಲ್ಲ.[2] ಆದ್ದರಿಂದ ತಾನು ಬ್ರಹ್ಮಾಭಿನ್ನನೆಂಬುದನ್ನು ಚೆನ್ನಾಗಿ ಅರಿತುಕೊಳ್ಳಬೇಕು. ಬ್ರಹ್ಮವು ಸತ್ಯವಾದದ್ದು, ಜ್ಞಾನರೂಪವಾದದ್ದು, ಅನಂತವಾದದ್ದು[3] ಅತಿಶುದ್ಧವಾದದ್ದು, ಎಲ್ಲಕ್ಕೂ ಹೆಚ್ಚಿನದು, ಸ್ವತಃಸಿದ್ಧವಾದದ್ದು, ನಿತ್ಯಾನಂದವೆಂಬ ಒಂದೇ ರೂಪವಾಗಿರತಕ್ಕದ್ದು,[4] ಪ್ರತ್ಯಗಾತ್ಮನಿಗಿಂತ ಬೇರೆಯಲ್ಲದ್ದು. (ಇಂಥ ಬ್ರಹ್ಮವು) ನಿರಂತರವಾಗಿ ಸರ್ವೋತ್ಕೃಷ್ಟವಾಗಿರುತ್ತದೆ.

## ಜಗತ್ತು ನಿಜವಾಗಿ ಬ್ರಹ್ಮಸ್ವರೂಪವೇ

ಸದಿದಂ ಪರಮಾದ್ವೈತಂ ಸ್ವಸ್ಮಾದನ್ಯಸ್ಯ ವಸ್ತುನೋಽಭಾವಾತ್ ।
ನ ಹ್ಯನ್ಯದಸ್ತಿ ಕಿಂಚಿತ್ ಸಮ್ಯಕ್ ಪರಮಾರ್ಥಬೋಧೇ ಹಿ[5] ॥ ೨೨೪ ॥

---

1. 'ಬುಧಃ' ಎಂಬ ಪಾ|| ಪಾಠಕ್ಕೆ ವಿವೇಕಿಯು ಎಂದು ಅನುವಾದ.

2. ಛಾಂ. ೮-೧೫-೧ರ ಸೂಚನೆ. ಆ ಶ್ರುತಿಯು ಸಗುಣೋಪಾಸಕರಿಗೆ ಅಪುನರಾವೃತ್ತಿಯನ್ನು ಹೇಳುತ್ತದೆಯಾದರೂ ಅವರು ಮತ್ತೆ ಸಂಸಾರಕ್ಕೆ ಬರುವದಿಲ್ಲವೆಂಬುದೂ ಜ್ಞಾನಬಲದಿಂದಲೇ. ಸೂ. ಭಾ. ೪-೪-೨೨ನ್ನು ನೋಡಿ.

3. ತೈ. ೨-೧.

4. ವೃಕ್ಷಸಮುದ್ರಾದಿಗಳಂತೆ ಸ್ವಗತವೈಚಿತ್ರ್ಯವಿಲ್ಲದ್ದು, ನಿತ್ಯಾನಂದವಲ್ಲದೆ ಮತ್ತೇತರ ಬೆರಕೆಯೂ ಇಲ್ಲದ್ದು ಎಂದರ್ಥ.

5. 'ಪರಮಾರ್ಥತತ್ತ್ವಬೋಧದಶಾಯಾಮ್' ಎಂಬುದಕ್ಕಿಂತ ಈ ಪಾಠವೇ ಮೇಲೆಂದು ತೋರುತ್ತದೆ.

೨೨೪. ಈ ಪ್ರಪಂಚವು ಪರಮಾದ್ವೈತವಾದ ಸದ್ಬ್ರಹ್ಮವೇ[1]; ಏಕೆಂದರೆ ತನಗಿಂತ ಬೇರೆಯಾದ ವಸ್ತುವೇ ಇಲ್ಲ. ಪರಮಾರ್ಥವನ್ನು ಸರಿಯಾಗಿ ಅರಿತುಕೊಂಡಾಗ[2] ಮತ್ತೊಂದು ಯಾವದೂ ಇರುವದಿಲ್ಲವಷ್ಟೆ[3] ?

ಯದಿದಂ ಸಕಲಂ ವಿಶ್ವಂ ನಾನಾರೂಪಂ ಪ್ರತೀತಮಜ್ಞಾನಾತ್ ।
ತತ್ಸರ್ವಂ ಬ್ರಹ್ಮೈವ ಪ್ರತ್ಯಸ್ತಾಶೇಷಭಾವನಾದೋಷಮ್ ॥ ೨೨೫॥

೨೨೫. ಅಜ್ಞಾನದಿಂದ ಬಗೆಬಗೆಯ ರೂಪದಿಂದ ಕಾಣುವ ಈ ಸಕಲ ವಿಶ್ವವಿದೆಯಲ್ಲ, ಇದೆಲ್ಲವೂ ಯಾವದೊಂದು ಭಾವನಾದೋಷವೂ ಇಲ್ಲದ[4] ಬ್ರಹ್ಮವೇ.

ಮೃತ್ಕಾರ್ಯಭೂತೋಽಪಿ ಮೃದೋ ನ ಭಿನ್ನಃ
  ಕುಂಭೋಽಸ್ತಿ ಸರ್ವತ್ರ ತು ಮೃತ್ಸ್ವರೂಪಾತ್ ।
ನ ಕುಂಭರೂಪಂ ಪೃಥಗಸ್ತಿ ಕುಂಭಃ
  ಕುತೋ ಮೃಷಾಕಲ್ಪಿತನಾಮಮಾತ್ರಃ ॥೨೨೬॥

ಕೇನಾಪಿ ಮದ್ಭಿನ್ನತಯಾ ಸ್ವರೂಪಂ
  ಘಟಸ್ಯ ಸಂದರ್ಶಯಿತುಂ ನ ಶಕ್ಯತೇ ।
ಅತೋ ಘಟಃ ಕಲ್ಪಿತ ಏವ ಮೋಹಾ-
  ನ್ಮೃದೇವ ಸತ್ಯಂ ಪರಮಾರ್ಥಭೂತಮ್ ॥೨೨೭॥

ಸದ್ಬ್ರಹ್ಮಕಾರ್ಯಂ ಸಕಲಂ ಸದೈವ[5]
  ಸನ್ಮಾತ್ರ[6]ಮೇತನ್ನ ತತೋಽನ್ಯದಸ್ತಿ

---

1 'ಏಕಮೇವಾದ್ವಿತೀಯಂ' ಎಂಬ ಛಾಂ. ೬-೨-೧ರ ಸೂಚನೆಯಿದು. ಅದ್ವಿತೀಯವಾದ ಬ್ರಹ್ಮವೇ ಎಂಬ ಪ್ರತಿಜ್ಞೆಗೆ ತನ್ನ ಆತ್ಮನಿಗಿಂತ ಬೇರೆ ಯಾವದೂ ಇಲ್ಲವೆಂಬುದು ಹೇತು. ನಮ್ಮೆಲ್ಲರ ಆತ್ಮನೇ ಸದ್ಬ್ರಹ್ಮವೆಂದು ಶ್ರುತಿಯಲ್ಲಿ ಹೇಳಿರುವದರಿಂದ ಆತ್ಮನಿಗಿಂತ ಬೇರೆಯಿಲ್ಲವೆಂದು ಗೊತ್ತಾದರೆ ಸದ್ಬ್ರಹ್ಮವೂ ಅದ್ವಿತೀಯವೆಂದು ನಿಶ್ಚಯವಾಗುತ್ತಾಗುವದು.

2 'ತತ್ತ್ವಬೋಧದಶಾಯಾಮ್' ಎಂಬ ಪಾಠಕ್ಕೆ ಪರಮಾರ್ಥತತ್ತ್ವವನ್ನು ತಿಳಿದುಕೊಂಡ ಸ್ಥಿತಿಯಲ್ಲಿ-ಎಂದರ್ಥ.

3. ಯಾವದೊಂದು ತೋರಬೇಕಾದರೂ ಆತ್ಮನ ಚೈತನ್ಯದಿಂದಲೇ ತೋರಬೇಕು; ಆದ್ದರಿಂದ ಯಾವದೊಂದೂ ಚೈತನ್ಯಕ್ಕಿಂತ ವ್ಯತಿರಿಕ್ತವಾಗಿ ಅದಕ್ಕೆ ಎರಡನೆಯ ವಸ್ತುವಾಗುವ ಸಂಭವವಿಲ್ಲ.

4. ಪ್ರಪಂಚದಲ್ಲಿ ಕಾಣುವ ದೋಷವು ನೋಡುವವನ ಭಾವನೆಯಿಂದ ಮಾತ್ರವೇ ಕಾಣುತ್ತಿದೆ ಎಂದಭಿಪ್ರಾಯ.

5 'ಸದೇವ' ಪಾ॥

6. 'ತನ್ಮಾತ್ರಮ್' ಎಂಬುದನ್ನು ಹೀಗೆ ತಿದ್ದಿಕೊಂಡಿದೆ.

ಅಸ್ತೀತಿ ಯೋ ವಕ್ತಿ ನ ತಸ್ಯ ಮೋಹೋ
ವಿನಿರ್ಗತೋ ನಿದ್ರಿತವತ್ ಪ್ರಜಲ್ಪಃ ||೨೩೪||

೨೩೨–೨೩೪. ಗಡಿಗೆಯು ಮಣ್ಣಿನ ಕಾರ್ಯವಾಗಿದ್ದರೂ[1] ಮಣ್ಣಿಗಿಂತ ಬೇರೆಯಾಗಿರುವದಿಲ್ಲ.[2] ಎಲ್ಲೆಲ್ಲಿಯೂ ಮಣ್ಣಿನ ಸ್ವರೂಪಕ್ಕಿಂತ ಬೇರೆಯಾಗಿ ಗಡಿಗೆಯ ಸ್ವರೂಪವಿರುವದಿಲ್ಲ.[3] ಹೀಗಿರುವದರಿಂದ ಗಡಿಗೆಯೆಂಬುದೆಲ್ಲಿಂದ ಬಂತು? (ಅದು) ಸುಮ್ಮಸುಮ್ಮನೆ ಕಲ್ಪಿಸಿಕೊಂಡಿರುವ ಬರಿಯ ಹೆಸರೇ.[4] ಮಣ್ಣಿಗಿಂತ ಬೇರೆಯಾದ ಗಡಿಗೆಯ ಸ್ವರೂಪವನ್ನು ತೋರಿಸಿಕೊಡುವದು ಯಾರಿಂದಲೂ ಆಗಲಾರದು; ಆದ್ದರಿಂದ ಗಡಿಗೆಯೆಂಬುದು ಭ್ರಾಂತಿಯಿಂದ ಕಲ್ಪಿತವಾದದ್ದೇ, ಮಣ್ಣೆಂಬುದೇ ಪರಮಾರ್ಥವಾದ ಸತ್ಯವು.[5]

ಇದರಂತೆ ಸದ್ಬ್ರಹ್ಮದ ಕಾರ್ಯವಾದ ಈ ಸಕಲ (ಜಗತ್ತೂ) ಯಾವಾಗಲೂ[6] ಸನ್ಮಾತ್ರವೇ, ಅದಕ್ಕಿಂತ ಬೇರೆ ಯಾವದೊಂದೂ ಇರುವದಿಲ್ಲ; ಯಾವನು ಇದೆಯೆನ್ನುತ್ತಾನೋ ಅವನಿಗೆ ಭ್ರಾಂತಿಯು ಹೋಗಿರುವದಿಲ್ಲ. (ಅವನು) ನಿದ್ರಿಸುತ್ತಿರುವವನಂತೆ (ಏನೋ) ಕನವರಿಸಿಕೊಳ್ಳುತ್ತಿರುತ್ತಾನೆ[7].

ಬ್ರಹ್ಮೈವೇದಂ ವಿಶ್ವಮಿತ್ಯೇವ ವಾಣೀ
ಶ್ರೌತೀ ಬ್ರೂತೇಽಥರ್ವನಿಷ್ಠಾ ವರಿಷ್ಠಾ |

1. ಮಣ್ಣಿನಿಂದ ಹುಟ್ಟಿರುವ ಬೇರೊಂದು ವಸ್ತುವೆಂದು ತೋರುತ್ತಿದ್ದರೂ–ಎಂದರ್ಥ.

2. ಸ್ವತಂತ್ರವಾದ ಬೇರೊಂದು ವಸ್ತುವಲ್ಲ–ಎಂದರ್ಥ.

3. ಇಲ್ಲಿ ಪುನರುಕ್ತಿಯಿರುವಂತೆ ತೋರಿದರೂ ಗಡಿಗೆಯು ತನ್ನ ಕಾರಣಕ್ಕಿಂತ ಬೇರೆ ಇರಲಾರದು; ಏಕೆಂದರೆ ಚೆನ್ನಾಗಿ ನೋಡಿದಾಗ ಅದರಲ್ಲಿ ಎಲ್ಲೆಲ್ಲಿಯೂ ಬರಿಯ ಮಣ್ಣೇ ತೋರಿಕೊಳ್ಳುತ್ತದೆ, ಅದಕ್ಕಿಂತ ಬೇರೆಯಾದ ಮಣ್ಣಿನ ರೂಪವಲ್ಲದ ಗಡಿಗೆಯ ರೂಪವೆಂಬುದು ಯಾವದೂ ಇರುವದಿಲ್ಲ–ಎಂಬರ್ಥವನ್ನು ಕಲ್ಪಿಸಬಹುದು.

4. ಛಾಂ. ೬-೧-೪. 'ವಾಚಾರಂಭಣಂ ವಿಕಾರೋ ನಾಮಧೇಯಮ್' ಎಂಬುದರ ಅನುವಾದವಿದು. ಹೆಸರಿಗೆ ತಕ್ಕಂತೆ ವಸ್ತುವು ಬೇರೆಯಿಲ್ಲ– ಎಂದರ್ಥ. ಶಂ. ಗೀ. . – .

5. "ಮೃತ್ತಿಕೇತ್ಯೇವ ಸತ್ಯಮ್" ಛಾಂ. ೬-೮-೪ರ ಅನುವಾದವಿದು. ಗಡಿಗೆಯು ಪ್ರತೀತಿಕಸತ್ತೆಯುಳ್ಳದ್ದು, ತೋರಿಕೆಯ ಇರವುಳ್ಳದ್ದು; ಅದಕ್ಕೆ ಹೋಲಿಸಿದರೆ ಮಣ್ಣೇ ನಿಜವಾಗಿ ಸತ್ಯವಾದದ್ದು. ಏಕೆಂದರೆ ಅದರ ಸ್ವರೂಪವು ಯಾವಾಗಲೂ ಮಾರ್ಪಡದೆ ಇರುತ್ತದೆ ಎಂದರ್ಥ. ಬ್ರಹ್ಮದಂತೆ ಮಣ್ಣು ಪರಮಾರ್ಥಸತ್ಯವೆಂದೇನೂ ಇಲ್ಲಿ ಅಭಿಪ್ರಾಯವಿಲ್ಲವೆಂಬುದು ಸ್ಪಷ್ಟವೇ.

6. ಜಗದ್ರೂಪದಿಂದ ಕಾಣುತ್ತಿರುವಾಗಲೂ ಅದು ಸದ್ರೂಪವಾದ ಬ್ರಹ್ಮವೇ ಎಂದರ್ಥ. ಛಾಂದೋಗ್ಯದ ಈ ಪ್ರಕರಣದಲ್ಲಿ ಬ್ರಹ್ಮವನ್ನು ಸತ್ (ಇರವು) ಎಂದು ಕರೆದಿದೆ.

7. ಅವನಿಗೆ ಪರಮಾರ್ಥಜ್ಞಾನರೂಪವಾದ ಎಚ್ಚರವಾಗಿಲ್ಲ.

ತಸ್ಮಾದೇತದ್[1] ಬ್ರಹ್ಮಮಾತ್ರಂ ಹಿ ವಿಶ್ವಂ
ನಾಧಿಷ್ಠಾನಾದ್ ಭಿನ್ನತಾऽऽರೋಪಿತಸ್ಯ ॥ ೩೨೯ ॥

೩೨೯. 'ಇದೆಲ್ಲವೂ ಬ್ರಹ್ಮವೇ' (ಮುಂ. ೨-೧-೧) ಎಂದೇ ಅಥರ್ವವೇದದಲ್ಲಿರುವ ಉತ್ತಮವಾದ ಶ್ರುತಿವಚನವು ಸಾರುತ್ತಿರುವದು. ಆದ್ದರಿಂದ ಈ ವಿಶ್ವವು ಬ್ರಹ್ಮಮಾತ್ರವೇ, ಏಕೆಂದರೆ ಆರೋಪಿತವಾದದ್ದು ಅಧಿಷ್ಠಾನಕ್ಕಿಂತ ಬೇರೆಯಾಗಿರಲಾರದು.[2]

ಸತ್ಯಂ ಯದಿ ಸ್ಯಾಜ್ಜಗದೇತದಾತ್ಮನೋऽ-
ನನ್ತತ್ವಹಾನಿರ್ನಿಗಮಾಪ್ರಮಾಣತಾ ।
ಅಸತ್ಯವಾದಿತ್ವಮಪೀಶಿತುಃ ಸ್ಯಾ-
ನ್ನೈತತ್ತ್ರಯಂ ಸಾಧು ಹಿತಂ ಮಹಾತ್ಮನಾಮ್ ॥ ೩೩೦ ॥

೩೩೦. ಈ ಜಗತ್ತು ಸತ್ಯವೆಂದರೆ ಆತ್ಮನು ಅನಂತನೆಂಬುದು ಹೋಗುವದು,[4] ಶಾಸ್ತ್ರವು ಅಪ್ರಮಾಣವಾಗುವದು,[5] ಈಶ್ವರನು ಅಸತ್ಯವನ್ನು ಹೇಳಿದವನಾಗುವನು.[6] ಈ ಮೂರೂ ಮಹಾತ್ಮರಿಗೆ ಸರಿಯೆನಿಸುವದಿಲ್ಲ, ಹಿತವೆನಿಸುವದಿಲ್ಲ.

ಈಶ್ವರೋ ವಸ್ತುತತ್ತ್ವಜ್ಞೋ ನ ಚಾಹಂ ತೇಷ್ವವಸ್ಥಿತಃ ।
ನ ಚ ಮತ್ಸ್ಥಾನಿ ಭೂತಾನೀತ್ಯೇವಮೇವ ವ್ಯಚೀಕ್ಲೃಪತ್[7] ॥೩೩೧॥

1. 'ತಸ್ಮಾತ್ಸರ್ವಮ್' ಪಾ॥

2. ಸದ್ಬ್ರಹ್ಮದ ಕಾರ್ಯವಾಗಿರುವದರಿಂದ ಜಗತ್ತು ಸತ್ತಿನಲ್ಲಿ ಆರೋಪಿತವಾಗಿರುತ್ತದೆ, ಸತ್ತೇ ಇದಕ್ಕೆ ನಿಜವಾದ ಅಧಿಷ್ಠಾನವು ಎಂದು ಅಭಿಪ್ರಾಯ. ಗೀ. ೧೫-೧೮.

3. "ಜಗದೇತದಾತ್ಮನಾ ನ ತತ್ತ್ವಹಾನಿ(ನಿತ್ಯತ್ವಹಾನಿ)ರ್ನಿಗಮಾಪ್ರಮಾಣತಾ।" ಎಂಬ ಪಾಠಾಂತರವು ಸರಿಯಲ್ಲ.

4. ಏಕೆಂದರೆ ಜಗತ್ತೆಂಬ ವಸ್ತುವಿನಿಂದ ಆತ್ಮನಿಗೆ ಪರಿಚ್ಛೇದವಿದೆಯೆಂದಾಗುವದು. ಪಾಠಾಂತರಕ್ಕೆ " ಈ ರೂಪದಿಂದ ಜಗತ್ತು ನಿಜವಾಗಿದ್ದರೆ ತತ್ತ್ವಹಾನಿಯಿಲ್ಲ (ಅಥವಾ ನಿತ್ಯತ್ವಹಾನಿಯಾಗುವದು) " ಎಂದು ಅರ್ಥವಾಗುವದು. ಅದು ಪ್ರಕೃತಕ್ಕೆ ಹೊಂದುವದಿಲ್ಲವೆಂಬುದು ಸ್ಪಷ್ಟ.

5. 'ನೇಹ ನಾನಾಸ್ತಿ ಕಿಞ್ಚನ' ಮುಂತಾದ – ಜಗತ್ತು ಬ್ರಹ್ಮದಲ್ಲಿಲ್ಲವೆನ್ನುವ – ಶ್ರುತಿಗಳು ಅಪ್ರಮಾಣವಾಗುವವು.

6. ಏಕೆಂದರೆ ಜಗತ್ತು ಇಲ್ಲವೇ ಇಲ್ಲವೆಂದು ಭಗವಂತನು ಹೇಳಿರುತ್ತಾನೆ; ಮುಂದಿನ ಶ್ಲೋಕವನ್ನೂ ಅದರ ಟಿಪ್ಪಣಿಯನ್ನೂ ನೋಡಿ.

7. 'ವ್ಯಚೀಕಥತ್' ಪಾ॥

೨೩೧. ವಸ್ತುತತ್ತ್ವವನ್ನು ಬಲ್ಲ ಈಶ್ವರನು "ಆದರೆ ನಾನು ಅವ
ಗಳಲ್ಲಿಲ್ಲ" (ಗೀ. ೯-೪), "ನನ್ನಲ್ಲಿ ಭೂತಗಳು ಇಲ್ಲವೂ ಇಲ್ಲ" (ಗೀ. ೯-೫)
– ಎಂದು ಗೊತ್ತುಪಡಿಸಿ ಹೇಳಿರುತ್ತಾನೆ.[1]

ಯದಿ ಸತ್ಯಂ ಭವೇದ್ವಿಶ್ವಂ ಸುಷುಪ್ತಾವುಪಲಭ್ಯತಾಮ್ ।
ಯನ್ನೋಪಲಭ್ಯತೇ ಕಿಂಚಿದತೋಽಸತ್ ಸ್ವಪ್ನವನ್ಮೃಷಾ ॥ ೨೩೨

೨೩೨. ಜಗತ್ತು ಸತ್ಯವಾದರೆ ಸುಷುಪ್ತಿಯಲ್ಲಿ ತೋರಿಬರಲಿ। ಆ
ಒಂದಿಷ್ಟು ತೋರುವದಿಲ್ಲವಾದ್ದರಿಂದ[2] ಅದು ಅಸತ್ತೇ[3], ಕನಸಿನಂತೆ ಮಿಥ್ಯೆಯೇ.

ಅತಃ ಪೃಥಙ್ನಾಸ್ತಿ ಜಗತ್ ಪರಾತ್ಮನಃ
ಪೃಥಕ್ಪ್ರತೀತಿಸ್ತು ಮೃಷಾ ಗುಣಾದಿವತ್[4] ।
ಆರೋಪಿತಸ್ಯಾಸ್ತಿ ಕಿಮರ್ಥವತ್ತಾಽ-
ಧಿಷ್ಠಾನಮಾಭಾತಿ ತಥಾ ಭ್ರಮೇಣ ॥ ೨೩೩

ಭ್ರಾನ್ತಸ್ಯ ಯದ್ಯದ್ ಭ್ರಮತಃ ಪ್ರತೀತಂ
ಬ್ರಹ್ಮೈವ ತತ್ತದ್ ರಜತಂ ಹಿ ಶುಕ್ತಿಃ ।
ಇದಂತಯಾ ಬ್ರಹ್ಮ ಸದೈವ ರೂಪ್ಯತೇ
ತ್ವಾರೋಪಿತಂ ಬ್ರಹ್ಮಣಿ ನಾಮಮಾತ್ರಮ್ ॥ ೨೩೪

೨೩೩-೨೩೪. ಆದ್ದರಿಂದ ಜಗತ್ತು ಪರಮಾತ್ಮನನ್ನು ಬಿಟ್ಟು ಬೇ
ಇರುವದಿಲ್ಲ; ಬೇರೆಯಾಗಿರುವಂತೆ ತೋರುವದು, ಗುಣಾದಿಗಳು (ತೋರ
ವಂತೆ[5] ಮಿಥ್ಯಾಪ್ರತೀತಿಯಾಗಿರುತ್ತದೆ. ಆರೋಪಿತವಾಗಿರುವದಕ್ಕೆ ಪರಮಾರ್ಥ
ವಿರುವದೇನು? ಅಧಿಷ್ಠಾನವೇ ಭ್ರಾಂತಿಯಿಂದ ಹಾಗೆ ತೋರುತ್ತಿರುತ್ತ

---

1. ಆತ್ಮನಿಗೂ ಜಗತ್ತಿಗೂ ಯಾವ ಸಂಬಂಧವೂ ಇಲ್ಲವೆಂದು ಹೇಳಿದ್ದರಿಂದ
ನನ್ನಲ್ಲಿರುವಂತೆ ತೋರುವ ಭೂತಗಳು ನಿಜವಾಗಿಲ್ಲವೆಂದು ಹೇಳಿದ್ದರಿಂದಲೂ ಜಗ
ಅಸತ್ಯವೆಂದಂತೆ ಆಯಿತು. ಶಂ. ಗೀ. -೪-೫,

2. ಇಲ್ಲಿ ಸುಷುಪ್ತಿಯಲ್ಲಿ ಜಗತ್ತು ಎಳ್ಳಷ್ಟೂ ಇಲ್ಲವೆಂದು ಹೇಳಿದೆ; ಆ
ಪ್ರಕೃತಿಯ ವಿಕಾರವಾದ ಆನಂದಮಯಕೋಶವು ಇದೆಯೆಂದು ೨೦ ರಲ್ಲಿ ಇದಕ್ಕೆ ವಿರು
ವಾಗಿ ಹೇಳಿರುವದೇಕೋ ತಿಳಿಯದು.

3. ಅಸತ್ತೆಂದರೆ ಮೊಲದ ಕೊಂಬಿನಂತೆ ತುಚ್ಛವೆಂದೇನೂ ಅಭಿಪ್ರಾಯವಲ್ಲವೆಂ
ಭಾವ.

4. 'ಮೃಷಾಥಭ್ರನೈಲ್ಯವತ್' ಪಾ॥

5. ಗುಣಕರ್ಮಾದಿಗಳು ದ್ರವ್ಯಕ್ಕಿಂತ ಬೇರೆಯಾಗಿ ತೋರುವಂತೆ – ಎಂದ
'ಮೃಷಾಥಭ್ರನೈಲ್ಯವತ್' ಎಂಬ ಪಾಠಕ್ಕೆ "ಆಕಾಶದಲ್ಲಿ ತೋರುವ ನೀಲವರ್ಣದ
ಹಾಗೆ ತೋರುತ್ತಿರುವ..." ಎಂದರ್ಥ

ಭ್ರಾಂತನಾದವನಿಗೆ ಯಾವಯಾವದು ಭ್ರಮೆಯಿಂದ ತೋರುವದೋ ಅದದಂ ಬ್ರಹ್ಮವೇ, ಬೆಳ್ಳಿಯಾಗಿ (ತೋರುವದು) ಕಪ್ಪೆಯಚಿಪ್ಪೇ ಅಲ್ಲವೆ ?[1] 'ಇದು' ಎಂದು ಯಾವಾಗಲೂ ಬ್ರಹ್ಮವೇ ತೋರಿಕೊಳ್ಳುತ್ತಿರುವದು ; ಬ್ರಹ್ಮದಲ್ಲಿ ಆರೋಪಿತವಾಗಿರುವದು ಬರಿಯ ಹೆಸರೇ.[2]

## ಬ್ರಹ್ಮಸ್ವರೂಪ

ಅತಃ ಪರಂ ಬ್ರಹ್ಮ ಸದದ್ವಿತೀಯಂ
ವಿಶುದ್ಧವಿಜ್ಞಾನಘನಂ ನಿರಞ್ಜನಮ್ ।
ಪ್ರಶಾನ್ತಮಾದ್ಯನ್ತವಿಹೀನಮಕ್ರಿಯಂ
ನಿರನ್ತರಾನನ್ದರಸಸ್ವರೂಪಮ್ ॥೨೩೮॥
ನಿರಸ್ತಮಾಯಾಕೃತಸರ್ವಭೇದಂ
ನಿತ್ಯಂ ಸುಖಂ[3] ನಿಷ್ಕಲಮಪ್ರಮೇಯಮ್ ।
ಅರೂಪಮವ್ಯಕ್ತಮನಾಖ್ಯಮವ್ಯಯಂ
ಜ್ಯೋತಿಃ ಸ್ವಯಂ ಕಿಞ್ಚಿದಿದಂ ಚಕಾಸ್ತಿ ॥೨೩೯॥

೨೩೮-೨೩೯. ಆದ್ದರಿಂದ ಪರಬ್ರಹ್ಮವು ತನಗೆರಡನೆಯದಿಲ್ಲದ ಸದ್ರೂಪವಾದದ್ದು, ವಿಶುದ್ಧವಿಜ್ಞಾನದ ಗಟ್ಟಿಯು[4], ಯಾವದರ ಅಂಟೂ ಇಲ್ಲದ್ದು. ಅತ್ಯಂತ ಶಾಂತವಾದದ್ದು, ಆದ್ಯಂತಗಳಿಲ್ಲದ್ದು[5], ಕ್ರಿಯಾರಹಿತವಾದದ್ದು[6], ತೆರಪಿಲ್ಲದ ಆನಂದರಸದ ಸ್ವರೂಪವಾದದ್ದು. ಮಾಯೆಯಿಂದಾಗಿರುವ ಯಾವ ಭೇದಗಳೂ ಇಲ್ಲದ್ದು, ನಿತ್ಯವಾದದ್ದು, ಸುಖರೂಪವಾದದ್ದು, ಅವಯವಗಳಿಲ್ಲದ್ದು ಪ್ರಮಾಣಗಳಿಗೆ ನಿಲುಕದಂಥದ್ದು, ರೂಪವಿಲ್ಲದ್ದು, ಅವ್ಯಕ್ತವಾದದ್ದು[7], ಹೆಸರಿಸಿ

---

1. ಶಂ. ಗೀ. ೧೩-೧ .

2. ಛಾಂ. ೬-೩-೧೧. ಹಗ್ಗದಲ್ಲಿ ಹಾವು ತೋರುವಂತೆ ಜಗತ್ತು ತೋರುತ್ತಿರುವದರಿಂದ 'ಹಾವು' ಎಂಬುದು ಹೇಗೆ ಬರಿಯ ಹೆಸರೋ ಹಾಗೆಯೇ 'ಜಗತ್ತು' ಎಂಬುದೂ ಬರಿಯ ಹೆಸರೇ ಎಂದರ್ಥ.

3. 'ಧ್ರುವಮ್' ಎಂಬ ವಾ॥ ಪಾಠಕ್ಕಿಂತ ಇದು ಮೇಲು.

4. ವಿಷಯಗಳ ಸೋಂಕಿಲ್ಲದ ಚೈತನ್ಯವು, ಗಟ್ಟಿಯು (ಘನ) ಎಂಬ ಮಾತಿನಿಂದ ವಿಜ್ಞಾನವಲ್ಲದೆ ಮತ್ತೇನೂ ಇದರಲ್ಲಿ ಬೆರೆತಿಲ್ಲವೆಂದು ತಿಳಿಸಿದೆ.

5. ಏಕೆಂದರೆ ಕಾಲದೇಶವಸ್ತುಗಳ ಅಳತೆ ಸಿಕ್ಕದೆ ಇದೆ.

6. ಏಕೆಂದರೆ ಇದರಲ್ಲಿ ಯಾವ ಮಾರ್ಪಾಡೂ ಆಗುವಂತಿಲ್ಲ.

7. ಯಾವ ಕರಣಗಳಿಗೂ ಗೋಚರವಾಗದೆ ಇರತಕ್ಕದ್ದು.

ಹೇಳುವದಕ್ಕೆ ಬಾರದೆ ಇರುವಂಥದ್ದು, ಸವೆಯದಿರುವಂಥದ್ದು[1]– ಇಂಥ ಯಾವದೋ ಒಂದು ಸ್ವಯಂಜ್ಯೋತಿಯು[2] ಬೆಳಗುತ್ತಿರುವದು.

ಜ್ಞಾತೃಜ್ಞೇಯಜ್ಞಾನಶೂನ್ಯಮನನ್ತಂ ನಿರ್ವಿಕಲ್ಪಕಮ್ ।
ಕೇವಲಾಖಣ್ಡಚಿನ್ಮಾತ್ರಂ ಪರಂ ತತ್ತ್ವಂ ವಿದುರ್ಬುಧಾಃ ॥೨೩೭॥

೨೩೭. ಅದು ಜ್ಞಾತೃ, ಜ್ಞೇಯ, ಜ್ಞಾನ– ಎಂಬ (ತ್ರಿಪುಟಿ)ಯಿಲ್ಲದ್ದೆಂದೂ[3] ಅನಂತವಾದದ್ದೆಂದೂ ಯಾವ ವಿಕಲ್ಪವೂ[4] ಇಲ್ಲದ್ದೆಂದೂ ಕೇವಲ ಅಖಂಡಚಿನ್ಮಾತ್ರ[5]ವಾದ ಪರತತ್ತ್ವವೆಂದೂ ಬಲ್ಲವರು ತಿಳಿಯುತ್ತಾರೆ.

ಅಹೇಯಮನುಪಾದೇಯಂ ಮನೋವಾಚಾಮಗೋಚರಮ್ ।
ಅಪ್ರಮೇಯಮನಾದ್ಯನ್ತಂ ಬ್ರಹ್ಮ ಪೂರ್ಣಂ ಮಹನ್ಮಹಃ ॥೨೩೮॥

೨೩೮. ಬ್ರಹ್ಮವು ಬಿಡತಕ್ಕದ್ದಲ್ಲ, ತೆಗೆದುಕೊಳ್ಳತಕ್ಕದ್ದಲ್ಲ[6], ವಾಙ್ಮನಗಳಿಗೆ ವಿಷಯವಲ್ಲ, ಪ್ರಮಾಣಕ್ಕೆ ವಿಷಯವಲ್ಲ, ಆದ್ಯಂತಗಳಿಲ್ಲದ್ದು, ಪೂರ್ಣವಾದದ್ದು, ಮಹಾತೇಜಸ್ಸು.

## ಮಹಾವಾಕ್ಯದ ಅರ್ಥ

ತತ್ತ್ವಂಪದಾಭ್ಯಾಮಭಿಧೀಯಮಾನಯೋ–
ರ್ಬ್ರಹ್ಮಾತ್ಮನೋಃ ಶೋಧಿತಯೋರ್ಯದೀತ್ಥಮ್[7] ।
ಶ್ರುತ್ಯಾ ತಯೋಸ್ತತ್ತ್ವಮಸೀತಿ ಸಮ್ಯ–
ಗೇಕತ್ವಮೇವ ಪ್ರತಿಪಾದ್ಯತೇ ಮುಹುಃ ॥೨೩೯॥

1. ತಾನೇ ಆಗಲಿ, ಗುಣವೇ ಮುಂತಾದ ಮತ್ತೊಂದರ ಮೂಲಕವಾಗಿಯಾಗಲಿ ಸವೆಯುವ ಸ್ವಭಾವದ್ದಲ್ಲದ್ದು ಎಂದರ್ಥ.

2. ಮತ್ತೊಂದರಿಂದ ತೋರಿಕೊಳ್ಳಬೇಕಾದ ಅವಶ್ಯಕತೆಯಿಲ್ಲ. ತಾನೇ ತೋರಿಕೊಳ್ಳುತ್ತಾ ಮಿಕ್ಕದ್ದೆಲ್ಲವನ್ನೂ ತಿಳಿಸಿಕೊಡುವ ಸ್ವಭಾವದ್ದು–ಎಂದರ್ಥ.

3. 'ನಾನು ಚಕ್ಷುರಾದಿಗಳಿಂದ ಇದನ್ನು ಅರಿಯುತ್ತೇನೆ' ಎಂಬ ರೀತಿಯಲ್ಲಾಗುವ ಮುಕ್ಕೂಪ್ಪೆಯ ಅರಿವಲ್ಲದ, ಬರಿಯ ಅರಿವು–ಎಂದರ್ಥ.

4. ಜಾತಿ, ದ್ರವ್ಯ ಗುಣ–ಮುಂತಾದವುಗಳಿಲ್ಲದ್ದು.

5. ಅಖಂಡಚಿನ್ಮಾತ್ರವೆಂಬ ವಿಶೇಷಣವು ತೇಜೋಬಿಂದೂಪನಿಷತ್ತಿನ ಎರಡನೆಯ ಅಧ್ಯಾಯದಲ್ಲಿ ಪ್ರಚುರವಾಗಿದೆ.

6. ಬಿಡುವದು, ತೆಗೆದುಕೊಳ್ಳುವದು–ಇವಕ್ಕೆ ಗೋಚರವಾದದ್ದು ಪ್ರಮೇಯವು, ಆತ್ಮನಲ್ಲ.

7. 'ಯದಿ' ಎಂಬ ಮಾತು ಇಲ್ಲಿ ಅನ್ವಯವಾಗುವಂತಿಲ್ಲ; 'ಯದಿತ್ಥಮ್' ಎಂದಿದ್ದರೆ ಕಷ್ಟಪಟ್ಟು ಹೊಂದಿಸಬಹುದೇನೊ.

೨೩೯. ತತ್, ತ್ವಮ್ – ಎಂಬ ಪದಗಳಿಗೆ ವಾಚ್ಯವಾಗಿರುವ ಬ್ರಹ್ಮ, ಆತ್ಮ – ಇವರಿಬ್ಬರನ್ನೂ ಹೀಗೆ[1] ಶೋಧನೆಮಾಡಿದಮೇಲೆ[2] ಶ್ರುತಿಯು 'ತತ್ತ್ವಮಸಿ' (ಛಾಂ. ೬-೮) ಎಂದು ಆವೆರಡಕ್ಕೂ ಪೂರ್ಣವಾದ ಐಕ್ಯವನ್ನೇ ಮತ್ತೆಮತ್ತೆ[3] ಹೇಳುತ್ತದೆ.

ಐಕ್ಯಂ ತಯೋರ್ಲಕ್ಷಿತಯೋರ್ನ ವಾಚ್ಯಯೋ-
ರ್ನಿಗದ್ಯತೇಽನ್ಯೋನ್ಯವಿರುದ್ಧಧರ್ಮಿಣೋಃ ।
ಖದ್ಯೋತಭಾನ್ವೋರಿವ ರಾಜಭೃತ್ಯಯೋಃ
ಕೂಪಾಮ್ಬುರಾಶ್ಯೋಃ ಪರಮಾಣುಮೇರ್ವೋಃ ॥೨೪೦॥

೨೪೦. ಐಕ್ಯವು ಲಕ್ಷ್ಯಾರ್ಥವಾದ ಆವೆರಡಕ್ಕೂ (ಉಕ್ತವಾಗಿದೆಯೇ ಹೊರತು) ಸೂರ್ಯ, ಮಿಣುಕುಹುಳು ; ರಾಜ, ಸೇವಕ ; ಸಮುದ್ರ, ಗುಂಡಿ ; ಮೇರು, ಪರಮಾಣು – ಇವುಗಳಂತೆ ಒಂದಕ್ಕೊಂದು ವಿರುದ್ಧಧರ್ಮವುಳ್ಳ ವಾಚ್ಯಾರ್ಥವಾದ (ಆವೆರಡಕ್ಕೂ) ಅಲ್ಲ.

ತಯೋರ್ವಿರೋಧೋಽಯಮುಪಾಧಿಕಲ್ಪಿತೋ
ನ ವಾಸ್ತವಃ ಕಶ್ಚಿದುಪಾಧಿರೇಷಃ ।
ಈಶಸ್ಯ ಮಾಯಾ ಮಹದಾದಿಕಾರಣಂ
ಜೀವಸ್ಯ ಕಾರ್ಯಂ ಶೃಣು ಪಞ್ಚಕೋಶಮ್ ॥ ೨೪೧ ॥

ಏತಾವುಪಾಧೀ ಪರಜೀವಯೋಸ್ತಯೋಃ
ಸಮ್ಯಙ್ ನಿರಾಸೇ ನ ಪರೋ ನ ಜೀವಃ ।
ರಾಜ್ಯಂ ನರೇನ್ದ್ರಸ್ಯ ಭಟಸ್ಯ ಖೇಟಕ-
ಸ್ತಯೋರಪೋಹೇ ನ ಭಟೋ ನ ರಾಜಾ ॥ ೨೪೨ ॥

೨೪೧-೨೪೨. ಆವೆರಡಕ್ಕೂ (ತೋರುವ) ಈ ವಿರೋಧವು ಉಪಾಧಿ ಕಲ್ಪಿತವಾಗಿರುತ್ತದೆ ; ಈ ಉಪಾಧಿ ಯಾವುದೂ ಸತ್ಯವಾದದ್ದಲ್ಲ. ಕೇಳಯ್ಯಾ, ಈಶ್ವರನಿಗೆ ಮಹದಾದಿಗಳ ಕಾರಣವಾದ ಮಾಯೆ[4] ಜೀವನಿಗೆ ಕಾರ್ಯವಾದ ಪಂಚಕೋಶ – ಪರಮಾತ್ಮಜೀವಾತ್ಮರಿಗೆ ಇವೇ ಉಪಾಧಿಗಳು. ಇವುಗಳನ್ನು

---

1. ಜೀವನನ್ನು ಪಂಚಕೋಶವಿವೇಕದಿಂದಲೂ ಈಶ್ವರನನ್ನು ಸೃಷ್ಟಿಸಲ್ಪಟ್ಟ ಮಾಯಾಕಾರ್ಯವಾದ ಜಗತ್ತಿನಿಂದಲೂ ವಿಂಗಡಿಸಿರುವಂತೆ – ಎಂದರ್ಥ.

2. ಕೇವಲ ಚಿನ್ಮಾತ್ರವೇ ಉಳಿಯುವವರೆಗೆ ಉಪಾಧಿಗಳನ್ನು ವಿವೇಚಿಸಿ ತೆಗೆದು ಹಾಕುವದು ಶೋಧನವು; ಇದರಿಂದ ಜೀವನು ಅಪರೋಕ್ಷನೆಂದೂ ಈಶ್ವರನು ಅಪರೋಕ್ಷಾದ್ವಿತೀಯನೆಂದೂ ಗೊತ್ತಾಗುತ್ತದೆ. ಶಂ. ಗೀ. ೨-೧೬.

3. ಛಾಂದೋಗ್ಯದಲ್ಲಿ ತತ್ತ್ವಮಸಿವಾಕ್ಯವು ಒಂಭತ್ತು ಸಲ ಬಂದಿದೆ

4. ಶಂ. ಗೀ. ೯-೬, ೭-೨೯.

ಚೆನ್ನಾಗಿ ತಿರಸ್ಕರಿಸಿದರೆ ಈಶ್ವರನೂ ಅಲ್ಲ, ಜೀವನೂ ಅಲ್ಲ. ರಾಜನಿಗೆ ರಾಜ್ಯ, ಸೇವಕನಿಗೆ ಹಳ್ಳಿ; ಅವೆರಡೂ ಇಲ್ಲವಾದರೆ ರಾಜನೂ ಅಲ್ಲ, ಸೇವಕನೂ ಅಲ್ಲ.

ಅಥಾತ ಆದೇಶ ಇತಿ ಶ್ರುತಿಃ ಸ್ವಯಂ
ನಿಷೇಧತಿ ಬ್ರಹ್ಮಣಿ ಕಲ್ಪಿತಂ ದ್ವಯಮ್ ।
ಶ್ರುತಿಪ್ರಮಾಣಾನುಗೃಹೀತಯುಕ್ತ್ಯಾ
ತಯೋರ್ನಿರಾಸಃ ಕರಣೀಯ ಏವಮ್[1] ॥ ೨೪೩ ॥

ನೇದಂ ನೇದಂ ಕಲ್ಪಿತತ್ವಾನ್ನ ಸತ್ಯಂ
ರಜ್ಜೌ ದೃಷ್ಟವ್ಯಾಲವತ್ಸ್ವಪ್ನವಚ್ಚ ।
ಇತ್ಥಂ ದೃಶ್ಯಂ ಸಾಧುಯುಕ್ತ್ಯಾ ವ್ಯಪೋಹ್ಯ
ಜ್ಞೇಯಃ ಪಶ್ಚಾದೇಕಭಾವಸ್ತಯೋರ್ಯಃ ॥ ೨೪೪ ॥

೨೪೩–೨೪೪. "ಇನ್ನು ಆದ್ದರಿಂದ (ಬ್ರಹ್ಮದ) ಆದೇಶವು (ಹೀಗೂ ಅಲ್ಲ, ಹೀಗೂ ಅಲ್ಲ)" (ಬೃ. ೨-೩-೬) ಎಂಬ ಶ್ರುತಿಯು[2] ಬ್ರಹ್ಮದಲ್ಲಿ ಕಲ್ಪಿತವಾದ (ಈ) ಎರಡನ್ನೂ ತಾನೇ ಅಲ್ಲಗಳೆಯುತ್ತದೆ. ಶ್ರುತಿಪ್ರಮಾಣದಿಂದ ಅನುಗೃಹೀತವಾದ ಯುಕ್ತಿಯಿಂದ[3] ಅವೆರಡನ್ನೂ ಹೀಗೆ ನಿರಾಸಮಾಡಬೇಕು; "ಇದೂ ಅಲ್ಲ, ಇದೂ ಅಲ್ಲ. ಹಗ್ಗದಲ್ಲಿ ಕಂಡ ಹಾವಿನಂತೆಯೂ, ಕನಸಿನಂತೆಯೂ ಕಲ್ಪಿತವಾಗಿರುವದರಿಂದ ಸತ್ಯವಲ್ಲ." ಹೀಗೆಂದು ದೃಶ್ಯವಾದದ್ದನ್ನು ಸರಿಯಾದ ಯುಕ್ತಿಯಿಂದ ತೆಗೆದುಹಾಕಿ ಆಮೇಲೆ ಈ (ಜೀವೇಶ್ವರ)ರಿಬ್ಬರಿಗೂ ಐಕ್ಯವನ್ನು ಅರಿತುಕೊಳ್ಳಬೇಕು.

ತತಸ್ತು ತೌ ಲಕ್ಷಣಯಾ ಸುಲಕ್ಷ್ಯೌ
ತಯೋರಖಣ್ಡೈಕರಸತ್ವಸಿದ್ಧಯೇ ।
ನಾಲಂ ಜಹತ್ಯಾ ನ ತಥಾಽಜಹತ್ಯಾ
ಕಿಂ ತೂಭಯಾರ್ಥಾತ್ಮಿಕಯೈವ ಭಾವ್ಯಮ್ ॥ ೨೪೫ ॥

ಸ ದೇವದತ್ತೋಽಯಮಿತೀಹ ಚೈಕತಾ[4]
ವಿರುದ್ಧಧರ್ಮಾಂಶಮಪಾಸ್ಯ ಕಥ್ಯತೇ ।

---

1. 'ಏ.' ಎಂದು ಪಾ॥

2. ಈ ಶ್ರುತಿಯಲ್ಲಿ ಕಾರ್ಯಕಾರಣೋಪಾಧಿಗಳನ್ನು ಅಲ್ಲಗಳೆದಿದೆ ಎಂದು ಗ್ರಂಥಕರ್ತರ ಅಭಿಪ್ರಾಯ. ೩೦. ಗೀ. ೨ನ್ನು ನೋಡಿ. ಆದರೆ ಅಲ್ಲಿ ಮೂರ್ತಾಮೂರ್ತವಾಸನೆಗಳನ್ನು ಅಲ್ಲಗಳೆದು ಶುದ್ಧಬ್ರಹ್ಮವನ್ನು ತಿಳಿಸಿದೆ ಎಂದು ಪ್ರಕರಣದಿಂದಲೂ ಭಾಷ್ಯದಿಂದಲೂ ಗೊತ್ತಾಗುತ್ತದೆ.

3. ತಾನೇ ಊಹಿಸಿದ ಯುಕ್ತಿಯು ಸಾಲದೆಂಬ ಭಾವ.

4. 'ವೈಕತಾ' ಎಂದು ಪಾ ॥

ಯಥಾ ತಥಾ ತತ್ತ್ವಮಸೀತಿ ವಾಕ್ಯೇ
ವಿರುದ್ಧಧರ್ಮಾನುಭಯತ್ರ ಹಿತ್ವಾ ॥೨೪೧॥
ಸಂಲಕ್ಷ್ಯ ಚಿನ್ಮಾತ್ರತಯಾ ಸದಾತ್ಮನೋ-
ರಖಣ್ಡಭಾವಃ ಪರಿಚೀಯತೇ ಬುಧೈಃ ।
ಏವಂ ಮಹಾವಾಕ್ಯಶತೇನ ಕಥ್ಯತೇ
ಬ್ರಹ್ಮಾತ್ಮನೋರೈಕ್ಯಮಖಣ್ಡಭಾವಃ ॥೨೪೨॥

೨೪೧-೨೪೨. ಆಮೇಲಾದರೆ ಅವರಿಬ್ಬರನ್ನೂ ಲಕ್ಷಣೆಯಿಂದ ಸುಲಭವಾಗಿ ಕಂಡುಕೊಳ್ಳಬಹುದು[1]. ಅವರಿಬ್ಬರೂ ಅಖಂಡೈಕರಸ(ತತ್ತ್ವ)ವೇ ಎಂದು ಏರ್ಪಡಬೇಕಾದರೆ (ಬರಿಯ) ಜಹಲ್ಲಕ್ಷಣೆಯೇ ಸಾಲದು, (ಬರಿಯ) ಅಜಹಲ್ಲಕ್ಷಣೆಯೂ ಸಾಲದು ; ಮತ್ತೇನೆಂದರೆ ಎರಡು ರೂಪದ್ದು (ಎಂದರೆ ಜಹದಜಹಲ್ಲಕ್ಷಣೆಯೇ) ಆಗಬೇಕು. 'ಆ ದೇವದತ್ತನು ಇವನೇ' ಎಂಬಲ್ಲಿ ವಿರುದ್ಧವಾದ ಧರ್ಮಗಳ ಅಂಶವನ್ನು ಬಿಟ್ಟು ಹೇಗೆ ಐಕ್ಯವನ್ನು ಹೇಳುತ್ತಾರೋ ಅದರಂತೆ[2] 'ಅದೇ ನೀನಾಗಿರುವೆ' (ತತ್ತ್ವಮಸಿ' ಛಾಂ.) ಎಂಬ ವಾಕ್ಯದಲ್ಲಿಯೂ ಜಾಣರಾದವರು ಎರಡು ಕಡೆಯಲ್ಲಿಯೂ ವಿರುದ್ಧಧರ್ಮಗಳನ್ನು ಬಿಟ್ಟು ಕೇವಲ

1. ಪದವು ರೂಢಿಯಿಂದ ಹೇಳುವ ಅರ್ಥವು ವಾಚ್ಯಾರ್ಥವೆನಿಸುವದು ; ಇದನ್ನು ಶಕ್ಯಾರ್ಥವೆಂದೂ ಕರೆಯುತ್ತಾರೆ ಶಕ್ಯದ ಮೂಲಕವಾಗಿ ಯಾವ ವಸ್ತುವಿನೊಡನೆ ಪದಕ್ಕೆ ಸಂಬಂಧವಾಗುವದೋ ಅದು ಪದದ ಲಕ್ಷ್ಯಾರ್ಥವು. ಎಲ್ಲಿ ವಾಚ್ಯಾರ್ಥವು ಹೊಂದುವದಿಲ್ಲವೋ ಅಲ್ಲಿ ಲಕ್ಷ್ಯಾರ್ಥವನ್ನು ತೆಗೆದುಕೊಳ್ಳಬೇಕು. ಪದಕ್ಕೆ ತನ್ನ ಅರ್ಥವನ್ನು ಅಭಿಧಾವೃತ್ತಿಯಿಂದ ಹೇಳುವದೆಂದೂ ಅಥವಾ ಅವೆರಡಕ್ಕೆ ವಾಚ್ಯವಾಚಕವೆಂಬ ನಿತ್ಯಸಂಬಂಧವಿರುವದೆಂದೂ ಅದು ಲಕ್ಷ್ಯವನ್ನು ಲಕ್ಷಣಾವೃತ್ತಿಯಿಂದ ಹೇಳುವದೆಂದೂ ಭಾವಿಸಲಾಗಿದೆ. 'ಗಂಗೆಯ ಪ್ರವಾಹವು ಹೆಚ್ಚಿದೆ' ಎಂಬಲ್ಲಿ ಗಂಗೆಯೆಂಬ ಪದವು ವಾಚ್ಯಾರ್ಥವಾದ ನದಿಯನ್ನು ಹೇಳುತ್ತದೆ ; "ಗಂಗೆಯ ಮೇಲೆ ಹಳ್ಳಿಯಿದೆ" ಎಂಬಲ್ಲಿ ಗಂಗಾತೀರವೆಂಬ ಲಕ್ಷ್ಯಾರ್ಥವನ್ನು ಹೇಳುತ್ತದೆ, ನದಿಯಮೇಲೆ ಹಳ್ಳಿಯಿರುವದು ಅಸಂಭವವಾದದ್ದರಿಂದ ಅಲ್ಲಿ ವಾಚ್ಯಾರ್ಥವನ್ನು ಹೇಳುವದಿಲ್ಲ. ಇಲ್ಲಿ ಪದವು ಗಂಗೆಯೆಂಬರ್ಥವನ್ನು ಬಿಡದೆ ಗಂಗೆಗೆ ಸಂಬಂಧಪಟ್ಟ ತೀರವನ್ನು ಹೇಳುವದರಿಂದ ಅದು ಅಜಹಲ್ಲಕ್ಷಣೆ. 'ಆ ಶತ್ರುವಿನ ಮನೆಗೆ ಹೋಗಿ ವಿಷವನ್ನು ಉಂಡು ಬಾ' ಎಂಬಲ್ಲಿ ಭೋಜನವಮಾಡಬಾರದೆಂಬರ್ಥದಲ್ಲಿ 'ಊಟಮಾಡು' ಎಂದು ಪ್ರಯೋಗಿಸಿರುವದರಿಂದ ವಾಚ್ಯಾರ್ಥವನ್ನು ಬಿಟ್ಟೇ ತದ್ವಿರುದ್ಧವಾದ ಅರ್ಥವನ್ನು ಹೇಳಿದಂತಾಗಿರುವದರಿಂದ ಇದು ಜಹಲ್ಲಕ್ಷಣೆ.

2. "(ಆತ)ನೇ ಈ ದೇವದತ್ತನು" ಎಂಬಲ್ಲಿ ಸ್ವಲ್ಪಭಾಗವನ್ನು— ಆ ಕಾಲ, ಈ ಕಾಲ ; ಆ ಸ್ಥಲ, ಈ ಸ್ಥಲ—ಮುಂತಾದ—ವಿರುದ್ಧಾಂಶಗಳನ್ನು ಬಿಟ್ಟು ಒಂದಂಶವನ್ನು ಉಳಿಸಿಕೊಂಡು ಲಕ್ಷ್ಯವಾದ ಐಕ್ಯವನ್ನು ಹೇಳುವದರಿಂದ ಇದು ಜಹದಜಹಲ್ಲಕ್ಷಣೆ ಇದರಂತೆ ದಾರ್ಷ್ಟಾಂತಿಕದಲ್ಲಿಯೂ ಈ ಲಕ್ಷಣೆಯಿಂದ ವಾಕ್ಯಾರ್ಥವನ್ನು ಗ್ರಹಿಸಬೇಕು ಎಂದರ್ಥ.

ಚಿದ್ರೂಪದಿಂದ ಗುರುತಿಸಿ ತತ್ತು ಮತ್ತು ಆತ್ಮ-ಇವರ ಅಖಂಡಭಾವವನ್ನು ಪರಿಚಯಮಾಡಿಕೊಳ್ಳುತ್ತಾರೆ. ಹೀಗೆ ನೂರಾರು ಮಹಾವಾಕ್ಯಗಳಿಂದ ಬ್ರಹ್ಮಾತ್ಮಪದಗಳ ಒಂದೆಂಬ ಅಖಂಡಭಾವವು[3] ಉಕ್ತವಾಗಿರುತ್ತದೆ.

## ಬ್ರಹ್ಮಭಾವನೆ

ಅಸ್ಥೂಲಮಿತ್ಯೇತದಸನ್ನಿರಸ್ಯ
ಸಿದ್ಧಂ ಸ್ವತೋ ವ್ಯೋಮವದಪ್ರತರ್ಕ್ಯಮ್
ಅತೋ ಮೃಷಾಮಾತ್ರಮಿದಂ ಪ್ರತೀತಂ
ಜಹೀಹಿ ಯತ್ ಸ್ವಾತ್ಮತಯಾ ಗೃಹೀತಮ್ ।
ಬ್ರಹ್ಮಾಹಮಿತ್ಯೇವ ವಿಶುದ್ಧಬುದ್ಧ್ಯಾ
ವಿದ್ಧಿ ಸ್ವಮಾತ್ಮಾನಮಖಣ್ಡಬೋಧಮ್ ॥೨೪೮॥

೨೪೭-೨೪೮. 'ಅಸ್ಥೂಲವಾದದ್ದು' (ಬೃ. ೩-೮-೮) ಎಂದು ಈ ಅಸದ್ರೂಪವನ್ನು ತಿರಸ್ಕರಿಸಿ[4] ಸ್ವತಃಸಿದ್ಧವಾಗಿರುವ (ಚೈತನ್ಯವು) ಆಕಾಶದಂತಿರುವದು, ಊಹಿಸುವದಕ್ಕಸದಳವಾಗಿರುವದು. ಆದ್ದರಿಂದ[5] ಯಾವದನ್ನು ನಿನ್ನ ಆತ್ಮನೆಂದು ಗ್ರಹಿಸಿಕೊಂಡಿರುವೆಯೋ ಇದು ಮಿಥ್ಯಾಮಾತ್ರವಾದ ತೋರಿಕೆಯು. ಇದನ್ನು ಬಿಟ್ಟುಬಿಡು. 'ನಾನು ಬ್ರಹ್ಮವು' ಎಂದೇ ಅತಿಶುದ್ಧವಾದ ಬುದ್ಧಿಯಿಂದ ಅಖಂಡಬೋಧ[6]ಸ್ವರೂಪನಾದ ನಿನ್ನ ಆತ್ಮನನ್ನು ತಿಳಿದುಕೋ.

---

1. ಸದ್ಬ್ರಹ್ಮವು ಜಗತ್ತನ್ನು ಸೃಷ್ಟಿಸಿ ಜೀವರೂಪದಿಂದ ಪ್ರವೇಶಿಸಿದೆ ಎಂದು ಶ್ರುತಿಯಲ್ಲಿದೆ. ಇಲ್ಲಿ, ಜಗತ್ಕಾರಣತ್ವ, ಕಾರ್ಯೋಪಾಧಿತ್ವ-ಎಂಬಂಶಗಳನ್ನು ಬಿಟ್ಟು ಚಿದ್ರೂಪವನ್ನು ಮಾತ್ರ ಗ್ರಹಿಸಬೇಕು.

2. ಜೀವಬ್ರಹ್ಮೈಕ್ಯವನ್ನು ಹೇಳುವ ವಾಕ್ಯಗಳನ್ನು ಮಹಾವಾಕ್ಯಗಳೆಂದು ಕರೆಯುತ್ತಾರೆ. ಇವುಗಳು ಅನೇಕವಾಗಿದ್ದರೂ ತತ್ತ್ವಮಸಿ, ಅಹಂ ಬ್ರಹ್ಮಾಸ್ಮಿ, ಪ್ರಜ್ಞಾನಂ ಬ್ರಹ್ಮ, ಅಯಮಾತ್ಮಾ ಬ್ರಹ್ಮ-ಎಂಬೀ ನಾಲ್ಕನ್ನೇ ಮುಖ್ಯವಾದ ಮಹಾವಾಕ್ಯಗಳೆಂದು ಗಣಿಸುವದು ಈಗ ಪ್ರಚಾರದಲ್ಲಿದೆ.

3. ಚಿದ್ರೂಪವೇ ಇಲ್ಲಿ ಅಖಂಡಾರ್ಥವೆನಿಸುವದು ; ಅಖಂಡವೆಂಬ ಶಬ್ದವು ಗ್ರಂಥಕಾರರಿಗೆ ಬಹಳ ಮೆಚ್ಚು.

4. ಶ್ರುತಿಯಲ್ಲಿ ಅಸತ್ತಾದ ದೃಶ್ಯವನ್ನು ನಿಷೇಧಿಸಿ ನಿಷೇಧಕ್ಕೆ ಅವಿಷಯವಾಗಿ ದೃಶ್ಯವಿಲಕ್ಷಣವಾಗಿರುವ ಸ್ವತಃಸಿದ್ಧಚೈತನ್ಯವನ್ನೇ ಬ್ರಹ್ಮವೆಂದು ಬೋಧಿಸುತ್ತದೆ ಎಂದು ಭಾವ. ಶಂ. ಗೀ. ೯-೪.

5. ಹೀಗೆ ಸ್ವತಃಸಿದ್ಧವಾಗಿರುವದರಿಂದ.

ಮೃತ್ಕಾರ್ಯಂ ಸಕಲಂ ಘಟಾದಿ ಸತತಂ ಮೃನ್ಮಾತ್ರಮೇವಾಭಿತ-
ಸ್ತದ್ವತ್ಸಜ್ಜನಿತಂ ಸದಾತ್ಮಕಮಿದಂ ಸನ್ಮಾತ್ರಮೇವಾಖಿಲಮ್ ।
ಯಸ್ಮಾನ್ನಾಸ್ತಿ ಸತಃ ಪರಂ ಕಿಮಪಿ ತತ್ಸತ್ಯಂ ಸ ಆತ್ಮಾ ಸ್ವಯಂ
ತಸ್ಮಾತ್ ತತ್ತ್ವಮಸಿ ಪ್ರಶಾನ್ತಮಮಲಂ ಬ್ರಹ್ಮಾದ್ವಯಂ
ಯತ್ ಪರಮ್ ॥೨೪೯

೨೪೯. ಮಣ್ಣಿನ ಕಾರ್ಯವಾದ ಗಡಿಗೆಯೇ ಮುಂತಾದದ್ದೆಲ್ಲವೂ[1] ಎಲ್ಲೆಲ್ಲಿ ನೋಡಿದರೂ ಬರಿಯ ಮಣ್ಣೇ ಆಗಿರುತ್ತದೆ. ಆದರಂತೆ ಸತ್ತಿನಿಂದ[2] ಹುಟ್ಟಿರುವ ಈ ಎಲ್ಲಕ್ಕೂ ಸತ್ತೇ ಆತ್ಮನು, (ಇದೆಲ್ಲವೂ) ಬರಿಯ ಸತ್ತೇ ಆಗಿರುತ್ತದೆ. ಸತ್ತಿಗಿಂತ ಬೇರೆಯಾಗಿ ಮತ್ತೇನೂ ಇಲ್ಲದಿರುವದರಿಂದ ಅದೇ ಸತ್ಯವು, ಅದು ತಾನು ಆತ್ಮನೇ ಆಗಿರುತ್ತದೆ ; ಆದ್ದರಿಂದ ಯಾವದು ಅತ್ಯಂತಶಾಂತವೂ ನಿರ್ಮಲವೂ ಆದ ತನಗೆರಡನೆಯದಿಲ್ಲದ ಪರಬ್ರಹ್ಮವಾಗಿರುವದೋ ಅದೇ ನೀನು.

ನಿದ್ರಾಕಲ್ಪಿತದೇಶಕಾಲವಿಷಯಜ್ಞಾತ್ರಾದಿ ಸರ್ವಂ ಯಥಾ
ಮಿಥ್ಯಾ ತದ್ವದಿಹಾಪಿ ಜಾಗ್ರತಿ ಜಗತ್ಸ್ವಾಜ್ಞಾನಕಾರ್ಯತ್ವತಃ ।
ಯಸ್ಮಾದೇವಮಿದಂ ಶರೀರಕರಣಪ್ರಾಣಾಹಮಾದ್ಯಪ್ಯಸತ್
ತಸ್ಮಾತ್ತತ್ತ್ವಮಸಿ ಪ್ರಶಾನ್ತಮಮಲಂ ಬ್ರಹ್ಮಾದ್ವಯಂ ಯತ್ಪರಮ್[3] ॥

೨೫೦. ನಿದ್ರೆಯಿಂದ ( ಕನಸಿನಲ್ಲಿ ) ಕಲ್ಪಿತವಾಗಿರುವ ದೇಶ, ಕಾಲ, ವಿಷಯ, ಜ್ಞಾತೃ–ಮುಂತಾದದ್ದೆಲ್ಲವೂ ಹೇಗೆ ಮಿಥ್ಯೆಯಾಗಿರುವದೋ ಆದರಂತೆ ಈ ಎಚ್ಚರದಲ್ಲಿಯೂ ಜಗತ್ತು ತನ್ನ ಅಜ್ಞಾನದ ಕಾರ್ಯವಾಗಿರುವದರಿಂದ ಮಿಥ್ಯೆಯೇ. ಹೀಗೆ ಈ ಶರೀರ, ಕರಣಗಳು, ಪ್ರಾಣ, ಅಹಂಕಾರ– ಮುಂತಾದದ್ದೆಲ್ಲವೂ ಅಸತ್ಯವಾಗಿರುವದಷ್ಟೆ ; ಆದ್ದರಿಂದ ಯಾವದು ಅತ್ಯಂತಶಾಂತವೂ ನಿರ್ಮಲವೂ ಆದ ತನಗೆರಡನೆಯದಿಲ್ಲದ ಪರಬ್ರಹ್ಮವಾಗಿರುವದೋ ಆದೇ ನೀನು.

---

1. ಘಟಕಲಶಶರಾವಾದಿಗಳೆಲ್ಲವೂ. ಶಂ. ೪–೪೪.

2. ಸದ್ರೂಪವಾದ ಬ್ರಹ್ಮದಿಂ .

3. 'ಯತ್ರ ಭ್ರಾನ್ತ್ಯಾ ಕಲ್ಪಿತಂ ತದ್ವಿವೇಕೇ ತತ್ತನ್ಮಾತ್ರಂ ನೈವ ತಸ್ಮಾ-ದ್ವಿಭಿನ್ನಮ್ । ಸ್ವಪ್ನೇ ನಷ್ಟೇ ಸ್ವಪ್ನವಿಶ್ವಂ ವಿಚಿತ್ರಂ ಸ್ವಸ್ಮಾದ್ಭಿನ್ನಂ ಕಿಂ ನು ದೃಷ್ಟಂ ಪ್ರಬೋಧೇ ॥ ' ಎಂಬ ಪ್ರಕ್ಷಿಪ್ತಶ್ಲೋಕವೊಂದು ಈ ಶ್ಲೋಕವಾದ ಮೇಲೆ ಕೆಲವು ಮುದ್ರಿತಪುಸ್ತಕಗಳಲ್ಲಿ ಇದೆ. ಯಾವದರಲ್ಲಿ ಯಾವದು ಭ್ರಾಂತಿಯಿಂದ ಕಲ್ಪಿತವಾಗಿರುತ್ತದೆಯೋ ಅದನ್ನು ವಿವೇಚಿಸಿಕೊಂಡರೆ ಅದದು ಮಾತ್ರವೇ. ಹೊರತು ಅದಕ್ಕಿಂತ ಭಿನ್ನವಾಗಿರುವದಿಲ್ಲ. ಸ್ವಪ್ನವು ಹೋದರೆ ವಿಚಿತ್ರವಾದ ಸ್ವಪ್ನಪ್ರಪಂಚವು ಎಚ್ಚರದಲ್ಲಿ ತನಗಿಂತ ವ್ಯತಿರಿಕ್ತವಾಗಿರುವದು ಕಂಡಿರುತ್ತದೆಯೇನು ?–ಎಂದು ಆ ಶ್ಲೋಕಕ್ಕೆ ಅರ್ಥ.

ಜಾತಿನೀತಿಕುಲಗೋತ್ರದೂರಗಂ
ನಾಮರೂಪಗುಣದೋಷವರ್ಜಿತಮ್ ।
ದೇಶಕಾಲವಿಷಯಾತಿವರ್ತಿ ಯದ್
ಬ್ರಹ್ಮ ತತ್ತ್ವಮಸಿ ಭಾವಯಾಽತ್ಮನಿ ॥೨೫೪॥

೨೫೪. ಜಾತಿ, ನೀತಿ, ಕುಲ, ಗೋತ್ರ– ಇವುಗಳಿಗೆ ದೂರವಾದ[1], ನಾಮ, ರೂಪ, ಗುಣ, ದೋಷ– ಇವುಗಳು ಯಾವವೂ ಇಲ್ಲದ[2], ದೇಶಕಾಲಗಳಿಗೆ ಗೋಚರವಾಗಿರುವದೆಲ್ಲವನ್ನೂ ಮೀರಿರುವ[3] ಬ್ರಹ್ಮವು ಯಾವದೋ ಅದೇ ನೀನಾಗಿರುವೆ ; ನಿನ್ನಲ್ಲಿ ನೀನೇ ತಿಳಿದು ನೋಡು.

ಯತ್ಪರಂ ಸಕಲವಾಗಗೋಚರಂ
ಗೋಚರಂ ವಿಮಲಬೋಧಚಕ್ಷುಷಃ ।
ಶುದ್ಧಚಿದ್ಘನಮನಾದಿವಸ್ತು ಯದ್
ಬ್ರಹ್ಮ ತತ್ತ್ವಮಸಿ ಭಾವಯಾಽತ್ಮನಿ ॥೨೫೫॥

೨೫೫. ಯಾವದು (ಎಲ್ಲಕ್ಕೂ) ಹೆಚ್ಚಿನದೋ, ಯಾವ ವಾಕ್ಕುಗಳಿಗೂ ಗೋಚರವಲ್ಲವೋ, ನಿರ್ಮಲವಾದ ಜ್ಞಾನವೆಂಬ ಕಣ್ಣಿಗೆ[4] ಗೋಚರವಾಗುವದೋ, ಯಾವದು ಶುದ್ಧವಾದ ಚಿದ್ಘನವಾಗಿರುವ ಅನಾದಿವಸ್ತುವೋ ಅದೇ ನೀನಾಗಿರುವೆ ; ನಿನ್ನಲ್ಲಿ ನೀನೇ ತಿಳಿದು ನೋಡು.

ಷಡ್ಭಿರೂರ್ಮಿಭಿರಯೋಗಿ ಯೋಗಿಹೃದ್-
ಭಾವಿತಂ ನ ಕರಣೈರ್ವಿಭಾವಿತಮ್ ।
ಬುದ್ಧ್ಯವೇದ್ಯಮನವದ್ಯಭೂತಿ ಯದ್
ಬ್ರಹ್ಮ ತತ್ತ್ವಮಸಿ ಭಾವಯಾಽತ್ಮನಿ ॥೨೫೬॥

---

1. ದೇಹಧರ್ಮಗಳು ಯಾವವೂ ಇಲ್ಲದ.

2. "ನಾಮ, ರೂಪ; ಗುಣ–ಎಂಬ ದೋಷವಿಲ್ಲದ" ಎಂದೂ ಇದನ್ನು ಕನ್ನಡಿಸಬಹುದು. ಶಂ. ಗೀ. ೧೩–೧೫ನ್ನು ನೋಡಿ.

3. ದೇಶ, ಕಾಲ, ವಿಷಯ–ಎಂದು ಹಿಂದಿನ ಶ್ಲೋಕದಲ್ಲಿ ಕನ್ನಡಿಸಿರುವದನ್ನು ಹೀಗೆಯೂ: ದೇಶಕಾಲಗಳಿಗೆ ಗೋಚರವಾಗಿರುವ ವಿಷಯ, ಎಂದು ಕನ್ನಡಿಸಬಹುದು.

4. ಶಂ. ಗೀ. ೧೮–೫೦.

೨೫೩. ಯಾವದು ಆರು ಊರ್ಮಿಗಳ[1] ಸಂಬಂಧವಿಲ್ಲದ್ದೋ, ಯೋಗಿಗಳ ಹೃದಯದಲ್ಲಿ ಧ್ಯಾನಕ್ಕೆ ಸಿಕ್ಕತಕ್ಕದ್ದೋ, ಕರಣಗಳಿಗೆ ಗೋಚರವಲ್ಲದ್ದೋ, ಬುದ್ಧಿಯಿಂದ ಅರಿಯುವದಕ್ಕೆ ಆಗದ್ದೋ, ಸ್ತುತ್ಯವಾದ ಐಶ್ವರ್ಯವುಳ್ಳದ್ದೋ ಆಗಿರುವ ಬ್ರಹ್ಮವೋ, ಅದೇ ನೀನಾಗಿರುವೆ ; ನಿನ್ನಲ್ಲಿ ನೀನೇ ತಿಳಿದುನೋಡು.

ಭ್ರಾನ್ತಿಕಲ್ಪಿತಜಗತ್ಕಲಾಶ್ರಯಂ
ಸ್ವಾಶ್ರಯಂ ಚ ಸದಸದ್ವಿಲಕ್ಷಣಮ್ ।
ನಿಷ್ಕಲಂ ನಿರುಪಮಾನವೃದ್ಧಿಮದ್[2]
ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥ ೨೫೪ ॥

೨೫೪. ಭ್ರಾಂತಿಯಿಂದ ಕಲ್ಪಿತವಾದ ಜಗತ್ತೆಂಬ ಅಂಶಕ್ಕೆ ಆಶ್ರಯವಾಗಿಯೂ ತನಗೆತಾನೇ ಆಶ್ರಯವಾಗಿಯೂ[3] ಸತ್ತು (ಕಾರ್ಯ), ಅಸತ್ತು (ಕಾರಣ) – ಇವೆರಡಕ್ಕಿಂತಲೂ ವಿಲಕ್ಷಣವಾಗಿಯೂ[4] ಯಾವ ಅವಯವಗಳೂ ಇಲ್ಲದೆ, ಯಾವದೊಂದು ಉಪಮಾನವನ್ನು ಕೊಡುವದಕ್ಕೂ ಆಗದ, ಐಶ್ವರ್ಯವುಳ್ಳ[5] ಬ್ರಹ್ಮವೇ ನೀನಾಗಿರುವೆ : ನಿನ್ನಲ್ಲಿ ನೀನೇ ತಿಳಿದುನೋಡು.

ಜನ್ಮವೃದ್ಧಿಪರಿಣತ್ಯಪಕ್ಷಯ–
ವ್ಯಾಧಿನಾಶನವಿಹೀನಮವ್ಯಯಮ್ ।
ವಿಶ್ವಸೃಷ್ಟ್ಯವನಘಾತಕಾರಣಂ[6]
ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥ ೨೫೫ ॥

೨೫೫. ಹುಟ್ಟುವದು, ಬೆಳೆಯುವದು, ಮಾರ್ಪಡುವದು, ಸೊರಗುವದು, ಬೇನೆಯಿಂದ ನರಳುವದು, ನಾಶವಾಗುವದು – (ಇವು ಯಾವದೊಂದೂ) ಇಲ್ಲದ, ಅವ್ಯಯವಾದ, ಪ್ರಪಂಚದ ಸೃಷ್ಟಿ, ಸ್ಥಿತಿ, ಲಯ – ಇವಕ್ಕೆ ಕಾರಣವಾಗಿರುವ ಬ್ರಹ್ಮವೇ ನೀನಾಗಿರುವೆ ; ನಿನ್ನಲ್ಲಿ ನೀನೇ ತಿಳಿದುನೋಡು.

ಅಸ್ತಭೇದಮನಪಾಸ್ತಲಕ್ಷಣಂ
ನಿಸ್ತರಙ್ಗಜಲರಾಶಿನಿಶ್ಚಲಮ್ ।

---

1. ಹಸಿವು, ಬಾಯಾರಿಕೆ, ಮುಪ್ಪು, ಸಾವು, ಶೋಕ, ಮೋಹ– ಎಂಬಿವುಗಳು.
2. ‘ ನಿರುಪಮಾನವದ್ಧಿ ಯತ್ ’ ಪಾ॥
3. ಛಾಂ. ೭–೨೪–೧.
4. ಶಂ. ಗೀ. ೧೮–೫೦ ; ಪ್ರಕೃತಿವಿಕೃತಿವಿಲಕ್ಷಣವೆಂಬುದಕ್ಕೆ ಇದೇ ಅರ್ಥ.
5. ನಿರುಪಮಾನವದ್ಧಿ ಯತ್ – ಎಂಬ ಪಾಠವಾದರೆ ‘ಉಪಮಾನವಿಲ್ಲದ್ದು’ ಎಂದೇ ಅರ್ಥ.
6. ‘ಸೃಷ್ಟ್ಯವವಿಘಾತ’ ಪಾ॥

ನಿತ್ಯಮುಕ್ತಮವಿಭಕ್ತಮೂರ್ತಿ ಯತ್
ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥ ೨೬೧ ॥

೨೬೧. ಯಾವುದು ಯಾವ ಭೇದವೂ ಇಲ್ಲದ, ಸ್ವರೂಪವು ನಾಶವಾಗದ, ತೆರೆಗಳಿಲ್ಲದ ಸಮುದ್ರದಂತೆ ನಿಶ್ಚಲವಾಗಿರುವ, ನಿತ್ಯಮುಕ್ತವಾದ, ಅವಿಭಕ್ತರೂಪವುಳ್ಳ[1] ಬ್ರಹ್ಮವೋ, ಅದೇ ನೀನು ; ನಿನ್ನಲ್ಲಿ ನೀನೇ ತಿಳಿದುನೋಡು.

ಏಕಮೇವ ಯದನೇಕಕಾರಣಂ
ಕಾರಣಾಂತರನಿರಾಸಕಾರಣಮ್ ।
ಕಾರ್ಯಕಾರಣವಿಲಕ್ಷಣಂ ಸ್ವಯಂ
ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥ ೨೬೨ ॥

೨೬೨. ತಾನೊಂದೇ ಆಗಿದ್ದು ಅನೇಕಕ್ಕೆ ಕಾರಣವಾಗಿಯೂ ಮಿಕ್ಕ ಕಾರಣವನ್ನು ಅಲ್ಲಗಳೆಯುವ ಕಾರಣವಾಗಿಯೂ[2] ತಾನು ಕಾರ್ಯಕಾರಣಗಳೆರಡರಿಂದಲೂ ವಿಲಕ್ಷಣವಾಗಿಯೂ[3] ಇರುವ ಬ್ರಹ್ಮವೇ ನೀನಾಗಿರುವೆ ; ನಿನ್ನಲ್ಲಿ ನೀನೇ ತಿಳಿದುನೋಡು.

ನಿರ್ವಿಕಲ್ಪಕಮನಲ್ಪಮಕ್ಷರಂ
ಯತ್ ಕ್ಷರಾಕ್ಷರವಿಲಕ್ಷಣಂ ಪರಮ್ ।
ನಿತ್ಯಮವ್ಯಯಸುಖಂ ನಿರಂಜನಂ
ಬ್ರಹ್ಮ ತತ್ತ್ವಮಸಿ ಭಾವಯಾತ್ಮನಿ ॥ ೨೬೩ ॥

೨೬೩. ಯಾವ ವಿಕಲ್ಪವೂ ಇಲ್ಲದೆ[4], ಅಲ್ಪವಲ್ಲದೆ[5] ನಾಶವಿಲ್ಲದ್ದಾಗಿ ಕ್ಷರ (ನಾಶವಾಗುವ ಭೂತಗಳು), ಅಕ್ಷರ (ಅವ್ಯಾಕೃತಗಳೆಂಬ ಅವುಗಳ ಬೀಜ) –

1. ಬ್ರಹ್ಮಾದಿಸ್ತಂಬಪರ್ಯಂತವಾದ ಪ್ರಾಣಿಗಳು ನಾಮರೂಪಗುಣಕ್ರಿಯಾಜಾತಿ ಸ್ವಭಾವಗಳಿಂದ ಒಂದಕ್ಕೊಂದು ಬೇರೆಯಾಗಿದ್ದರೂ ಅವುಗಳೆಲ್ಲವನ್ನೂ ಒಳಗೂ ಹೊರಗೂ ತಾನೊಂದೇ ಬೆಳಗುತ್ತಿರುವುದರಿಂದ ತಾನು ವಿಂಗಡವಾಗದೆ ಇರುವ ಸ್ವರೂಪವುಳ್ಳ ಎಂದರ್ಥ ಶಂ. ಗೀ. ೧೩–೧೬.

2. ತನಗೆ ಮತ್ತೊಂದು ಕಾರಣವಿಲ್ಲದ್ದಾಗಿ–ಎಂದರ್ಥ ಶಂ. ಗೀ. ೧೫–೮.

3. ಪ್ರಕೃತಿಯೆನಿಸುವ ಅವ್ಯಾಕೃತ, ವಿಕೃತಿಯಾದ ಮಹದಾದಿಗಳು– ಇವುಗಳಿಗಿಂತ ವಿಲಕ್ಷಣವಾಗಿ 'ನೇತಿ ನೇತಿ' ಎನಿಸಿಕೊಳ್ಳುವ ಸ್ವರೂಪದ–ಎಂದರ್ಥ. ಇಲ್ಲಿ ವಿಶೇಷಣಗಳ ಪುನರುಕ್ತಿಯು ಕಾಣುತ್ತದೆ. ಇದರಿಂದ ಮುಮುಕ್ಷುವಿಗೆ ಮತ್ತೆ ಮತ್ತೆ ಇವನ್ನು ಮನನಮಾಡಿಕೊಳ್ಳಬೇಕೆಂಬುದನ್ನು ನೆನಪಿಗೆ ತರುತ್ತದೆ.

4. ನಾನಾವಿಧವಿಶೇಷಗಳಿಲ್ಲದೆ ಎಂದರ್ಥ.

5. ಪರಿಚ್ಛಿನ್ನವಲ್ಲದೆ, 'ಭೂಮಾ' ಎಂದು ಶ್ರುತಿಸಿದ್ಧವಾಗಿರುವ.

ನನೆನದಕ್ಕಿಂತಲೂ ಬೇರೆಯೆನಿಸಿ[1] ಎಲ್ಲಕ್ಕೂ ಹೆಚ್ಚಿನದಾಗಿರುವದು ಯಾವದೋ, ನಿತ್ಯವೂ ನವೆಯದ ಆನಂದಸ್ವರೂಪವೂ ಮತ್ತೊಂದರ ಅಂಟಿಲ್ಲದ್ದೂ ಆಗಿರುವ (ಆ) ಬ್ರಹ್ಮವೇ ನೀನು; ನಿನ್ನಲ್ಲಿ ನೀನೇ ತಿಳಿದು ನೋಡು.

ಯದ್ವಿಭಾತಿ ಸದನೇಕದಾ ಭ್ರಮಾ-
ನ್ನಾಮರೂಪಗುಣವಿಕ್ರಿಯಾತ್ಮನಾ ।
ಹೇಮವತ್ ಸ್ವಯಮವಿಕ್ರಿಯಂ ಸದಾ
ಬ್ರಹ್ಮ ತತ್ತ್ವಮಸಿ ಭಾವಯಾಽಽತ್ಮನಿ ॥೨೫೯॥

೨೫೯. ಯಾವದು ಭ್ರಾಂತಿಯಿಂದ ನಾಮ, ರೂಪ, ಗುಣ, ಕ್ರಿಯೆ-ಇವುಗಳ ರೂಪದಿಂದ ಬಹುವಿಧವಾಗಿ ತೋರುತ್ತಿರುವದೋ ಆದರೂ (ಬಳೆ, ಕಿರೀಟ-ಮುಂತಾದವುಗಳ ರೂಪದಲ್ಲಿ ಕಾಣಿಸುವ) ಚಿನ್ನದಂತೆ[2] ತಾನು ಮಾತ್ರ ಯಾವ ವಿಕಾರವೂ ಇಲ್ಲದೆ ಇರುವದೋ, ಆ ಬ್ರಹ್ಮವೇ ನೀನಾಗಿರುವೆ; ನಿನ್ನಲ್ಲಿ ನೀನೇ ತಿಳಿದು ನೋಡು.

ಯಚ್ಚಕಾಸ್ತ್ಯನಪರಂ ಪರಾತ್ಪರಂ
ಪ್ರತ್ಯಗೇಕರಸಮಾತ್ಮಲಕ್ಷಣಮ್ ।
ಸತ್ಯಚಿತ್ಸುಖಮನನ್ತಮವ್ಯಯಂ
ಬ್ರಹ್ಮ ತತ್ತ್ವಮಸಿ ಭಾವಯಾಽಽತ್ಮನಿ ॥೨೬೦॥

೨೬೦. ಯಾವದು ಹೆಚ್ಚಿನದಕ್ಕಿಂತಲೂ ಹೆಚ್ಚಿನದಾಗಿ[3] ತನಗಿಂತ ಹೆಚ್ಚಿನದಿಲ್ಲದೆ[4] ಬೆಳಗುತ್ತಿರುವದೋ, ಒಳಗಿರುವ ಚಿದೇಕರಸವಾಗಿ ಆತ್ಮಸ್ವರೂಪವಾಗಿರುವದೋ, ಸಚ್ಚಿದಾನಂದಾನಂತವಾಗಿ ಅವ್ಯಯವಾಗಿರುವದೋ ಆ ಬ್ರಹ್ಮವೇ ನೀನಾಗಿರುವೆ; ನಿನ್ನಲ್ಲಿ ನೀನೇ ತಿಳಿದು ನೋಡು.

ಉಕ್ತಮರ್ಥಮಿಮಮಾತ್ಮನಿ ಸ್ವಯಂ
ಭಾವಯ ಪ್ರಥಿತಯುಕ್ತಿಭಿರ್ಧಿಯಾ ।
ಸಂಶಯಾದಿರಹಿತಂ ಕರಾಮ್ಬುವತ್
ತೇನ ತತ್ತ್ವನಿಗಮೋ ಭವಿಷ್ಯತಿ ॥೨೬೧॥

೨೬೧. ಇಲ್ಲಿ ಹೇಳಿರುವ ಈ ವಿಷಯವನ್ನು ಪ್ರಸಿದ್ಧಯುಕ್ತಿಗಳಿಂದ ನಿನ್ನಲ್ಲಿಯೇ ಮನನಮಾಡುತ್ತಿರು; ಅದರಿಂದ ಸಂಶಯವೇ ಮುಂತಾದದ್ದಿಲ್ಲದೆ[5] ಕೈಯಲ್ಲಿರುವ ನೀರಿನಂತೆ ತತ್ತ್ವನಿಶ್ಚಯವಾಗುವದು.

---

1. ಶಂ. ಗೀ. ೧೫-೧೮.　　2. ಶಂ. ಗೀ. ೪-೧೬.
3. ಹಿರಣ್ಯಗರ್ಭನಿಗಿಂತಲೂ ಹೆಚ್ಚಿನ.
4. ಎಲ್ಲಕ್ಕೂ ಹೆಚ್ಚಿನ, ಎಲ್ಲವನ್ನೂ ಕಾಣುತ್ತಿರುವ, ಶಂ. ಗೀ. ೬-[illegible]೨.
5. ಮುಂತಾದವು ಎಂದರೆ ಅಭಾವನೆ, ಅಸಂಭಾವನೆ, ವಿಪರೀತಭಾವನೆಗಳು.

## ಸ್ವಭಾವನೆಯ ಉಪಸಂಹಾರ

ಸಂಬೋಧಮಾತ್ರಂ[1] ಪರಿಶುದ್ಧತತ್ತ್ವಂ
ವಿಜ್ಞಾಯ ಸದ್ಯೋ ನೃಪವಚ್ಚ ಸೈನ್ಯೇ ।
ತದಾತ್ಮನೈವಾತ್ಮನಿ[2] ಸರ್ವದಾ ಸ್ಥಿತೋ
ವಿಲಾಪಯ ಬ್ರಹ್ಮಣಿ ದೃಶ್ಯಜಾತಮ್ ॥೨೬೩॥

೨೬೩. ಸೈನ್ಯದಲ್ಲಿರುವ ರಾಜನನ್ನು (ಅರಿತುಕೊಳ್ಳುವಂತೆ[3]) ಈ ಕಾರ್ಯಕರಣಗಳ) ಸಂಘಾತದಲ್ಲಿ ಚೈತನ್ಯಮಾತ್ರವಾಗಿ[4] ಪರಿಶುದ್ಧವಾಗಿರುವ ತತ್ತ್ವವನ್ನು ಅರಿತುಕೊಂಡು ಅದರ ರೂಪದಿಂದಲೇ ನೀನು ನಿನ್ನಲ್ಲಿಯೇ ಯಾವಾಗಲೂ ಇದ್ದುಕೊಂಡು[5] ಬ್ರಹ್ಮದಲ್ಲಿ ದೃಶ್ಯಸಮೂಹವನ್ನೆಲ್ಲವನ್ನೂ ಲಯಮಾಡಿಕೊ.

ಬುದ್ಧೌ ಗುಹಾಯಾಂ ಸದಸದ್ವಿಲಕ್ಷಣಂ
ಬ್ರಹ್ಮಾಸ್ತಿ ಸತ್ಯಂ ಪರಮದ್ವಿತೀಯಮ್ ।
ತದಾತ್ಮನಾ ಯೋಽತ್ರ ವಸೇದ್ಗುಹಾಯಾಂ
ಪುನರ್ನ ತಸ್ಯಾಂಗಗುಹಾಪ್ರವೇಶಃ ॥೨೬೪॥

೨೬೪. ಬುದ್ಧಿಯಲ್ಲಿರುವ ಗುಹೆಯಲ್ಲಿ[6] ಸದಸದ್ವಿಲಕ್ಷಣವಾದ ಸತ್ಯವೂ ಅದ್ವಿತೀಯವೂ ಆದ ಪರಬ್ರಹ್ಮವಿರುತ್ತದೆ. ಅದರ ರೂಪದಿಂದಲೇ ಈ ಗುಹೆಯಲ್ಲಿ ಯಾವನು ವಾಸಮಾಡಿಕೊಂಡಿರುವನೋ ಅವನಿಗೆ ಮತ್ತೆ ಶರೀರವೆಂಬ ಗುಹೆಯು[7] ಪ್ರವೇಶವಾಗುವದಿಲ್ಲ.

---

1. "ಸ್ವಂ ಬೋಧಮಾತ್ರಮ್" ಪಾ॥
2. 'ತದಾಶ್ರಯಃ ಸ್ವಾತ್ಮನಿ' ಪಾ॥
3. ಛತ್ರಚಾಮರಾದಿಚಿಹ್ನೆಗಳಿಂದ ಗುರುತಿಸುವಂತೆ ಎಂದರ್ಥ.
4. "ಸ್ವಂ ಬೋಧಮಾತ್ರಂ" ಎಂಬ ಪಾಠಕ್ಕೆ "ಚೈತನ್ಯಮಾತ್ರವಾಗಿರುವ ಪರಿಶುದ್ಧವಾದ ತನ್ನ ಆತ್ಮನನ್ನು" ಎಂದು ಕನ್ನಡಿಸಬೇಕಾಗುವದು.
5. "ತದಾಶ್ರಯಃ ಸ್ವಾತ್ಮನಿ" ಎಂಬ ಪಾಠಕ್ಕೆ 'ಆ ಆತ್ಮನನ್ನೇ ಆಶ್ರಯಿಸಿಕೊಂಡು ನಿನ್ನ ಆತ್ಮನಲ್ಲಿಯೇ ಇದ್ದುಕೊಂಡು' ಎಂದರ್ಥ.
6. [illegible]ನೆಯ ಶ್ಲೋಕವನ್ನೂ ಅದರ ಟಿಪ್ಪಣಿಯನ್ನೂ ನೋಡಿರಿ.
7. ಶರೀರವನ್ನು ಗುಹೆಯೆಂದು ಕರೆಯುವ ವಾಡಿಕೆ ವೇದಾಂತದಲ್ಲಿದೆ.

# ೭. ವಾಸನಾದಿಗಳನ್ನು ಪರಿಹರಿಸಿಕೊಳ್ಳುವದು

## ವಾಸನಾತ್ಯಾಗ

ಜ್ಞಾತೇ ವಸ್ತುನ್ಯಪಿ ಬಲವತೀ ವಾಸನಾಽನಾದಿರೇಷಾ
ಕರ್ತಾ ಭೋಕ್ತಾಽಪ್ಯಹಮಿತಿ ದೃಢಾ ಯಾಽಸ್ಯ ಸಂಸಾರಹೇತುಃ ।
ಪ್ರತ್ಯಗ್ದೃಷ್ಟ್ಯಾಽಽತ್ಮನಿ ನಿವಸತಾ ಸಾಪನೇಯಾ ಪ್ರಯತ್ನಾ-
ನ್ಮುಕ್ತಿಂ ಪ್ರಾಹುಸ್ತದಿಹ ಮುನಯೋ ವಾಸನಾತಾನವಂ ಯತ್ ॥೨೬೪॥

೨೬೪. ಆತ್ಮವಸ್ತುವನ್ನು ತಿಳಿದುಕೊಂಡಮೇಲೂ[1] ನಾನು ಕರ್ತನೂ ಭೋಕ್ತನೂ ಆಗಿರುವೆನೆಂಬ ಈ ಅನಾದಿವಾಸನೆಯು ಬಲವಾಗಿರುತ್ತದೆ ; ಇದೇ ಈ (ಜೀವನ) ಸಂಸಾರಕ್ಕೆ ಕಾರಣವಾಗಿರುತ್ತದೆ. ಪ್ರತ್ಯಗಾತ್ಮನೇ (ತಾನೆಂಬ) ದೃಷ್ಟಿಯಿಂದ ಆತ್ಮನಲ್ಲಿಯೇ ನೆಲೆಸಿ ಅದನ್ನು ಪ್ರಯತ್ನಪೂರ್ವಕವಾಗಿ ತೊಲಗಿಸಿಕೊಳ್ಳಬೇಕು.[2] ವಾಸನೆಯನ್ನು ಸವೆಯಿಸುವದನ್ನೇ ಈ ಲೋಕದಲ್ಲಿ ಮುನಿಗಳು[3] ಮುಕ್ತಿಯೆಂದು ಕರೆಯುತ್ತಾರೆ.

ಅಹಂ ಮಮೇತಿ ಯೋ ಭಾವೋ ದೇಹಾಕ್ಷಾದಾವನಾತ್ಮನಿ ।
ಅಧ್ಯಾಸೋಽಯಂ ನಿರಸ್ತವ್ಯೋ ವಿದುಷಾ ಸ್ವಾತ್ಮನಿಷ್ಠಯಾ ॥೨೬೫॥

೨೬೫. ಅನಾತ್ಮವಾದ ದೇಹ, ಇಂದ್ರಿಯಗಳು- ಮುಂತಾದವುಗಳಲ್ಲಿ 'ನಾನು', 'ನನ್ನದು' ಎಂಬ ಭಾವವುಂಟಷ್ಟೆ ; ಅಧ್ಯಾಸವನ್ನು ಜಾಣನಾದವನು ಆತ್ಮನಿಷ್ಠೆಯಿಂದ ಪರಿಹರಿಸಿಕೊಳ್ಳಬೇಕು[4].

ಜ್ಞಾತ್ವಾ ಸ್ವಂ ಪ್ರತ್ಯಗಾತ್ಮಾನಂ ಬುದ್ಧಿತದ್ವೃತ್ತಿಸಾಕ್ಷಿಣಮ್ ।
ಸೋಽಹಮಿತ್ಯೇವ ಸದ್ವೃತ್ತ್ಯಾಽನಾತ್ಮನ್ಯಾತ್ಮಮತಿಂ ಜಹಿ ॥೨೬೬॥

೨೬೬. ಬುದ್ಧಿಗೂ ಅದರ ವೃತ್ತಿಗಳಿಗೂ ಸಾಕ್ಷಿಯಾದ ತನ್ನ ಒಳಗಿನ ಆತ್ಮನನ್ನು 'ಅವನೇ ನಾನು' ಎಂಬ ಉತ್ತಮವಾದ ವೃತ್ತಿಯಿಂದ ಅರಿತುಕೊಂಡು ಅನಾತ್ಮದಲ್ಲಿ ಆತ್ಮನೆಂಬ ಭಾವವನ್ನು ಕಳೆದುಕೊ.

---

1. ಆತ್ಮತತ್ತ್ವವನ್ನು ಚೆನ್ನಾಗಿ ಅರಿತುಕೊಂಡಮೇಲೂ—ಎಂದರ್ಥ.
2. ಇದೇ 'ಸವಿಕಲ್ಪಸಮಾಧಿ' ಎಂದು ಶಂ. ಗೀ. ೫–೨.
3. ವಸಿಷ್ಠರೇ ಮುಂತಾದವರು. ಯೋ. ವಾ. ಮು. ೩–೫.
4. ವಾಸನಾಕ್ಷಯಕ್ಕೆ ಇದೇ ಉಪಾಯವೆಂಬುದನ್ನು ಮುಂದಿನ ಪ್ರಘಟ್ಟದಲ್ಲಿಯೂ ಹೇಳಿದೆ.

೨೭೪. ಯೋಗಿಯಾದವನ ಮನಸ್ಸು ತನ್ನ ಸ್ವರೂಪದಲ್ಲಿಯೇ ಇದ್ದುಕೊಂಡಿರುವುದರಿಂದ ನಾಶವಾಗುತ್ತದೆ, ವಾಸನೆಗಳ ಕ್ಷಯವೂ ಆಗುತ್ತದೆ. ಆದ್ದರಿಂದ ನಿನ್ನಲ್ಲುಂಟಾಗಿರುವ ಅಧ್ಯಾಸವನ್ನು ಕಳೆದುಕೊ.

**ತಮೋ ದ್ವಾಭ್ಯಾಂ ರಜಃ ಸತ್ತ್ವಾತ್ ಸತ್ತ್ವಂ ಶುದ್ಧೇನ ನಶ್ಯತಿ ।**
**ತಸ್ಮಾತ್ ಸತ್ತ್ವಮವಷ್ಟಭ್ಯ ಸ್ವಾಧ್ಯಾಸಾಪನಯಂ ಕುರು ॥೨೭೫॥**

೨೭೫. ತಮೋಗುಣವು ಮಿಕ್ಕೆರಡು ಗುಣಗಳಿಂದಲೂ, ರಜಸ್ಸು ಸತ್ತ್ವಗುಣದಿಂದಲೂ, ಸತ್ತ್ವವು ಶುದ್ಧಸತ್ತ್ವದಿಂದಲೂ[2] ನಾಶವಾಗುತ್ತದೆ. ಆದ್ದರಿಂದ (ಶುದ್ಧ)ಸತ್ತ್ವವನ್ನು ಆಶ್ರಯಿಸಿಕೊಂಡು ನಿನ್ನಲ್ಲುಂಟಾಗಿರುವ ಅಧ್ಯಾಸವನ್ನು ಕಳೆದುಕೊ.

**ಪ್ರಾರಬ್ಧಂ ಪುಷ್ಯತಿ ವಪುರಿತಿ ನಿಶ್ಚಿತ್ಯ ನಿಶ್ಚಲಃ ।**
**ಧೈರ್ಯಮಾಲಂಬ್ಯ ಯತ್ನೇನ ಸ್ವಾಧ್ಯಾಸಾಪನಯಂ ಕುರು ॥೨೭೬॥**

೨೭೬. ಪ್ರಾರಬ್ಧಕರ್ಮವು ಶರೀರವನ್ನು ಪೋಷಣೆಮಾಡುತ್ತದೆ ಎಂದು ನಿಶ್ಚಯಿಸಿ[3] ನಿಶ್ಚಲಭಾವದಿಂದ ಎದೆಗೊಂಡು ನಿನ್ನಲ್ಲುಂಟಾಗಿರುವ ಅಧ್ಯಾಸವನ್ನು ಯತ್ನದಿಂದ ಕಳೆದುಕೊ

**ನಾಹಂ ಜೀವಃ ಪರಂ ಬ್ರಹ್ಮೇತ್ಯತದ್ವ್ಯಾವೃತ್ತಿಪೂರ್ವಕಮ್ ।**
**ವಾಸನಾವೇಗತಃ ಪ್ರಾಪ್ತಸ್ವಾಧ್ಯಾಸಾಪನಯಂ ಕುರು ॥೨೭೭॥**

೨೭೭. 'ನಾನು ಜೀವನಲ್ಲ, ಪರಬ್ರಹ್ಮವೇ' ಎಂದು ನಿನ್ನದಲ್ಲದ ರೂಪವನ್ನು ತಳ್ಳಿಗಳೆಯುವ ಮೂಲಕ ವಾಸನೆಯ ಸೆಳವಿನಿಂದ ನಿನ್ನಲ್ಲುಂಟಾಗಿರುವ ಅಧ್ಯಾಸವನ್ನು ಕಳೆದುಕೊ.

**ಶ್ರುತ್ಯಾ ಯುಕ್ತ್ಯಾ ಸ್ವಾನುಭೂತ್ಯಾ ಜ್ಞಾತ್ವಾ ಸಾರ್ವಾತ್ಮ್ಯಮಾತ್ಮನಃ ।**
**ಕ್ವಚಿದಾಭಾಸತಃ ಪ್ರಾಪ್ತಸ್ವಾಧ್ಯಾಸಾಪನಯಂ ಕುರು ॥೨೭೮॥**

1. ಮನೋನಾಶ, ವಾಸನಾಕ್ಷಯ— ಇವುಗಳ ವಿಷಯಕ್ಕೆ ಯೋ. ವಾ. ಉಪ. ೯ನೆಯ ಸರ್ಗವನ್ನು ನೋಡಿರಿ. ಶಂ. ಗೀ. ೧೪-೨.

2. [illegible]ನೆಯ ಶ್ಲೋಕದಲ್ಲಿ ವಿಶುದ್ಧಸತ್ತ್ವವನ್ನು ವರ್ಣಿಸಿದೆ.

3. ಇಲ್ಲಿ ಹೇಳಿರುವ ಅಧ್ಯಾಸಾಪನಯವು ಧ್ಯಾನದಿಂದ ಉಂಟಾಗುವ ಆತ್ಮನಿಷ್ಠೆಯಿಂದ [illegible] ಎಂಬುದಕ್ಕೆ ಇದೊಂದು ಗಮಕವು. ಆಗುವದು ಆಗಿಯೇ ತೀರುತ್ತದೆ ಎಂಬ ದೃಢಬುದ್ಧಿಯಿಂದ ಉಪಾಧಿಯನ್ನು ಪ್ರಾರಬ್ಧಕ್ಕೆ ಸಮರ್ಪಿಸಿ ತಾನು ನಿರ್ವಿಶೇಷವಾದ ಬ್ರಹ್ಮಾಕಾರದಲ್ಲಿಯೇ ನಿಲ್ಲಬೇಕು— ಎಂದು ಶಂ. ಗೀ. ೪-೨೦ರಲ್ಲಿ ಹೇಳಿರುವದನ್ನು ಇದಕ್ಕೆ ಹೋಲಿಸಿ.

೨೮೮. ಶ್ರುತಿಯಿಂದಲೂ ಯುಕ್ತಿಯಿಂದಲೂ ಸ್ವಂತವಾದ ಅನುಭವದಿಂದಲೂ ನಾನು ಸರ್ವಾತ್ಮನು ಎಂದರಿತುಕೊಂಡು ಎಲ್ಲಿಯೋ ಒಂದೊಂದು ಕಾಲದಲ್ಲಿ ತೋರಿಕೆಯಿಂದ[1] ನಿನ್ನಲ್ಲುಂಟಾಗಬಹುದಾದ ಅಧ್ಯಾಸವನ್ನು ಕಳೆದುಕೊ.

ಅನಾದಾನವಿಸರ್ಗಾಭ್ಯಾಮೀಷನ್ನಾಸ್ತಿ ಕ್ರಿಯಾ ಮುನೇಃ ।
ತದೇಕನಿಷ್ಠಯಾ ನಿತ್ಯಂ ಸ್ವಾಧ್ಯಾಸಾಪನಯಂ ಕುರು ॥ ೨೮೯ ॥

೨೮೯. ಮುನಿಯಾದವನಿಗೆ ತೆಗೆದುಕೊಳ್ಳಬೇಕಾದದ್ದಾಗಲಿ ಬಿಡಬೇಕಾದದ್ದಾಗಲಿ ಇಲ್ಲದಿರುವದರಿಂದ ಒಂದಿಷ್ಟೂ ಕರ್ತವ್ಯವೆಂಬುದಿರುವದಿಲ್ಲ ; ಆದ್ದರಿಂದ ಯಾವಾಗಲೂ ಏಕನಿಷ್ಠೆಯಿಂದಿದ್ದುಕೊಂಡು ನಿನ್ನಲ್ಲುಂಟಾಗಿರುವ ಅಧ್ಯಾಸವನ್ನು ಕಳೆದುಕೊ.

ತತ್ತ್ವಮಸ್ಯಾದಿವಾಕ್ಯೋತ್ಥಬ್ರಹ್ಮಾತ್ಮೈಕತ್ವಬೋಧತಃ ।
ಬ್ರಹ್ಮಣ್ಯಾತ್ಮತ್ವದಾರ್ಢ್ಯಾಯ ಸ್ವಾಧ್ಯಾಸಾಪನಯಂ ಕುರು ॥ ೨೯೦ ॥

೨೯೦. 'ತತ್ತ್ವಮಸಿ' ಮುಂತಾದ ವಾಕ್ಯಗಳಿಂದ ಬ್ರಹ್ಮಾತ್ಮೈಕತ್ವಜ್ಞಾನವಾಗಿರುವದರಿಂದ ಬ್ರಹ್ಮವೇ ಆತ್ಮನೆಂಬುದನ್ನು ಗಟ್ಟಿಗೊಳಿಸಿಕೊಳ್ಳುವದಕ್ಕಾಗಿ ನಿನ್ನಲ್ಲುಂಟಾಗಿರುವ ಅಧ್ಯಾಸವನ್ನು ಕಳೆದುಕೊ.

ಅಹಂಭಾವಸ್ಯ ದೇಹೇಽಸ್ಮಿನ್ನಿಶ್ಶೇಷವಿಲಯಾವಧಿ ।
ಸಾವಧಾನೇನ ಯುಕ್ತಾತ್ಮಾ ಸ್ವಾಧ್ಯಾಸಾಪನಯಂ ಕುರು ॥ ೨೯೧ ॥

೨೯೧. ಈ ದೇಹದಲ್ಲಿ ನಾನೆಂಬ ಭಾವವು ಒಂದಿಷ್ಟೂ ಉಳಿಯದಂತೆ ಅಡಗಿಹೋಗುವವರೆಗೂ (ಚಿತ್ತದಲ್ಲಿ) ಅವಧಾನವುಳ್ಳವನಾಗಿ ನಿನ್ನಲ್ಲುಂಟಾಗಿರುವ ಅಧ್ಯಾಸವನ್ನು ಕಳೆದುಕೊ.

ಪ್ರತೀತಿರ್ಜೀವಜಗತೋಃ ಸ್ವಪ್ನವದ್ಭಾತಿ ಯಾವತಾ ।
ತಾವನ್ನಿರನ್ತರಂ ವಿದ್ವನ್ ಸ್ವಾಧ್ಯಾಸಾಪನಯಂ ಕುರು ॥ ೨೯೨ ॥

೨೯೨. ಜೀವಜಗತ್ತುಗಳ ಪ್ರತೀತಿಯು ಕನಸಿನಂತೆ ತೋರುವವರೆಗೂ ಎಡೆಬಿಡದೆ, ಎಲೈ ಜಾಣನೆ, ನಿನ್ನಲ್ಲುಂಟಾಗಿರುವ ಅಧ್ಯಾಸವನ್ನು ಕಳೆದುಕೊ.

## ಬ್ರಹ್ಮಾತ್ಮಭಾವನೆ

ನಿದ್ರಾಯಾ ಲೋಕವಾರ್ತಾಯಾಃ ಶಬ್ದಾದೇರಪಿ ವಿಸ್ಮೃತೇಃ ।
ಕ್ವಚಿನ್ನಾವಸರಂ ದತ್ವಾ ಚಿನ್ತಯಾತ್ಮಾನಮಾತ್ಮನಿ ॥ ೨೯೩ ॥

1. ಆತ್ಮನಿಷ್ಠನಾದವನಿಗೆ ಒಂದೊಂದು ಸಲ ಅಭಾಸವಾಗಿ ತೋರುವ ವಿಷಯಗಳಲ್ಲಿಯೂ ಕರ್ಮದಲ್ಲಿಯೂ ಇಂದ್ರಿಯವ್ಯಾಪಾರದಲ್ಲಿಯೂ ತತ್ತ್ವಬುದ್ಧಿಯನ್ನು ಮಾಡದೆ ಬ್ರಹ್ಮದಲ್ಲಿ ಪ್ರವಿಲಯಮಾಡಿಕೊಳ್ಳುವದೇ ಈ ಅಧ್ಯಾಸಾಪನಯವು. ಶಂ. ಗೀ. ೬-೪

೨೮೩. ನಿದ್ರೆಯಿಂದಲಾಗಲಿ ಲೋಕವಾರ್ತೆಯಿಂದಲಾಗಲಿ ಶಬ್ದವೇ ಮುಂತಾದ ವಿಷಯಗಳಿಂದಲಾಗಲಿ ಆತ್ಮನ ಮರೆಹು ಉಂಟಾಗುವದಕ್ಕೆ ಇಂಬು ಗೊಡದೆ ಆತ್ಮನನ್ನೇ ಚಿತ್ತದಲ್ಲಿ ಚಿಂತಿಸುತ್ತಿರು.

**ಮಾತಾಪಿತ್ರೋರ್ಮಲೋದ್ಭೂತಂ ಮಲಮಾಂಸಮಯಂ ವಪುಃ ।**
**ತ್ಯಕ್ತ್ವಾ ಚಾಣ್ಡಾಲವದ್ ದೂರಂ ಬ್ರಹ್ಮೀಭೂಯ ಕೃತೀ ಭವ ॥೨೮೪॥**

೨೮೪. ತಂದೆತಾಯಿಗಳ ಮಲದಿಂದ ಉಂಟಾಗಿ ಕಶ್ಮಲದಿಂದಲೂ ಮಾಂಸದಿಂದಲೂ ತುಂಬಿರುವ ಶರೀರವನ್ನು ಚಂಡಾಲನನ್ನು (ದೂರವಾಗಿರಿಸು)ವಂತೆ ದೂರವಾಗಿ ಬಿಟ್ಟು ಬ್ರಹ್ಮವೇ ಆಗಿ ಕೃತಕೃತ್ಯನಾಗು.

**ಘಟಾಕಾಶಂ ಮಹಾಕಾಶ ಇವಾತ್ಮಾನಂ ಪರಾತ್ಮನಿ ।**
**ವಿಲಾಪ್ಯಾಖಣ್ಡಭಾವೇನ ತೂಷ್ಣೀಂ ಭವ ಸದಾ ಮುನೇ ॥೨೮೫॥**

೨೮೫. ಎಲೈ ಮುನಿಯೆ, ಗಡಿಗೆಯ ಆಕಾಶವನ್ನು ವಿಶಾಲವಾದ ಆಕಾಶದಲ್ಲಿ ಅಡಗಿಸುವಂತೆ ಆತ್ಮನನ್ನು ಪರಮಾತ್ಮನಲ್ಲಿ ಲಯಮಾಡಿಕೊಂಡು ಯಾವಾಗಲೂ ಅಖಂಡಭಾವದಿಂದ ಸುಮ್ಮನೆ ಇದ್ದುಕೊಂಡಿರು.

**ಸ್ವಪ್ರಕಾಶಮಧಿಷ್ಠಾನಂ ಸ್ವಯಂಭೂಯ ಸದಾತ್ಮನಾ**
**ಬ್ರಹ್ಮಾಣ್ಡಮಪಿ ಪಿಣ್ಡಾಣ್ಡಂ ತ್ಯಜ್ಯತಾಂ ಮಲಭಾಣ್ಡವತ್ ॥೨೮೬॥**

೨೮೬. (ಎಲ್ಲಕ್ಕೂ) ಅಧಿಷ್ಠಾನವಾಗಿ ತಾನೇ ಬೆಳಗುತ್ತಿರುವ ಬ್ರಹ್ಮವೇ ಸದ್ರೂಪದಿಂದ ನೀನಾಗಿ ಬ್ರಹ್ಮಾಂಡವನ್ನೂ ಪಿಂಡಾಂಡವನ್ನೂ ಮಲಪೂರ್ಣವಾದ ಪಾತ್ರೆಯನ್ನು ಬಿಡುವಂತೆ ಬಿಟ್ಟುಬಿಡು!

**ಚಿದಾತ್ಮನಿ ಸದಾನನ್ದೇ ದೇಹಾರೂಢಾಮಹಂಧಿಯಮ್ ।**
**ನಿವೇಶ್ಯ ಲಿಙ್ಗಮುತ್ಸೃಜ್ಯ ಕೇವಲೋ ಭವ ಸರ್ವದಾ ॥೨೮೭॥**

೨೮೭. ದೇಹದಲ್ಲಿ ಹತ್ತಿಕೊಂಡಿರುವ ನಾನೆಂಬ ಬುದ್ಧಿಯನ್ನು ಸದಾನಂದರೂಪನಾದ ಚಿದ್ರೂಪಾತ್ಮನಲ್ಲಿ ಇಟ್ಟುಕೊಂಡು, ಲಿಂಗದೇಹವನ್ನೂ ಬಿಟ್ಟು ಯಾವಾಗಲೂ ಅದ್ವಿತೀಯನಾಗಿರು.

**ಯತ್ರೈಷ ಜಗದಾಭಾಸೋ ದರ್ಪಣಾನ್ತಃಪುರಂ ಯಥಾ ।**
**ತದ್ಬ್ರಹ್ಮಾಹಮಿತಿ ಜ್ಞಾತ್ವಾ ಕೃತಕೃತ್ಯೋ ಭವಿಷ್ಯಸಿ ॥೨೮೮॥**

೨೮೮. ಕನ್ನಡಿಯಲ್ಲಿರುವ ಪುರದಂತೆ[1] ಯಾವದರಲ್ಲಿ ಈ ಜಗತ್ತು ತೋರುತ್ತಿರುವದೋ ಆ ಬ್ರಹ್ಮವೇ ನಾನು ಎಂದರಿತುಕೊಂಡರೆ ಕೃತಕೃತ್ಯನಾಗುವೆ.

1 ದಕ್ಷಿಣಾಮೂರ್ತಿಸ್ತೋತ್ರದ ಒಂದನೆಯ ಶ್ಲೋಕದ ನೆನಪನ್ನು ಕೊಡುತ್ತದೆ

ಯತ್ಸತ್ಯಭೂತಂ ನಿಜರೂಪಮಾದ್ಯಂ
ಚಿದದ್ವಯಾನನ್ದಮರೂಪಮಕ್ರಿಯಮ್ ।
ತದೇತ್ಯ ಮಿಥ್ಯಾವಪುರುತ್ಸೃಜೈತ-[1]
ಚ್ಛೈಲೂಷವದ್ವೇಷಮುಪಾತ್ತಮಾತ್ಮನಃ ॥೨೮೯॥

೨೮೯. ಯಾವದು ಸತ್ಯವಾಗಿಯೂ ಚೈತನ್ಯವೂ ಅದ್ವಿತೀಯವೂ ಆನಂದ ರೂಪವೂ ರೂಪರಹಿತವೂ ಕ್ರಿಯಾರಹಿತವೂ ಆಗಿರುವ ನಿನ್ನ ಮೊದಲಿನ ರೂಪವೋ ಅದನ್ನು ಪಡೆದುಕೊಂಡು ನಟನಂತೆ ಈ ನೀನು ಹಾಕಿಕೊಂಡಿರುವ ಮಿಥ್ಯಾದೇಹವೆಂಬ ವೇಷವನ್ನು ತೆಗೆದುಹಾಕು[2].

## ಅಹಂಪದಾರ್ಥ

ಸರ್ವಾತ್ಮನಾ ದೃಶ್ಯಮಿದಂ ಮೃಷೈವ
ನೈವಾಹಮರ್ಥಃ ಕ್ಷಣಿಕತ್ವದರ್ಶನಾತ್ ।
ಜಾನಾಮ್ಯಹಂ ಸರ್ವಮಿತಿ ಪ್ರತೀತಿಃ
ಕುತೋಽಹಮಾದೇಃ ಕ್ಷಣಿಕಸ್ಯ ಸಿಧ್ಯೇತ್ ॥೨೯೦॥

೨೯೦. ಈ (ಅಹಂಕಾರಾದಿ)ದೃಶ್ಯವು ಹೇಗೆ ನೋಡಿದರೂ ಮಿಥ್ಯೆಯೇ, ನಾನೆಂಬ ಪದಾರ್ಥವೇ ಅಲ್ಲ; ಏಕೆಂದರೆ ಇದು ಕ್ಷಣಿಕವಾಗಿರುವದು ಕಂಡು ಬರುತ್ತದೆ. ನಾನು ಎಲ್ಲವನ್ನೂ ಅರಿಯುತ್ತಿದೇನೆಂಬ ಪ್ರತೀತಿಯು ಕ್ಷಣಿಕವಾದ[3] ಅಹಂಕಾರಾದಿಗಳಿಗೆ ಹೇಗೆ ಸಿದ್ಧಿಸೀತು[4] ?

ಅಹಂಪದಾರ್ಥಸ್ತ್ವಹಮಾದಿಸಾಕ್ಷೀ
ನಿತ್ಯಂ ಸುಷುಪ್ತಾವಪಿ ಭಾವದರ್ಶನಾತ್ ।
ಬ್ರೂತೇ ಹ್ಯಜೋ ನಿತ್ಯ ಇತಿ ಶ್ರುತಿಃ ಸ್ವಯಂ
ತತ್ಪ್ರತ್ಯಗಾತ್ಮಾ ಸದಸದ್ವಿಲಕ್ಷಣಃ ॥೨೯೦॥

೨೯೧. ನಿಜವಾದ ಅಹಂಪದಾರ್ಥವಾದರೋ ಅಹಂಕಾರವೇ ಮುಂತಾದದ್ದಕ್ಕೆ ಸಾಕ್ಷಿಯಾಗಿರುವ (ಚೈತನ್ಯವೇ) ; ಏಕೆಂದರೆ ಅದು ಯಾವಾಗಲೂ ಸುಷುಪ್ತಿಯೇ ಮುಂತಾದವುಗಳಲ್ಲಿಯೂ ಇರುವದು ಕಂಡುಬರುತ್ತದೆ. 'ಅಜನೂ

1. 'ಉತ್ಸೃಜೇತ' ಪಾ॥
2. 'ಉತ್ಸೃಜೇತ' ಎಂಬ ಪಾಠಕ್ಕೆ 'ಬಿಡಬೇಕು' ಎಂದರ್ಥ.
3. ವಿಕಾರಿಗಳಾದ ಎಂದರ್ಥ.
3. ಅಹಂಕಾರಾದಿಗಳಿಗೆ ಸರ್ವಜ್ಞತ್ವವು ಸಿದ್ಧಿಸುವದಿಲ್ಲವೆಂಬುದನ್ನು ಶಂ. ಗೀ. ೨-೨೧ರಲ್ಲಿ ಪ್ರತಿಪಾದಿಸಿರುವದನ್ನು ನೋಡಿರಿ.

ನಿತ್ಯನೂ' (ಕ. ೧-೨-೧೮) ಎಂದು ಶ್ರುತಿಯೇ ಹೇಳುತ್ತದೆಯಲ್ಲವೆ ? ಆದ್ದರಿಂದ ಪ್ರತ್ಯಗಾತ್ಮನು ಸತ್ತು, ಅಸತ್ತು-(ಈ ಎರಡಕ್ಕಿಂತಲೂ) ವಿಲಕ್ಷಣನಾಗಿರುತ್ತಾನೆ

ವಿಕಾರಿಣಾಂ ಸರ್ವವಿಕಾರವೇತ್ತಾ
 ನಿತ್ಯೋಽವಿಕಾರೋ ಭವಿತುಂ ಸ ಮರ್ಹತಿ |
ಮನೋರಥಸ್ವಪ್ನಸುಷುಪ್ತಿಷು ಸ್ಫುಟಂ
 ಪುನಃ ಪುನರ್ದೃಷ್ಟಮಸತ್ತ್ವಮೇತಯೋಃ ||೨೯೩||

೨೯೩. ವಿಕಾರಹೊಂದುತ್ತಿರುವ ಪದಾರ್ಥಗಳ ವಿಕಾರಗಳನ್ನೆಲ್ಲ ಅರಿಯುತ್ತಿರುವಾತನು ನಿತ್ಯನೂ ವಿಕಾರರಹಿತನೂ ಆಗಿರಬೇಕು. ಮನೋರಥ, ಸ್ವಪ್ನ, ಸುಷುಪ್ತಿ-ಇವುಗಳಲ್ಲಿ ಈ (ದೇಹ, ಅಹಂಕಾರ) ಎರಡೂ[1] ಇಲ್ಲದ್ದು ಮತ್ತೆ ಮತ್ತೆ ಕಂಡುಬರುತ್ತದೆ.

ಅತೋಽಭಿಮಾನಂ ತ್ಯಜ ಮಾಂಸಪಿಣ್ಡೇ
 ಪಿಣ್ಡಾಭಿಮಾನಿನ್ಯಪಿ ಬುದ್ಧಿಕಲ್ಪಿತೇ |
ಕಾಲತ್ರಯಾಬಾಧ್ಯಮಖಣ್ಡಬೋಧಂ
 ಜ್ಞಾತ್ವಾ ಸ್ವಮಾತ್ಮಾನಮುಪೈಹಿ ಶಾನ್ತಿಮ್ ||೨೯೪||

೨೯೪. ಆದ್ದರಿಂದ ಈ ಮಾಂಸದ ಮುದ್ದೆ(ಯಾದ ದೇಹ)ದಲ್ಲಿಯೂ ದೇಹಾಭಿಮಾನಿಯೆಂದು ಬುದ್ಧಿಯು ಕಲ್ಪಿಸಿರುವ (ಅಹಂಕಾರದಲ್ಲಿಯೂ) ಅಭಿಮಾನವನ್ನು ತೊರೆ. ಮೂರು ಕಾಲಕ್ಕೂ ಬಾಧಿತವಾಗದ[2] ಅಖಂಡಚೈತನ್ಯವೇ ನನ್ನ ಆತ್ಮನು ಎಂದರಿತುಕೊಂಡು ಶಾಂತಿಯನ್ನು ಹೊಂದು.

ತ್ಯಜಾಭಿಮಾನಂ ಕುಲಗೋತ್ರನಾಮ
 ರೂಪಾಶ್ರಮೇಷ್ವಾರ್ದ್ರಶವಾಶ್ರಿತೇಷು |
ಲಿಙ್ಗಸ್ಯ ಧರ್ಮಾನಪಿ ಕರ್ತೃತಾದೀಂ-
 ಸ್ತ್ಯಕ್ತ್ವಾ ಭವಾಖಣ್ಡಸುಖಸ್ವರೂಪಃ ||೨೯೫||

೨೯೫. ಹಸಿಯ ಹೆಣವಾದ (ಈ ದೇಹವನ್ನು) ಆಶ್ರಯಿಸಿರುವ ಕುಲ, ಗೋತ್ರ, ನಾಮ, ರೂಪ, ಆಶ್ರಮ- ಇವುಗಳಲ್ಲಿ ಅಭಿಮಾನವನ್ನು ಬಿಡು ; ಲಿಂಗ(ಶರೀರ)ದ ಕರ್ತೃತ್ವವೇ ಮುಂತಾದವುಗಳನ್ನೂ ಬಿಟ್ಟು ಅಖಂಡಾನಂದ ಸ್ವರೂಪನಾಗು.

1. ಹಿಂದಿನ ಶ್ಲೋಕದಲ್ಲಿ ಇವೆರಡನ್ನೂ ಪರಾಮರ್ಶಿಸಿದೆ.

2. ಎಂದೆಂದಿಗೂ ಎಂದರ್ಥ ; ಕಾಲವಿದನ್ನು ಅಬಾಧಿತನಾಗಿರುತ್ತಾನೆಂದೇನೂ ವಿವಕ್ಷಿತವಲ್ಲ.

## ಅಹಂಕಾರತ್ಯಾಗ

ಸನ್ತ್ಯನ್ಯೇ ಪ್ರತಿಬನ್ಧಾಃ ಪುಂಸಃ ಸಂಸಾರಹೇತವೋ ದೃಷ್ಟಾಃ ।
ತೇಷಾಮೇಕಂ ಮೂಲಂ ಪ್ರಥಮವಿಕಾರೋ ಭವತ್ಯಹಙ್ಕಾರಃ ॥೨೯೫॥

೨೯೫. ಮನುಷ್ಯನ ಸಂಸಾರಕ್ಕೆ ಕಾರಣವಾಗಿ ಇನ್ನೂ ಕೆಲವು[1] ಅಡಚಣೆಗಳು ಕಾಣಬರುತ್ತವೆ. ಅವುಗಳಿಗೆಲ್ಲ ಮೊದಲನೆಯ[2] ವಿಕಾರವಾದ ಅಹಂಕಾರವೇ ಬೇರಾಗಿರುತ್ತದೆ.

ಯಾವತ್ ಸ್ಯಾತ್ ಸ್ವಸ್ಯ ಸಂಬನ್ಧೋಽಹಙ್ಕಾರೇಣ ದುರಾತ್ಮನಾ ।
ತಾವನ್ನ ಲೇಶಮಾತ್ರಾಽಪಿ ಮುಕ್ತಿವಾರ್ತಾ ವಿಲಕ್ಷಣಾ ॥ ೨೯೬ ॥

೨೯೬. ಈ ಕೆಟ್ಟ ಸ್ವಭಾವದ ಅಹಂಕಾರದೊಡನೆ ಎಲ್ಲಿಯವರೆಗೆ ತನಗೆ ಸಂಬಂಧವಿರುವದೋ ಅಲ್ಲಿಯವರೆಗೂ (ಸಂಸಾರಬಂಧಕ್ಕಿಂತ) ವಿಲಕ್ಷಣವಾದ ಮುಕ್ತಿಯ ಸುದ್ದಿಯು ಎಳ್ಳಷ್ಟೂ ಇರುವದಿಲ್ಲ.

ಅಹಙ್ಕಾರಗ್ರಹಾನ್ಮುಕ್ತಃ ಸ್ವರೂಪಮುಪಪದ್ಯತೇ ।
ಚನ್ದ್ರವದ್ ವಿಮಲಃ ಪೂರ್ಣಃ ಸದಾನನ್ದಃ ಸ್ವಯಂಪ್ರಭಃ ॥ ೨೯೭ ॥

೨೯೭. ಅಹಂಕಾರವೆಂಬ ಗ್ರಹದಿಂದ ಬಿಡುಗಡೆಹೊಂದಿದವನು (ರಾಹುವಿನಿಂದ ಬಿಡುಗಡೆಹೊಂದಿದ) ಚಂದ್ರನಂತೆ ನಿರ್ಮಲನಾಗಿ, ಪೂರ್ಣನಾಗಿ, ಸದಾನಂದನಾಗಿ, ಸ್ವಯಂಪ್ರಕಾಶನಾಗಿ (ತನ್ನ) ಸ್ವರೂಪವನ್ನು ಪಡೆದುಕೊಳ್ಳುತ್ತಾನೆ.

ಯೋ ವಾ ಪುರೇ ಸೋಽಹಮಿತಿ ಪ್ರತೀತೋ
  ಬುದ್ಧ್ಯಾ ವಿಕ್ಲೃಪ್ತಸ್ತಮಸಾತಿಮೂಢಯಾ ।
ತಸ್ಯೈವ ನಿಃಶೇಷತಯಾ ವಿನಾಶೇ
  ಬ್ರಹ್ಮಾತ್ಮಭಾವಃ ಪ್ರತಿಬನ್ಧಶೂನ್ಯಃ ॥ ೨೯೮ ॥

೨೯೮. ಈ (ಶರೀರವೆಂಬ) ಪುರದಲ್ಲಿ ಆ ನಾನು ಎಂದು[3] ತೋರಿಕೊಳ್ಳುತ್ತಾ ಅತಿಯಾಗಿ ಮೋಹಗೊಂಡಿರುವ ಅಂತಃಕರಣದಿಂದ ಕಲ್ಪಿತವಾಗಿರುವ

1. ಪ್ರಪಂಚವಾಸನೆ, ಕಾಮಕ್ರೋಧಾದಿಗಳು, ಅಹಂಮಮಾಭಿಮಾನ – ಇವು ಶ್ರವಣಜನ್ಯಜ್ಞಾನಕ್ಕೆ ಪ್ರತಿಬಂಧಕಗಳು. ಶಂ. ಗೀ. ೨–೬೨.

2. ಮಹತ್ತಿನಿಂದ ಅಹಂಕಾರವೆಂಬುದು ಗ್ರಂಥಕಾರರಿಗೂ ಒಪ್ಪಾಗಿದೆ ; ಇಲ್ಲಿ ಅಹಂಕಾರವನ್ನೇ ಪ್ರಥಮವಿಕಾರವೆಂದು ಏತಕ್ಕೆ ಹೇಳಿರುವರೋ ತಿಳಿಯಲಿಲ್ಲ.

3. ‘ಯೋ ವಾ ಪುರ್ಯೈಷೋಽಹಮಿತಿ’ ಎಂಬ ಪಾ॥ ಪಾಠಕ್ಕೆ, ಮೊದಲು ಇವನೇ ನಾನು – ಎಂದು ಕನ್ನಡಿಸಿಕೊಳ್ಳಬೇಕು.

(ಅಹಂಕಾರ)ವೆಂಬುದಿಲ್ಲ, ಅದನ್ನೇ ಸಂಪೂರ್ಣವಾಗಿ ಅಳಿಸಿಹಾಕಿದರೆ, ಬ್ರಹ್ಮವೇ ನಾನೆಂಬ ಭಾವವು ಯಾವ ಅಡ್ಡಿಯೂ ಇಲ್ಲದ್ದಾಗುವದು.

ಬ್ರಹ್ಮಾನನ್ದನಿಧಿರ್ಮಹಾಬಲವತಾಽಹಙ್ಕಾರಘೋರಾಹಿನಾ
ಸಂವೇಷ್ಟ್ಯಾತ್ಮನಿ ರಕ್ಷ್ಯತೇ ಗುಣಮಯೈಶ್ಚಣ್ಡೈಸ್ತ್ರಿಭಿರ್ಮಸ್ತಕೈಃ ।
ವಿಜ್ಞಾನಾಖ್ಯಮಹಾಸಿನಾ ದ್ಯುತಿಮತಾ ವಿಚ್ಛಿದ್ಯ ಶೀರ್ಷತ್ರಯಂ
ನಿರ್ಮೂಲ್ಯಾಹಿಮಿಮಂ ನಿಧಿಂ ಸುಖಕರಂ
ಧೀರೋಽನುಭೋಕ್ತುಂ ಕ್ಷಮಃ ॥ ೨೯೯ ॥

೨೯೯. ಆತ್ಮನಲ್ಲಿ ಬ್ರಹ್ಮಾನಂದವೆಂಬ ನಿಧಿಯನ್ನು ಬಹುಬಲವಾಗಿರುವ ಅಹಂಕಾರವೆಂಬ ಕಾಳಸರ್ಪನು (ಸತ್ತ್ವರಜಸ್ತಮೋ)ಗುಣಗಳೆಂಬ ಮೂರು ಭಯಂಕರವಾದ ಹೆಡೆಗಳಿಂದ ಸುತ್ತಿಹಾಕಿಕೊಂಡು ಕಾಪಾಡಿಕೊಂಡಿರುತ್ತದೆ. ಆತ್ಮವಿಜ್ಞಾನವೆಂಬ ಥಳಥಳಿಸುವ ಕೂರ್ಗತ್ತಿಯಿಂದ ಮೂರು ಹೆಡೆಗಳನ್ನೂ ಕತ್ತರಿಸಿ ಈ ಸರ್ಪವನ್ನು ಕೊಂದು ಆನಂದಕರವಾದ ಈ ನಿಧಿಯನ್ನು ಅನುಭವಿಸುವದಕ್ಕೆ ಧೀರನಾದವನೇ ಶಕ್ತನು.

ಯಾವದ್ವಾ ಯತ್ಕಿಂಚಿದ್ವಿಷದೋಷಸ್ಫೂರ್ತಿರಸ್ತಿ ಚೇದ್ದೇಹೇ ।
ಕಥಮಾರೋಗ್ಯಾಯ ಭವೇತ್ತದ್ವದಹನ್ತಾಪಿ ಯೋಗಿನೋ ಮುಕ್ತ್ಯೈ॥

೩೦೦. ದೇಹದಲ್ಲಿ ಎಲ್ಲಿಯವರೆಗೆ ಒಂದಿಷ್ಟಾದರೂ ವಿಷದ ದೋಷದ ತೋರಿಕೆಯಿರುವದೋ ಅಲ್ಲಿಯವರೆಗೆ ಆರೋಗ್ಯವೆಂತು ಲಭಿಸೀತು ? ಅದರಂತೆಯೇ ಅಹಂಕಾರವಿರುವವರೆಗೆ ಯೋಗಿಗೆ ಮುಕ್ತಿಯು ಹೇಗೆ ದೊರಕೀತು ?

ಅಹಮೋಽತ್ಯನ್ತನಿವೃತ್ತ್ಯಾ ತತ್ಕೃತನಾನಾವಿಕಲ್ಪಸಂಹೃತ್ಯಾ ।
ಪ್ರತ್ಯಕ್ತತ್ತ್ವವಿವೇಕಾದಯಮಹಮಸ್ಮೀತಿ ವಿನ್ದತೇ ತತ್ತ್ವಮ್ ॥೩೦೦॥

೩೦೧. ಅಹಂಕಾರವನ್ನು ತೀರ ತೊಲಗಿಸಿಕೊಂಡು ಅದರಿಂದಾಗುವ ಬಗೆಬಗೆಯ ವಿಕಲ್ಪಗಳನ್ನು ಪರಿಹರಿಸಿಕೊಂಡು 'ಇವನೇ ನಾನು' ಎಂದು ಪ್ರತ್ಯಕ್ತತ್ತ್ವವನ್ನು ವಿಂಗಡಿಸಿ(ಅರಿತು)ಕೊಳ್ಳುವದರಿಂದಲೇ ಪರಮಾರ್ಥತತ್ತ್ವವನ್ನು ಪಡೆದುಕೊಳ್ಳುತ್ತಾನೆ.

ಅಹಙ್ಕಾರೇ ಕರ್ತರ್ಯಹಮಿತಿ[1] ಮತಿಂ ಮುಞ್ಚ ಸಹಸಾ
ವಿಕಾರಾತ್ಮನ್ಯಾತ್ಮಪ್ರತಿಫಲಜುಷಿ ಸ್ವಸ್ಥಿತಿಮುಷಿ ।
ಯದಧ್ಯಾಸಾತ್ ಪ್ರಾಪ್ತಾ ಜನಿಮೃತಿಜರಾದುಃಖಬಹುಲಾ
ಪ್ರತೀಚಶ್ಚಿನ್ಮೂರ್ತೇಸ್ತವ ಸುಖತನೋಃ ಸಂಸೃತಿರಿಯಮ್ ॥

1. 'ಅಹಂಕರ್ತರ್ಯಸ್ಮಿನ್ನಹಮಿತಿ' ಪಾ॥

೩೦೩. ವಿಕಾರಸ್ವರೂಪವೂ ಕರ್ತೃವೂ ಆಗಿರುವ ಅಹಂಕಾರದಲ್ಲಿ (ಇದೇ) ನಾನೆಂಬ ಬುದ್ಧಿಯನ್ನು ಬೇಗ ಬಿಟ್ಟು ಕಳೆಯುವವನಾಗು. ಅದು ಆತ್ಮನ ಪ್ರತಿಬಿಂಬವನ್ನು ಪಡೆದು ಸ್ವರೂಪದಲ್ಲಿರುವಂತೆ ಆ ಇರವನ್ನು ಕಳವುಮಾಡುತ್ತದೆ. ಅದನ್ನು ಮೇಲೆ ಹಾಕಿಕೊಂಡಿರುವದರಿಂದಲೇ ಚಿನ್ಮೂರ್ತಿಯೂ ಆನಂದ ಶರೀರನೂ ಆಗಿರುವ ಒಳಗಿನ ಆತ್ಮನಾದ ನಿನಗೆ ಹುಟ್ಟು, ಸಾವು, ಮುಪ್ಪು, ದುಃಖ–ಇವುಗಳು ತುಂಬಿರುವ ಈ ಸಂಸಾರವು ಉಂಟಾಗಿರುತ್ತದೆ.

ಸದೈಕರೂಪಸ್ಯ ಚಿದಾತ್ಮನೋ ವಿಭೋ-
ರಾನನ್ದಮೂರ್ತೇರನವದ್ಯಕೀರ್ತೇಃ ।
ನೈವಾನ್ಯಥಾ ಕ್ವಾಪ್ಯವಿಕಾರಿಣಸ್ತೇ
ವಿನಾಽಹಮಧ್ಯಾಸಮಮುಷ್ಯ ಸಂಸೃತಿಃ ॥೩೦೪॥

೩೦೪. ಯಾವಾಗಲೂ ಒಂದೇ ರೂಪದಲ್ಲಿರುತ್ತಾ ಜ್ಞಾನರೂಪನಾಗಿ ವ್ಯಾಪಕನಾಗಿ ಆನಂದವಿಗ್ರಹನಾಗಿ ಉತ್ತಮವಾದ ಹೆಸರುವಾಸಿಯುಳ್ಳ ವಿಕಾರ ಶೂನ್ಯನಾದ ನಿನಗೆ ಈ ಅಹಂಕಾರದ ಅಧ್ಯಾಸವಿಲ್ಲದೆ ಬೇರೆ ಯಾವ ಬಗೆಯಿಂದಲೂ ಅದರ ಸಂಸಾರವುಂಟಾಗಲಾರದು.

ತಸ್ಮಾದಹಙ್ಕಾರಮಿಮಂ ಸ್ವಶತ್ರುಂ
ಭೋಕ್ತುರ್ಗಲೇ ಕಣ್ಟಕವತ್ಪ್ರತೀತಮ್ ।
ವಿಚ್ಛಿದ್ಯ ವಿಜ್ಞಾನಮಹಾಸಿನಾ ಸ್ಫುಟಂ
ಭುಙ್ಕ್ಷ್ವಾಽಽತ್ಮಸಾಮ್ರಾಜ್ಯಸುಖಂ ಯಥೇಷ್ಟಮ್ ॥೩೦೫॥

೩೦೫. ಆದ್ದರಿಂದ ಊಟಮಾಡುವವನಿಗೆ ಗಂಟಲಲ್ಲಿ ಕಾಣಿಸಿಕೊಂಡ ಮುಳ್ಳಿನಂತಿರುವ ಈ ಅಹಂಕಾರವೆಂಬ ನಿನ್ನ ಹಗೆಯನ್ನು ವಿಜ್ಞಾನವೆಂಬ ಕೂರಲುಗಿನ ಕತ್ತಿಯಿಂದ ಚೆನ್ನಾಗಿ ಕತ್ತರಿಸಿಹಾಕಿ ಆತ್ಮಸಾಮ್ರಾಜ್ಯದ ಸುಖವನ್ನು ಯಥೇಚ್ಛೆಯಾಗಿ ಅನುಭವಿಸು.

ತತೋಽಹಮಾದೇರ್ವಿನಿವರ್ತ್ಯ ವೃತ್ತಿಂ
ಸಂತ್ಯಕ್ತರಾಗಃ ಪರಮಾರ್ಥಲಾಭಾತ್ ।
ತೂಷ್ಣೀಂ ಸಮಾಸ್ಸ್ವಾಽಽತ್ಮಸುಖಾನುಭೂತ್ಯಾ
ಪೂರ್ಣಾತ್ಮನಾ ಬ್ರಹ್ಮಣಿ ನಿರ್ವಿಕಲ್ಪಃ ॥೩೦೬॥

೩೦೬. ಆಮೇಲೆ ಅಹಂಕಾರವೇ ಮುಂತಾದವುಗಳ ವೃತ್ತಿಯನ್ನು ಹೋಗಲಾಡಿಸಿಕೊಂಡು ಪರಮಾರ್ಥವನ್ನು ಹೊಂದುವದರಿಂದ ಯಾವದೊಂದರ

ಹೆಂಬಲೂ ಇಲ್ಲದೆ ಆತ್ಮಾನಂದವನ್ನೇ ಅನುಭವಿಸುತ್ತಾ ಯಾವದೊಂದು ವಿಕಲ್ಪವೂ ಇಲ್ಲದೆ ಪೂರ್ಣಭಾವದಿಂದ ಬ್ರಹ್ಮದಲ್ಲಿಯೇ ಸುಮ್ಮನೆ ಇದ್ದುಬಿಡು.[1]

ಸಮೂಲಕೃತ್ತೋಽಪಿ ಮಹಾನಹಂ ಪುನ-
ರ್ವ್ಯುಲ್ಲೇಖಿತಃ ಸ್ಯಾದ್ಯದಿ ಚೇತಸಾ ಕ್ಷಣಮ್ ।
ಸಂಜೀವ್ಯ ವಿಕ್ಷೇಪಶತಂ ಕರೋತಿ
ನಭಸ್ವತಾ ಪ್ರಾವೃಷಿ ವಾರಿದೋ ಯಥಾ ॥೩೦೬॥

೩೦೬. ಬೇರುಮುಟ್ಟ ಕಿತ್ತಬಳಿಕವೂ (ಇದನ್ನು) ಚಿತ್ತವು ಸ್ವಲ್ಪ ಕೆದಕಿ ಎಬ್ಬಿಸಿತೆಂದರೆ ಈ ದೊಡ್ಡ ಅಹಂಕಾರವು ಮಳೆಗಾಲದಲ್ಲಿ ಗಾಳಿಯಿಂದೆದ್ದ ಮೋಡದಂತೆ ಮತ್ತೆ ಕ್ಷಣಮಾತ್ರದಲ್ಲಿ ಜೀವಗೊಂಡು ನೂರಾರು ಬಗೆಯ ಚಾಂಚಲ್ಯವನ್ನುಂಟುಮಾಡುತ್ತದೆ.[2]

ನಿಗೃಹ್ಯ ಶತ್ರೋರಹಮೋಽವಕಾಶಃ
ಕ್ವಚಿನ್ನ ದೇಯೋ ವಿಷಯಾನುಚಿನ್ತಯಾ ।
ಸ ಏವ ಸಂಜೀವನಹೇತುರಸ್ಯ
ಪ್ರಕ್ಷೀಣಜಮ್ಬೀರತರೋರಿವಾಮ್ಬು ॥೩೦೭॥

೩೦೭. ಈ ಹಗೆಯಾದ ಅಹಂಕಾರವನ್ನು ಕಟ್ಟಿಹಾಕಿದಬಳಿಕವೂ ಮತ್ತೆ ವಿಷಯಚಿಂತನೆಯಿಂದ ಎಲ್ಲಿಯೂ ಇದಕ್ಕೆ ಎಡೆಗೊಡಬಾರದು. ಆ ಕೊಟ್ಟ ಅವಕಾಶವೇ ಒಣಗಿದ ನೇರಳೆಮರಕ್ಕೆ ಎರೆದ ನೀರಿನಂತೆ ಮತ್ತೆ ಇದನ್ನು ಚಿಗುರಿಸುವದಕ್ಕೆ ಕಾರಣವಾಗುತ್ತದೆ.

ದೇಹಾತ್ಮನಾ ಸಂಸ್ಥಿತ ಏವ ಕಾಮೀ
ವಿಲಕ್ಷಣಃ ಕಾಮಯಿತಾ ಕಥಂ ಸ್ಯಾತ್ ।
ಅತೋಽರ್ಥಸನ್ಧಾನಪರತ್ವಮೇವ
ಭೇದಪ್ರಸಕ್ತ್ಯಾ ಭವಬನ್ಧಹೇತುಃ ॥೩೦೮॥

೩೦೮. ದೇಹವೇ ತಾನೆಂದುಕೊಂಡಿರುವವನೇ ಕಾಮಿಯು, ತಾನು (ದೇಹಕ್ಕಿಂತ) ವಿಲಕ್ಷಣನೆಂಬುವನು[3] ಹೇಗೆತಾನೆ ಕಾಮಿಯಾದಾನು ?

1. ನಿರ್ವಿಕಲ್ಪಸಮಾಧಿಯಿಂದ ಆತ್ಮನಿಷ್ಠನಾಗಿರು.

2. ಇಲ್ಲಿ ಹೇಳಿರುವ ಅಹಂಕಾರತ್ಯಾಗಾದಿಗಳು ಸಮಾಧಿಯಿಂದಾದ ನಿಷ್ಠೆಯಿಂದಲೇ ಎಂಬುದು ಮತ್ತೆ ಅವುಗಳ ಉಲ್ಲೇಖವುಂಟೆಂಬುದರಿಂದಲೇ ಸ್ಪಷ್ಟವಾಗಿದೆ.

3. ದೇಹಾದಿಗಳಿಗಿಂತ ವಿಲಕ್ಷಣನಾದರೆ ಏತರ ಕಾಮಕ್ಕಾಗಿ ಕರ್ಮವನ್ನು ಮಾಡಿಯಾನು ? ಬೃ. ೪–೪–೧೨.

ಆದ್ದರಿಂದ ವಿಷಯಗಳನ್ನು ಮನಸ್ಸಿನಲ್ಲಿ ಹೊರಳಾಡಿಸುವದೇ ಭೇದಕ್ಕೆ ಎಡೆಗೊಡು ವದರಿಂದ ಅದು ಸಂಸಾರಬಂಧಕ್ಕೆ ಕಾರಣವಾಗುವದು.

## ವಿಷಯಚಿಂತಾತ್ಯಾಗ, ಕರ್ಮತ್ಯಾಗ

ಕಾರ್ಯಪ್ರವರ್ಧನಾದ್ಬೀಜಪ್ರವೃದ್ಧಿಃ ಪರಿದೃಶ್ಯತೇ ।
ಕಾರ್ಯನಾಶಾದ್ ಬೀಜನಾಶಸ್ತಸ್ಮಾತ್ ಕಾರ್ಯಂ ನಿರೋಧಯೇತ್ ॥
ವಾಸನಾವೃದ್ಧಿತಃ ಕಾರ್ಯಂ ಕಾರ್ಯವೃದ್ಧ್ಯಾ ಚ ವಾಸನಾ ।
ವರ್ಧತೇ ಸರ್ವಥಾ ಪುಂಸಃ ಸಂಸಾರೋ ನ ನಿವರ್ತತೇ ॥ ೩೧೦ ॥

೩೦೯–೩೧೦. ಕರ್ಮವು ಹೆಚ್ಚಿದರೆ (ಅದರ) ಬೀಜ(ವಾದ ವಾಸನೆಯೂ) ಹೆಚ್ಚುತ್ತದೆಯೆಂಬುದು ಕಂಡುಬರುತ್ತದೆ. ಕರ್ಮವು ಇಲ್ಲವಾದರೆ ಬೀಜ (ವಾಸನೆ)ಯೂ ಇಲ್ಲವಾಗುತ್ತದೆ. ಆದ್ದರಿಂದ ಕರ್ಮವನ್ನು ಇಲ್ಲದಂತೆ ಮಾಡಿ ಕೊಳ್ಳಬೇಕು. ವಾಸನೆಯು ಬೆಳೆದರೆ ಕರ್ಮವೂ ಬೆಳೆಯುವದು, ಕರ್ಮವು ಬೆಳೆದರೆ ವಾಸನೆಯೂ ಬೆಳೆಯುವದು ; (ಹೀಗೆ ಒಂದರಿಂದೊಂದು) ಬೆಳೆಯು ವದರಿಂದ ಮನುಷ್ಯನಿಗೆ ಸಂಸಾರವು ಯಾವ ಪ್ರಕಾರದಿಂದಲೂ ಹೋಗ ದಂತಾಗಿರುತ್ತದೆ.

ಸಂಸಾರಬನ್ಧವಿಚ್ಛಿತ್ತ್ಯೈ ತದ್ದ್ವಯಂ ಪ್ರದಹೇದ್ಯತಿಃ ।
ವಾಸನಾವೃದ್ಧಿರೇತಾಭ್ಯಾಂ ಚಿನ್ತಯಾ ಕ್ರಿಯಯಾ ಬಹಿಃ ॥ ೩೧೧ ॥
ತಾಭ್ಯಾಂ ಪ್ರವರ್ಧಮಾನಾ ಸಾ ಸೂತೇ ಸಂಸೃತಿಮಾತ್ಮನಃ ।
ತ್ರಯಾಣಾಂ ಚ ಕ್ಷಯೋಪಾಯಃ ಸರ್ವಾವಸ್ಥಾಸು ಸರ್ವದಾ ॥ ೩೧೨ ॥
ಸರ್ವತ್ರ ಸರ್ವತಃ ಸರ್ವಂ ಬ್ರಹ್ಮಮಾತ್ರಾವಲೋಕನಮ್[1] ।
ಸದ್ಭಾವವಾಸನಾದಾರ್ಢ್ಯಾತ್ ತತ್ತ್ರಯಂ ಲಯಮಶ್ನುತೇ ॥ ೩೧೩ ॥

೩೧೧–೩೧೩. ಸಂಸಾರದ ಬಂಧವು ನಾಶವಾಗಬೇಕಾದರೆ ಯತಿಯಾದ ವನು[2] (ಈ) ಎರಡನ್ನೂ ಸುಟ್ಟುಹಾಕಬೇಕು. ವಾಸನೆಯು ಬೆಳೆಯುವದೆಂಬುದು (ಒಳಗೆ ಮಾಡುವ ವಿಷಯ)ಚಿಂತನೆ, (ಹೊರಗೆ ಮಾಡುವ) ಕರ್ಮ – ಈ ಎರಡ ರಿಂದಲೇ. ಆ ಎರಡರಿಂದ ಅದು ಬೆಳೆದುಕೊಂಡು ಆತ್ಮನಿಗೆ ಸಂಸಾರವನ್ನುಂಟು ಮಾಡುತ್ತಿರುತ್ತದೆ. ಈ ಮೂರನ್ನೂ ನಾಶಗೊಳಿಸಿಕೊಳ್ಳಬೇಕಾದರೆ[3] ಎಲಾ

1. 'ಬ್ರಹ್ಮಮಾತ್ರಾವಲೋಕನೈಃ' ಪಾ॥

2. ಸಾಧಕನಾದ ಸಂನ್ಯಾಸಿಯು.

3. ವಾಸನೆ, ವಿಷಯಚಿಂತೆ, ಕರ್ಮ – ಈ ಮೂರರೂ ಲಯವಾಗುವದೇ ಅನಿಷ್ಟ ನಿವೃತ್ತಿ. ಶಂ ಗೀ. ೩–೨೦.

ಅವಸ್ಥೆಗಳಲ್ಲಿಯೂ[1] ಜನಾವಾಗಲೂ ಎಲ್ಲೆಲ್ಲಿಯೂ ಎತ್ತೆತ್ತಲೂ ಎಲ್ಲವನ್ನೂ ಬ್ರಹ್ಮವೆಂದೇ ಎಂದು ಕಾಣುವದೇ ಉಪಾಯವು. ಸದ್ಬ್ರಹ್ಮಭಾವನೆಯು ಗಟ್ಟಿಯಾದರೆ ಆ ಮೂರೂ ನಾಶವಾಗುತ್ತವೆ.

ಕ್ರಿಯಾನಾಶೇ ಭವೇಚ್ಚಿನ್ತಾನಾಶೋಽಸ್ಮಾದ್ ವಾಸನಾಕ್ಷಯಃ ।
ವಾಸನಾಪ್ರಕ್ಷಯೋ ಮೋಕ್ಷಃ ಸಾ ಜೀವನ್ಮುಕ್ತಿರಿಷ್ಯತೇ ॥೩೧೪॥

೩೧೪. ಕರ್ಮವು ನಾಶವಾದರೆ ವಿಷಯಚಿಂತನೆಯು ನಾಶವಾಗುತ್ತದೆ, ಇದರಿಂದ ವಾಸನೆಯು ಸವೆದುಹೋಗುತ್ತದೆ. ವಾಸನೆಯು ಸವೆದುಹೋಗುವದೇ ಮೋಕ್ಷವು, ಅದೇ ಜೀವನ್ಮುಕ್ತಿಯು.

ಸದ್ವಾಸನಾಸ್ಫೂರ್ತಿವಿಜೃಮ್ಭಣೇ ಸತಿ
ಹ್ಯಸೌ[2] ವಿಲೀನಾ ತ್ವಹಮಾದಿ[3]ವಾಸನಾ ।
ಅತಿಪ್ರಕೃಷ್ಟಾಪ್ಯರುಣಪ್ರಭಾಯಾಂ
ವಿಲೀಯತೇ ಸಾಧು ಯಥಾ ತಮಿಸ್ರಾ ॥ ೩೧೫ ॥

೩೧೫. ಸೂರ್ಯನ ಪ್ರಭೆಯು ಹರಡಲು ಕತ್ತಲೆಯು ಹೇಗೆ ಪೂರಾ ಮರೆಯಾಗುವದೋ, ಹಾಗೆ ಈ ಅಹಂಕಾರವಾಸನೆಯು ಸದ್ಬ್ರಹ್ಮವಾಸನೆಯ ಬೆಳಕು ಹಬ್ಬಿಕೊಳ್ಳುತ್ತಲೂ ಮರೆಯಾಗಿಯೇಬಿಡುವದು.

ತಮಸ್ತಮಃಕಾರ್ಯಮನರ್ಥಜಾಲಂ
ನ ದೃಶ್ಯತೇ ಸತ್ಯುದಿತೇ ದಿನೇಶೇ ।
ತಥಾಽದ್ವಯಾನನ್ದರಸಾನುಭೂತೌ
ನೈವಾಸ್ತಿ ಬನ್ಧೋ ನ ಚ ದುಃಖಗನ್ಧಃ ॥ ೩೧೬ ॥

೩೧೬. ಸೂರ್ಯನು ಹುಟ್ಟಿದರೆ ಕತ್ತಲೆಯಾಗಲಿ ಕತ್ತಲೆಯಿಂದಾಗುವ ಕೇಡುಗಳ ಸಮೂಹವಾಗಲಿ ಹೇಗೆ ಕಾಣದೆಹೋಗುವದೋ ಅದರಂತೆ ಅದ್ವಿತೀಯಾನಂದರಸದ ಅನುಭವವುಂಟಾಗುತ್ತಲೂ ಬಂಧವೂ ಇರುವದಿಲ್ಲ, ದುಃಖದ ವಾಸನೆಯೂ ಇರುವದಿಲ್ಲ.

ದೃಶ್ಯಂ ಪ್ರತೀತಂ ಪ್ರವಿಲಾಪಯನ್ ಸ್ವಯಂ
ಸನ್ಮಾತ್ರಮಾನನ್ದಘನಂ ವಿಭಾವಯನ್ ।
ಸಮಾಹಿತಃ ಸನ್ ಬಹಿರನ್ತರಂ ವಾ
ಕಾಲಂ ನಯೇಥಾಃ ಸತಿ ಕರ್ಮಬನ್ಧೇ ॥ ೩೧೭ ॥

---

1. ಊಟಮಾಡುವಾಗ, ಮಲಗಿರುವಾಗ, ಕುಳಿತಿರುವಾಗ – ಇವೇ ಮುಂತಾದ ಅವಸ್ಥೆಗಳಲ್ಲಿಯೂ ಎಂದರ್ಥ. ಭ. ಗೀ. ೯–೧೭, ೬–೪೭, ೮–೭.

2. 'ಸತ್ಯಸೌ' ಪಾ॥ 3. 'ವಿಲೀನಾಪ್ಯಹಮಾದಿ' ಪಾ॥

೩೧೭. ತೋರುತ್ತಿರುವ ದೃಶ್ಯವನ್ನು ಲಯಮಾಡಿಕೊಂಡು[1] ತಾನೇ ಸನ್ಮಾತ್ರವಾಗಿರುವ ಆನಂದದ ಗಟ್ಟಿಯಾದ ಬ್ರಹ್ಮವನ್ನೇ ಚಿಂತಿಸುತ್ತಾ, ಒಳಗಾಗಲಿ ಹೊರಗಾಗಲಿ[2] (ಚಿತ್ತವನ್ನು) ಸಮಾಧಿಯಲ್ಲಿಯೇ ಇಟ್ಟುಕೊಂಡು ಕರ್ಮಬಂಧವು ಇನ್ನೂ ಇದ್ದರೆ[3] ಕಾಲವನ್ನು ಕಳೆಯುತ್ತಿರು.

## ಬ್ರಹ್ಮನಿಷ್ಠೆಯನ್ನು ಮರೆಯದೆ ಮಾಡಬೇಕು

ಪ್ರಮಾದೋ ಬ್ರಹ್ಮನಿಷ್ಠಾಯಾಂ ನ ಕರ್ತವ್ಯಃ ಕದಾಚನ ।
ಪ್ರಮಾದೋ ಮೃತ್ಯುರಿತ್ಯಾಹ ಭಗವಾನ್ ಬ್ರಹ್ಮಣಃ ಸುತಃ ॥೩೧೮॥

೩೧೮. ಬ್ರಹ್ಮನಿಷ್ಠೆಯಲ್ಲಿ ಎಂದಿಗೂ ಎಚ್ಚರಿಕೆತಪ್ಪಬಾರದು. ಪ್ರಮಾದವೇ ಮೃತ್ಯುವೆಂದು ಬ್ರಹ್ಮಕುಮಾರನಾದ (ಸನತ್ಸುಜಾತ) ಭಗವಂತನು ಹೇಳಿರುತ್ತಾನೆ.[4]

ನ ಪ್ರಮಾದಾದನರ್ಥೋಽನ್ಯೋ ಜ್ಞಾನಿನಃ ಸ್ವಸ್ವರೂಪತಃ ।
ತತೋ ಮೋಹಸ್ತತೋಽಹಂಧೀಸ್ತತೋ ಬನ್ಧಸ್ತತೋ ವ್ಯಥಾ ॥೩೧೯॥

೩೧೯. ಜ್ಞಾನಿಯಾದವನಿಗೆ ತನ್ನ ಸ್ವರೂಪವನ್ನು ಎಚ್ಚರಿಕೆದಪ್ಪಿ ಮರೆಯುವದಕ್ಕಿಂತಲೂ ಹೆಚ್ಚಿನ ಕೇಡಿಲ್ಲ. ಮೋಹವುಂಟಾಗುವದು ಆದರಿಂದಲೇ[5], ನಾನೆಂಬ ಅಭಿಮಾನವುಂಟಾಗುವದು ಆದರಿಂದಲೇ. ಬಂಧವಾಗುವದು ಆದರಿಂದಲೇ, ವ್ಯಥೆಯುಂಟಾಗುವದೂ ಆದರಿಂದಲೇ.

ವಿಷಯಾಭಿಮುಖಂ ದೃಷ್ಟ್ವಾ ವಿದ್ವಾಂಸಮಪಿ ವಿಸ್ಮೃತಿಃ ।
ವಿಕ್ಷೇಪಯತಿ ಧೀದೋಷೈರ್ಯೋಷಾ ಜಾರಮಿವ ಪ್ರಿಯಮ್ ॥೩೨೦॥

೩೨೦. ವಿಷಯದಕಡೆಗೆ ತಿರುಗಿರುವವನು ಜ್ಞಾನಿಯೇ ಆಗಿದ್ದರೂ (ಅಂಥವನನ್ನು) ಕಂಡರೆ (ಆತ್ಮ)ವಿಸ್ಮೃತಿಯು, ಜಾರನಾದ ನಲ್ಲನನ್ನು (ಕಂಡ) ಹೆಂಗಸಿನಂತೆ ಬುದ್ಧಿದೋಷಗಳಿಂದ ಕೂಡಿಸಿ ಚಂಚಲಗೊಳಿಸುತ್ತದೆ.

1. ಬ್ರಹ್ಮನಿಷ್ಠೆಯಿಂದಲೇ. ಹಿಂದೆ ೧೫೩ ರಲ್ಲಿ ಹೇಳಿದ ಪ್ರಪಂಚ ವಿಲಯವು ಆಗುತ್ತದೆ ಎಂದು ಭಾವ.

2. ಹೊರಗೆ ವಸ್ತುಗಳನ್ನು ಕಾಣುವಾಗಲೂ ಒಳಗೆ ಬ್ರಹ್ಮಧ್ಯಾನವನ್ನು ಮಾಡುವಾಗಲೂ ಎಂದರ್ಥ. ಇದಕ್ಕೆ 'ಬ್ರಹ್ಮಯೋಗ'ವೆಂದು ಹೆಸರು. ಶಂ. ಗೀ. ೬-೨೧.

3. ಪ್ರಾರಬ್ಧಕರ್ಮಶೇಷವು ಇದ್ದರೆ ಎಂದರ್ಥ. ಇದು ವ್ಯಾವಹಾರಿಕದೃಷ್ಟಿಯಿಂದ ಹೇಳಿದ್ದೆಂದು ಮುಂದೆ ಸ್ಫುಟವಾಗುವದು.

4. ಸನತ್ಸುಜಾತೀಯ ೧-೪ನ್ನು ನೋಡಿ.

೫. ಪ್ರಮಾದದಿಂದಲೇ, ಎಚ್ಚರಿಕೆಯಿಂದಿರದಿದ್ದುದರಿಂದಲೇ.

ಯಥಾಽಪಕೃಷ್ಟಂ ಶೈವಾಲಂ ಕ್ಷಣಮಾತ್ರಂ ನ ತಿಷ್ಠತಿ ।
ಆವೃಣೋತಿ ತಥಾ ಮಾಯಾ ಪ್ರಾಜ್ಞಂ ವಾಪಿ ಪರಾಙ್ಮುಖಮ್ ।

೩೨೨. ಗೋಜಿ ತೆಗೆದುಹಾಕಿದ ಪಾಚಿಯು ಒಂದು ಕ್ಷಣವೂ ನಿಲ್ಲದೆ ಮತ್ತೆ (ನೀರನ್ನು) ಮುಸುಕಿಕೊಳ್ಳುತ್ತದೆ. ಹಾಗೆಯೇ (ನಿಷ್ಠೆಯಿಂದ) ಹಿಂದಕ್ಕೆ ತಿರುಗಿದವನು ಜ್ಞಾನಿಯಾದರೂ (ಅವನನ್ನೂ) ಮಾಯೆಯು (ಮುಸುಕಿ ಕೊಳ್ಳುತ್ತದೆ).

ಲಕ್ಷ್ಯಚ್ಯುತಂ ಸದ್ಯದಿ[1] ಚಿತ್ತಮೀಷ-
ದ್ಬಹಿರ್ಮುಖಂ ಸಂನಿಪತೇತ್ತತಸ್ತತಃ ।
ಪ್ರಮಾದತಃ ಪ್ರಚ್ಯುತಕೇಲಿಕಂದುಕಃ
ಸೋಪಾನಪಙ್ಕ್ತೌ ಪತಿತೋ ಯಥಾ ತಥಾ ॥೩೨೩॥

೩೨೩. ಚಿತ್ತವು ತನ್ನ ಗುರಿಯಿಂದ[2] ಜಗುಳಿ ಒಂದಿಷ್ಟು ಹೊರಮುಖ ವಾದರೂ ಸೋಪಾನದ (ಮೆಟ್ಟಿಲುಗಳ) ಸಾಲಿನಲ್ಲಿ ತಪ್ಪಿಬಿದ್ದ ಆಟದ ಚೆಂಡಿನಂತೆ ಅಲ್ಲಿಂದಲ್ಲಿಂದ ಕೆಳಕ್ಕೆ ಕೆಳಕ್ಕೆ ಬಿದ್ದುಬಿಡುವದು.

ವಿಷಯೇಷ್ವಾವಿಶಚ್ಚೇತಃ ಸಂಕಲ್ಪಯತಿ ತದ್ಗುಣಾನ್ ।
ಸಮ್ಯಕ್ಸಂಕಲ್ಪನಾತ್ ಕಾಮಃ ಕಾಮಾತ್ಪುಂಸಃ ಪ್ರವರ್ತನಮ್ ॥೩೨೪॥
ತತಃ ಸ್ವರೂಪವಿಭ್ರಂಶೋ ವಿಭ್ರಷ್ಟಸ್ತು ಪತತ್ಯಧಃ ।
ಪತಿತಸ್ಯ ವಿನಾ ನಾಶಂ ಪುನರ್ನಾರೋಹ ಈಕ್ಷ್ಯತೇ ॥೩೨೫॥
ಸಙ್ಕಲ್ಪಂ ವರ್ಜಯೇತ್ತಸ್ಮಾತ್ ಸರ್ವಾನರ್ಥಸ್ಯ ಕಾರಣಮ್ ॥

೩೨೪-೩೨೫. ಚಿತ್ತವು ವಿಷಯಗಳಲ್ಲಿ ಹೊಕ್ಕರೆ ಅವುಗಳ ಗುಣಗಳನ್ನೇ ಸಂಕಲ್ಪಿಸುತ್ತದೆ. (ಇದು) ಒಳ್ಳೆಯದೆಂದು ಸಂಕಲ್ಪಿಸುವದರಿಂದ ಕಾಮ ವುಂಟಾಗುತ್ತದೆ. ಕಾಮದಿಂದ ಮನುಷ್ಯನು (ಕರ್ಮದಲ್ಲಿ) ತೊಡಗುತ್ತಾನೆ; ಅದರಿಂದ ತನ್ನ ಸ್ವರೂಪದಿಂದ ಜಗುಳಿಬೀಳುತ್ತಾನೆ; ಜಾರಿದವನು ಕೆಳಕ್ಕೇ ಬೀಳುತ್ತಾನೆ, ಬಿದ್ದವನು ನಾಶವಾಗುವನೇ ಹೊರತು ಮೇಲಕ್ಕೇರುವದು ಕಂಡು ಬರುವದಿಲ್ಲ. ಆದ್ದರಿಂದ ಎಲ್ಲಾ ಬಗೆಯ ಅನರ್ಥಗಳಿಗೂ ಕಾರಣವಾದ ಸಂಕಲ್ಪವನ್ನು ಬಿಟ್ಟುಬಿಡಬೇಕು.

1. 'ಚೇದ್ಯದಿ' ಎಂದೂ ಪಾಠ
2. ಅಶ್ರದ್ಧೆಯಿಂದ

ಅತಃ ಪ್ರಮಾದಾನ್ನ ಪರೋಽಸ್ತಿ ಮೃತ್ಯು-
ರ್ವಿವೇಕಿನೋ ಬ್ರಹ್ಮವಿದಃ ಸಮಾಧೌ ।
ಸಮಾಹಿತಃ ಸಿದ್ಧಿಮುಪೈತಿ ಸಮ್ಯಕ್
ಸಮಾಹಿತಾತ್ಮಾ ಭವ ಸಾವಧಾನಃ ॥೩೨೫॥

೩೨೫. ಆದ್ದರಿಂದ ಸಮಾಧಿಯ ವಿಷಯಕ್ಕೆ ಎಚ್ಚರಿಕೆತಪ್ಪುವದಕ್ಕಿಂತಲೂ ವಿವೇಕಿಯಾದ ಬ್ರಹ್ಮಜ್ಞಾನಿಗೆ[1] ಮತ್ತೊಂದು ಮೃತ್ಯುವಿಲ್ಲ. ಚೆನ್ನಾಗಿ ಸಮಾಧಿಯಲ್ಲಿ ನಿಂತವನೇ ಸಿದ್ಧಿಯನ್ನು[2] ಹೊಂದುತ್ತಾನೆ. ಆದ್ದರಿಂದ ಎಚ್ಚರಿಕೆಯಿಂದ ಅಂತಃಕರಣವನ್ನು ಸಮಾಧಿಯಲ್ಲಿಟ್ಟುಕೊ.

## ವಿಷಯಚಿಂತನೆಯ ತ್ಯಾಗ

ಜೀವತೋ ಯಸ್ಯ ಕೈವಲ್ಯಂ ವಿದೇಹೇ ಸ ಚ ಕೇವಲಃ ।
ಯತ್ಕಿಂಚಿತ್ಪಶ್ಯತೋ ಭೇದಂ ಭಯಂ ಬ್ರೂತೇ ಯಜುಃಶ್ರುತಿಃ ॥

೩೨೬. ಬದುಕಿರುವಾಗ ಯಾವನಿಗೆ ಕೈವಲ್ಯವುಂಟಾಗುವದೋ, ಅವನಿಗೇ ದೇಹವು ಬಿದ್ದುಹೋದಮೇಲೂ ಕೈವಲ್ಯವು ದೊರೆಯುವದು.[3] ಒಂದಿಷ್ಟು ಭೇದವನ್ನು ಕಾಣುವವನಿಗೂ ಅಂಜಿಕೆಯುಂಟು– ಎಂದು ಯಜುರ್ವೇದದ (ತೈತ್ತಿರೀಯ)ಶ್ರುತಿಯು.[4]

ಯದಾ ಕದಾ ವಾಽಪಿ ವಿಪಶ್ಚಿದೇಷ
ಬ್ರಹ್ಮಣ್ಯನನ್ತೇಽಪ್ಯಣುಮಾತ್ರಭೇದಮ್ ।
ಪಶ್ಯತ್ಯಥಾಮುಷ್ಯ ಭಯಂ ತದೈವ
ಯದ್ವೀಕ್ಷಿತಂ ಭಿನ್ನತಯಾ ಪ್ರಮಾದಾತ್ ॥೩೨೬॥

೩೨೬. (ಆ ಶ್ರುತಿಯ ಅಭಿಪ್ರಾಯವೇನೆಂದರೆ :) ಯಾವಾಗಲೇ ಆಗಲಿ, ಈ ಜ್ಞಾನಿಯು ಅನಂತವಾದ ಬ್ರಹ್ಮದಲ್ಲಿ ಅಣುಮಾತ್ರವಾದರೂ ಭೇದವನ್ನು ಕಂಡರೆ, ತಾನು ಪ್ರಮಾದದಿಂದ ಬೇರೆಯಾಗಿ ಕಂಡ ಆ ವಸ್ತುವು ಆಗಲೇ ಅವನಿಗೆ ಅದು ಭಯ(ಕ್ಕೆ ಕಾರಣ)ವಾಗುತ್ತದೆ.

---

1 ಅಪರೋಕ್ಷಬ್ರಹ್ಮಜ್ಞಾನವು ಆದವನಿಗೇ ನಿದಿಧ್ಯಾಸನವನ್ನೂ ಸಮಾಧಿಯನ್ನೂ ಹೇಳಿದೆ ಎಂಬುದು ಗ್ರಂಥಕಾರರ ಮತ. ಶಂ. ಗೀ. ೩–೧೭, ೬–೪೦, ೧೮–೫೦.

2. ವಿದೇಹಕೈವಲ್ಯವನ್ನು ಎಂದರ್ಥ. ಶಂ. ಗೀ. ೬–೧೭, ೭–೧೪.

3. ವಿದೇಹಕೈವಲ್ಯವನ್ನೂ ಸಮಾಧಿಯನ್ನೂ ಮತ್ತೆ ಮತ್ತೆ ಹೇಳಿರುವದು ಶಂ. ಗೀತಾತಾತ್ಪರ್ಯಬೋಧಿನೀ ಗ್ರಂಥಕರ್ತರ ಒಂದು ವಿಶೇಷವು.

4. ತೈ. ೭– ; ಶಂ. ಗೀ. ೨–೬೦.

ಶ್ರುತಿಸ್ಮೃತಿನ್ಯಾಯಶತೈರ್ನಿಷಿದ್ಧೇ
ದೃಶ್ಯೇಽತ್ರ ಯಃ ಸ್ವಾತ್ಮಮತಿಂ ಕರೋತಿ ।
ಉಪೈತಿ ದುಃಖೋಪರಿ ದುಃಖಜಾತಂ
ನಿಷಿದ್ಧಕರ್ತಾ ಸ ಮಲಿಮ್ಲುಚೋ ಯಥಾ ॥೩೨೮॥

೩೨೮. ಶ್ರುತಿ, ಸ್ಮೃತಿ, ಮತ್ತು ನೂರಾರು ಯುಕ್ತಿಗಳು ಅಲ್ಲಗಳೆದಿರುವ ಈ ದೃಶ್ಯದಲ್ಲಿ ಯಾವನು (ಇದು) ತನ್ನ ಆತ್ಮನೆಂಬ ಬುದ್ಧಿಯನ್ನು ಮಾಡಿಕೊಳ್ಳುವನೋ ಅವನಿಗೆ ಮಾಡಬಾರದ್ದನ್ನು ಮಾಡಿರುವ ಕಳ್ಳನಿಗಾಗುವಹಾಗೆ[1] ದುಃಖದ ಮೇಲೆ ದುಃಖವು ಬಂದೊದಗುವದು.

ಸತ್ಯಾಭಿಸನ್ಧಾನರತೋ ವಿಮುಕ್ತೋ
ಮಹತ್ತ್ವಮಾತ್ಮೀಯಮುಪೈತಿ ನಿತ್ಯಮ್ ।
ಮಿಥ್ಯಾಭಿಸನ್ಧಾನರತಸ್ತು ನಶ್ಯೇ-
ದ್ದೃಷ್ಟಂ ತದೇತದ್ಯದಚೋರಚೋರಯೋಃ ॥೩೨೯॥

೩೨೯. ಯಾವನು ಸತ್ಯವನ್ನೇ ನೆನೆಯುತ್ತಿರುವನೋ ಅವನು (ಬಂಧದಿಂದ) ಬಿಡುಗಡೆಯನ್ನು ಹೊಂದಿ ತನ್ನ ನಿತ್ಯವಾದ ಮಹಿಮೆಯನ್ನೇ ಹೊಂದುತ್ತಾನೆ. ಆದರೆ ಸುಳ್ಳನ್ನೇ ನೆನೆಯುತ್ತಿರುವವನು ಹಾಳಾಗುವನು. ಆ ಇದು ಕಳ್ಳ, ಕಳ್ಳನಲ್ಲದವನು–ಇವರಿಬ್ಬರ ವಿಷಯದಲ್ಲಿ ಕಂಡುಬಂದಿರುತ್ತದೆ.

ಯತಿರಸದನುಸನ್ಧಿಂ ಬನ್ಧಹೇತುಂ ವಿಹಾಯ
ಸ್ವಯಮಯಮಹಮಸ್ಮೀತ್ಯಾತ್ಮದೃಷ್ಟ್ಯೈವ ತಿಷ್ಠೇತ್ ।
ಸುಖಯತಿ ನನು ನಿಷ್ಠಾ ಬ್ರಹ್ಮಣಿ ಸ್ವಾನುಭೂತ್ಯಾ
ಹರತಿ ಪರಮವಿದ್ಯಾಕಾರ್ಯದುಃಖಂ ಪ್ರತೀತಮ್ ॥೩೩೦॥

೩೩೦. ಯತಿಯಾದವನು ಬಂಧಕಾರಣವಾದ ಅಸತ್ಪದಾರ್ಥದ ನೆನಹನ್ನು ಬಿಟ್ಟು ಕಳೆದು 'ಈತನೇ ನಾನು' ಎಂದು ಆತ್ಮದೃಷ್ಟಿಯಿಂದಲೇ (ನೋಡಿ) ನಿಲ್ಲಬೇಕು. ತನ್ನ ಅನುಭವದಿಂದ ಬ್ರಹ್ಮದಲ್ಲಿಯೇ ನಿಲುಗಡೆಯನ್ನು ಹೊಂದುವದೇ ಸುಖವನ್ನು ಕೊಡುತ್ತದೆ, ಅವಿದ್ಯಾಕಾರ್ಯವಾಗಿ ತೋರುತ್ತಿರುವ ಹೆಚ್ಚಿನ ಈ ದುಃಖವನ್ನೂ ತೊಲಗಿಸುತ್ತದೆ.

1. ಛಾಂ. [illegible] – [illegible]–ರಿಂದ ...ರವರೆಗೆ ಹೇಳಿರುವ ಅಗ್ನಿಪರೀಕ್ಷೆಯ ದೃಷ್ಟಾಂತವು. ಮಿಥ್ಯಾವಸ್ತುವನ್ನು ತನ್ನ ಆತ್ಮನೆಂದು ತಿಳಿದವನಿಗೆ ಸುಳ್ಳನ್ನು ಹೇಳಿ ಕಾದ ಕಬ್ಬಿಣವನ್ನು ಮುಟ್ಟಿದ ಕಳ್ಳನಂತೆ ತಪ್ಪದೆ ದುಃಖವಾಗುವದು–ಎಂದು ಭಾವ.

ಬಾಹ್ಯಾನುಸನ್ಧಿಃ ಪರಿವರ್ಧಯೇತ್ ಫಲಂ
ದುರ್ವಾಸನಾಮೇವ ತತಸ್ತತೋಽಧಿಕಾಮ್ ।
ಜ್ಞಾತ್ವಾ ವಿವೇಕೈಃ ಪರಿಹೃತ್ಯ ಬಾಹ್ಯಂ
ಸ್ವಾತ್ಮಾನುಸನ್ಧಿಂ ವಿದಧೀತ ನಿತ್ಯಮ್ ॥ ೩೩೧ ॥

೩೩೧. ಹೊರಗಿನ ವಿಷಯಗಳ ನೆನಹ, ಮತ್ತೆಮತ್ತೆ ಹೆಚ್ಚುವ ಕೆಟ್ಟ ವಾಸನೆಯೆಂಬ ಫಲವನ್ನೇ ಬೆಳೆಯಿಸುತ್ತದೆ. ವಿವೇಚನೆಗಳಿಂದ (ಇದನ್ನು) ಅರಿತುಕೊಂಡು ಹೊರಗಿನ ವಿಷಯವನ್ನು ತಳ್ಳಿಹಾಕಿ ಯಾವಾಗಲೂ ತನ್ನ ಆತ್ಮನ ನೆನಹನ್ನೇ ಮಾಡಿಕೊಳ್ಳುತ್ತಿರಬೇಕು.

ಬಾಹ್ಯೇ ನಿರುದ್ಧೇ ಮನಸಃ ಪ್ರಸನ್ನತಾ
ಮನಃಪ್ರಸಾದೇ ಪರಮಾತ್ಮದರ್ಶನಮ್ ।
ತಸ್ಮಿನ್ ಸುದೃಷ್ಟೇ ಭವಬನ್ಧನಾಶೋ
ಬಹಿರ್ನಿರೋಧಃ ಪದವೀ ವಿಮುಕ್ತೇಃ ॥ ೩೩೨ ॥

೩೩೨. ಹೊರಗಿನ (ವಿಷಯದ) ಚಿಂತನೆಯನ್ನು ನೀಗಿಕೊಂಡರೆ ಮನಸ್ಸು ತಿಳಿಯಾಗುವದು ; ಮನಸ್ಸು ತಿಳಿಯಾದರೆ ಪರಮಾತ್ಮನನ್ನು ಕಾಣಬಹುದು. ಆ (ಪರಮಾತ್ಮನನ್ನು) ಚೆನ್ನಾಗಿ ಕಂಡುಕೊಂಡರೆ ಸಂಸಾರಬಂಧವು ಅಳಿಯುತ್ತದೆ ; ಆದ್ದರಿಂದ ಹೊರಗೆ (ವಿಷಯಗಳ) ಚಿಂತನೆಯನ್ನು ನೀಗಿಕೊಳ್ಳುವದೇ ಮುಕ್ತಿಗೆ ದಾರಿಯು.[1]

ಕಃ ಪಣ್ಡಿತಃ ಸನ್ ಸದಸದ್ವಿವೇಕೀ
ಶ್ರುತಿಪ್ರಮಾಣಃ ಪರಮಾರ್ಥದರ್ಶೀ ।
ಜಾನನ್ ಹಿ ಕುರ್ಯಾದಸತೋಽವಲಮ್ಬಂ
ಸ್ವಪಾತಹೇತೋಃ ಶಿಶುವನ್ಮುಮುಕ್ಷುಃ ॥ ೩೩೩ ॥

೩೩೩. ತಾನು ತಿಳಿದವನಾಗಿದ್ದು ಇದು ಸತ್ತು, ಇದು ಅಸತ್ತು–ಎಂದು ವಿಂಗಡಿಸಿಕೊಂಡವನಾಗಿ, ಶ್ರುತಿಯಲ್ಲಿ ಪ್ರಮಾಣವನ್ನಿಟ್ಟುಕೊಂಡವನಾಗಿ, ಪರಮಾರ್ಥವನ್ನು ಕಂಡ ಯಾವ ಮುಮುಕ್ಷುವುತಾನೆ ತಿಳಿದುತಿಳಿದೂ ಮಗುವಿನಂತೆ ತನಗೆ ಕೇಡನ್ನೇ ಉಂಟುಮಾಡುವ ಅಸತ್ತನ್ನು ನಂಬಿಯಾನು ?

1. ಶಂ. ಗೀ. ೧೮–೫೫.

ದೇಹಾದಿಸಂಸಕ್ತಿಮತೋ ನ ಮುಕ್ತಿ-
ರ್ಮುಕ್ತಸ್ಯ ದೇಹಾದ್ಯಭಿಮತ್ಯಭಾವಃ ।
ಸುಪ್ತಸ್ಯ ನೋ ಜಾಗರಣಂ ನ ಜಾಗ್ರತಃ
ಸ್ವಪ್ನಸ್ತಯೋರ್ಭಿನ್ನಗುಣಾಶ್ರಯತ್ವಾತ್ ॥೪೩೪॥

೪೩೪. ದೇಹಾದಿಗಳಲ್ಲಿ ಆಸಕ್ತಿಯಿರುವವನಿಗೆ ಮುಕ್ತಿಯಿಲ್ಲ, ಮುಕ್ತನಾದವನಿಗೆ ದೇಹಾದಿಗಳಲ್ಲಿ ಅಭಿಮಾನವಿರುವದಿಲ್ಲ. ಕನಸುಕಾಣುತ್ತಿರುವವನಿಗೆ ಎಚ್ಚರವಿಲ್ಲ, ಎಚ್ಚರದಿಂದಿರುವಾತನಿಗೆ ಕನಸಿಲ್ಲ; ಏಕೆಂದರೆ ಆ (ಅವಸ್ಥೆಗಳು) ಬೇರೆಬೇರೆಯ ಸ್ವಭಾವವುಳ್ಳವಾಗಿರುತ್ತವೆ.



# ೮. ಸಮಾಧಿಯಿಂದಾಗುವ ಆತ್ಮನಿಷ್ಠೆ

## ಆತ್ಮನಿಷ್ಠೆಯಿಂದಲೇ ಆವರಣಾದಿಗಳನ್ನು ತೊಲಗಿಸಿಕೊಳ್ಳಬೇಕು

ಅನ್ತರ್ಬಹಿಃ ಸ್ವಂ ಸ್ಥಿರಜಙ್ಗಮೇಷು
ಜ್ಞಾನಾತ್ಮನಾಽಽಧಾರತಯಾ ವಿಲೋಕ್ಯ ।
ತ್ಯಕ್ತಾಖಿಲೋಪಾಧಿರಖಣ್ಡರೂಪಃ
ಪೂರ್ಣಾತ್ಮನಾ ಯಃ ಸ್ಥಿತ ಏಷ ಮುಕ್ತಃ ॥ ೩೩೫ ॥

೩೩೫. ಒಳಗೂ ಹೊರಗೂ ಸ್ಥಾವರಜಂಗಮಗಳಲ್ಲೆಲ್ಲ ತನ್ನ ಆತ್ಮನೇ ಚೈತನ್ಯರೂಪದಿಂದ ಆಧಾರನಾಗಿರುವನೆಂಬುದನ್ನು ಕಂಡುಕೊಂಡು ಎಲ್ಲಾ ಉಪಾಧಿಗಳನ್ನೂ ಬಿಟ್ಟು ಅಖಂಡರೂಪನಾಗಿ ಪೂರ್ಣರೂಪದಿಂದ ಯಾವನು ಇರುವನೋ[1] ಅವನೇ ಮುಕ್ತನು.[2]

ಸರ್ವಾತ್ಮನಾ ಬನ್ಧವಿಮುಕ್ತಿಹೇತುಃ
ಸರ್ವಾತ್ಮಭಾವಾನ್ನ ಪರೋಽಸ್ತಿ ಕಶ್ಚಿತ್ ।
ದೃಶ್ಯಾಗ್ರಹೇ ಸತ್ಯುಪಪದ್ಯತೇಽಸೌ
ಸರ್ವಾತ್ಮಭಾವೋಽಸ್ಯ ಸದಾತ್ಮನಿಷ್ಠಯಾ ॥ ೩೩೬ ॥

೩೩೬. ಯಾವ ಬಗೆಯಿಂದ ನೋಡಿದರೂ ಬಂಧದಿಂದ ಬಿಡುಗಡೆ ಯಾಗುವದಕ್ಕೆ ಕಾರಣವಾದದ್ದು ಸರ್ವಾತ್ಮಭಾವಕ್ಕಿಂತ ಬೇರೆ ಇನ್ನು ಯಾವದೂ ಇಲ್ಲ. ಆ (ಸರ್ವಾತ್ಮಭಾವವೆಂಬುದು) ಈ (ಸಾಧಕನು) ಸದ್ರೂಪ ನಿಷ್ಠೆಯನ್ನು (ಪಡೆದು)ಕೊಳ್ಳುವದರಿಂದ ದೃಶ್ಯವನ್ನು ಗ್ರಹಿಸದೆ ಇದ್ದರೆ ಮಾತ್ರ ದೊರೆಯುತ್ತದೆ.

ದೃಶ್ಯಸ್ಯಾಽಗ್ರಹಣಂ ಕಥಂ ನು ಘಟತೇ ದೇಹಾತ್ಮನಾ ತಿಷ್ಠತೋ
ಬಾಹ್ಯಾರ್ಥಾನುಭವಪ್ರಸಕ್ತಮನಸಸ್ತತ್ತತ್ಕ್ರಿಯಾಂ ಕುರ್ವತಃ ।
ಸಂನ್ಯಸ್ತಾಖಿಲಧರ್ಮಕರ್ಮವಿಷಯೈರ್ನಿತ್ಯಾತ್ಮನಿಷ್ಠಾಪರೈ-
ಸ್ತತ್ತ್ವಜ್ಞೈಃ ಕರಣೀಯಮಾತ್ಮನಿ ಸದಾನನ್ದೇಚ್ಛುಭಿರ್ಯತ್ನತಃ ॥

---

1. ೫೦ನೆಯ ಶ್ಲೋಕದಲ್ಲಿ ಹೇಳಿರುವ 'ಬ್ರಹ್ಮಾತ್ಮನಾ ಸಂಸ್ಥಿತಿಃ' ಎಂಬ ಸ್ಥಿತಿಯೇ ಇದು.

2. ಜೀವನ್ಮುಕ್ತನು.

೩೬೩. ದೇಹವೇ ತಾನೆಂಬ ಭಾವದಿಂದೊಡಗೂಡಿ ಹೊರಗಿನ ವಿಷಯಗಳ ಅನುಭವದಲ್ಲಿಯೇ ಆಸಕ್ತವಾದ ಮನಸ್ಸುಳ್ಳವನಾಗಿ ಆಯಾ ಕರ್ಮಗಳನ್ನು ಮಾಡುತ್ತಿರುವವನಿಗೆ ದೃಶ್ಯವನ್ನು ಕಾಣದೆ ಇರುವದೆಂಬುದು ಹೇಗೆತಾನೆ ಶಕ್ಯವಾದೀತು? (ಅದು) ಪ್ರಯತ್ನಪೂರ್ವಕವಾಗಿ ಎಲ್ಲಾ (ದೇಹಾದಿ)ಧರ್ಮಗಳನ್ನೂ ಕರ್ಮಗಳನ್ನೂ ವಿಷಯಗಳನ್ನೂ ಬಿಟ್ಟು ಯಾವಾಗಲೂ ಆತ್ಮನಿಷ್ಠೆಯಲ್ಲಿಯೇ ತತ್ಪರರಾಗಿ ತಮ್ಮಲ್ಲಿ ನಿತ್ಯಾನಂದವೇ ಇರಬೇಕೆಂದು ಹವಣಿಸುವ ತತ್ತ್ವಜ್ಞರಿಂದ ಮಾತ್ರ ಮಾಡಬಹುದಾದದ್ದು.

ಸಾರ್ವಾತ್ಮ್ಯಸಿದ್ಧಯೇ ಭಿಕ್ಷೋಃ ಕೃತಶ್ರವಣಕರ್ಮಣಃ ।
ಸಮಾಧಿಂ ವಿದಧಾತ್ಯೇಷಾ ಶಾನ್ತೋ ದಾನ್ತ ಇತಿ ಶ್ರುತಿಃ ॥ ೩೬೪ ॥

೩೬೪. ಶ್ರವಣಸಾಧನವನ್ನು ಮಾಡಿರುವ ಸಂನ್ಯಾಸಿಗೆ[1] ಸರ್ವಾತ್ಮಭಾವವು ಸಿದ್ಧಿಯಾಗುವದಕ್ಕಾಗಿ 'ಶಾನ್ತೋ ದಾನ್ತಃ' (ಬೃ. ೪-೪-೨೩) (ಶಾಂತನಾಗಿ ದಾಂತನಾಗಿ ಉಪರತನಾಗಿ ತಿತಿಕ್ಷುವಾಗಿ ಸಮಾಧಿಯಿಂದ ಕೂಡಿದವನಾಗಿ ತನ್ನಲ್ಲಿಯೇ ಆತ್ಮನನ್ನು ಕಂಡುಕೊಳ್ಳಬೇಕು) ಎಂಬ ಶ್ರುತಿಯು ಸಮಾಧಿಯನ್ನು ವಿಧಿಸುತ್ತದೆ.[2]

ಆರೂಢಶಕ್ತೇರಹಮೋ ವಿನಾಶಃ
ಕರ್ತುಂ ನ ಶಕ್ಯಃ ಸಹಸಾಪಿ ಪಣ್ಡಿತೈಃ ।
ಯೇ ನಿರ್ವಿಕಲ್ಪಾಖ್ಯಸಮಾಧಿನಿಶ್ಚಲಾ-
ಸ್ತಾನನ್ತರಾಽನನ್ತಭವಾ ಹಿ ವಾಸನಾ[3] ॥ ೩೬೫ ॥

೩೬೫. ಯಾರು ನಿರ್ವಿಕಲ್ಪವೆಂಬ ಸಮಾಧಿಯಲ್ಲಿ ಅಲುಗಾಡದೆ ನೆಲೆನಿಂತಿರುವರೋ ಅವರನ್ನುಳಿದು ಮಿಕ್ಕವರು ಜ್ಞಾನಿಗಳೇ ಆಗಿದ್ದರೂ ಶಕ್ತಿಯು ಬಲಿತುಕೊಂಡಿರುವ ಅಹಂಕಾರವನ್ನು ತಟ್ಟನೆ ತೊಡೆದುಹಾಕುವದು ಅವರಿಂದ ಆಗದು. ಏಕೆಂದರೆ (ಅನಾತ್ಮ)ವಾಸನೆಯು ಅನಂತಜನ್ಮಗಳಿಂದ ಕೂಡಿಕೊಂಡುಬಂದದ್ದಾಗಿರುತ್ತದೆ.[4]

---

1. ತನ್ಮೂಲಕವಾಗಿ ಜ್ಞಾನವನ್ನು ಪಡೆದುಕೊಂಡಿರುವವನಿಗೆ– ಎಂದರ್ಥ. ಶಂ. ಗೀ. ೧೮–೫೦.

2. ಬ್ರಹ್ಮವು ಆತ್ಮವೆಂಬ ಜ್ಞಾನವು ಸಿದ್ಧವಾಗುವದಕ್ಕೂ ಸಾರ್ವಾತ್ಮ್ಯವು ಸಿದ್ಧವಾಗುವದಕ್ಕೂ ಸಮಾಧಿಯು ಶ್ರುತಿವಿಹಿತವಾಗಿದೆ ಎಂದು ಶಂ ಗೀ. ೬–೪೮ರಲ್ಲಿ ವಿಸ್ತಾರವಾಗಿ ಪ್ರತಿಪಾದಿಸಿದೆ.

3. 'ವಾಸನಾಃ' ಪಾ.

4. ದೇಹಾದ್ಯಭಿಮಾನನಾಶವು ನಿತ್ಯನಿರಂತರನಿಯತನಿರ್ವಿಕಲ್ಪಸಮಾಧಿನಿಷ್ಠರಿಗೆ ಮಾತ್ರ ಶಕ್ಯವೆಂಬ ಭಾವ. ಶಂ. ಗೀ. ೧೨–೫.

ಅಹಂಬುದ್ಧ್ಯೈವ ಮೋಹಿನ್ಯಾ ಯೋಜಯಿತ್ವಾಽಽವೃತೇರ್ಬಲಾತ್ ।
ವಿಕ್ಷೇಪಶಕ್ತಿಃ ಪುರುಷಂ ವಿಕ್ಷೇಪಯತಿ ತದ್ಗುಣೈಃ ॥೩೪೮॥

೩೪೮. ವಿಕ್ಷೇಪಶಕ್ತಿಯು ಆವರಣಶಕ್ತಿಯ ಬಲದಿಂದ ನಾನೆಂಬ ಬುದ್ಧಿಯಿಂದಲೇ ಮನುಷ್ಯನನ್ನು ಮರುಳುಗೊಳಿಸಿ ತನ್ನ ಗುಣಗಳಿಂದ ಚಂಚಲಗೊಳಿಸುತ್ತದೆ.

ವಿಕ್ಷೇಪಶಕ್ತಿವಿಜಯೋ ವಿಷಮೋ ವಿಧಾತುಂ
ನಿಃಶೇಷಮಾವರಣಶಕ್ತಿನಿವೃತ್ತ್ಯಭಾವೇ ।
ದೃಗ್ದೃಶ್ಯಯೋಃ ಸ್ಫುಟಪಯೋಜಲವದ್ವಿಭಾಗೇ
ನಶ್ಯೇತ್ತದಾವರಣಮಾತ್ಮನಿ ಚ ಸ್ವಭಾವಾತ್ ॥೩೪೯॥
ನಿಃಸಂಶಯೇನ ಭವತಿ ಪ್ರತಿಬನ್ಧಶೂನ್ಯೋ
ವಿಕ್ಷೇಪಣಂ ನ ಹಿ ತದಾ ಯದಿ ಚೇನ್ಮೃಷಾರ್ಥೇ[1] ॥

೩೪೯. ಆವರಣಶಕ್ತಿಯನ್ನು ಒಂದಿಷ್ಟೂ ಉಳಿಯದಂತೆ ತೊಲಗಿಸಿಕೊಳ್ಳದೆ ಇದ್ದರೆ ವಿಕ್ಷೇಪಶಕ್ತಿಯನ್ನು ಗೆಲ್ಲುವದು ಕಷ್ಟ. ಸ್ಫುಟವಾಗಿ ಕಾಣಿಸುವ ಹಾಲುನೀರುಗಳಂತೆ ದೃಗ್ರೂಪನಾದ ಆತ್ಮ, ದೃಶ್ಯವಾದ ಅನಾತ್ಮ– ಇವೆರಡನ್ನೂ ವಿಂಗಡಿಸಿಕೊಂಡಾಗ ಆ ಆವರಣವು ತನಗೆತಾನೇ ಆತ್ಮನಲ್ಲಿ ಮೈಗರೆಯುವದು ; ವಿಷಯವು ಮಿಥ್ಯೆಯಾದರೆ ಆಗ ನಿಃಸಂದೇಹವಾಗಿ (ಆ ವಿಕ್ಷೇಪಶಕ್ತಿಯನ್ನು ಗೆಲ್ಲುವದು) ಪ್ರತಿಬಂಧವಿಲ್ಲದೆ ಆಗುವದು, ಏಕೆಂದರೆ ವಿಕ್ಷೇಪವಿರುವದೇ ಇಲ್ಲ.[2]

ಸಮ್ಯಗ್ವಿವೇಕಃ ಸ್ಫುಟಬೋಧಜನ್ಯೋ
ವಿಭಜ್ಯ ದೃಗ್ದೃಶ್ಯಪದಾರ್ಥತತ್ತ್ವಮ್ ।
ಛಿನತ್ತಿ ಮಾಯಾಕೃತಮೋಹಬನ್ಧಂ
ಯಸ್ಮಾದ್ವಿಮುಕ್ತಸ್ಯ ಪುನರ್ನ ಸಂಸೃತಿಃ ॥೩೫೦॥

೩೫೦. ಎದ್ದುತೋರುವ ಜ್ಞಾನದಿಂದುಂಟಾದ ಸರಿಯಾದ ವಿವೇಕವು ದೃಕ್ಕು, ದೃಶ್ಯ–ಎಂಬ ಪದಾರ್ಥಗಳ ನಿಜವನ್ನು ವಿಂಗಡಿಸಿ ಮಾಯೆಯಿಂದಾಗಿರುವ ಭ್ರಾಂತಿಬಂಧವನ್ನು ಕತ್ತರಿಸಿಹಾಕುತ್ತದೆ ; ಅದರಿಂದ ಬಿಡುಗಡೆಹೊಂದಿದಾತನಿಗೆ ಮತ್ತೆ ಸಂಸಾರವುಂಟಾಗುವದಿಲ್ಲ.

1. "ಮೃಷಾರ್ಥೇ" ಪಾ॥

2. 'ಪ್ರತಿಬನ್ಧಶೂನ್ಯೋ' ಎಂಬುದು ಯಾವದಕ್ಕೆ ವಿಶೇಷಣವೆಂಬುದು ಸರಿಯಾಗಿ ತಿಳಿಯಲಿಲ್ಲ; 'ವಿಕ್ಷೇಪಶಕ್ತಿವಿಜಯಃ'–ಎಂಬುದಕ್ಕೆ ವಿಶೇಷಣವೆಂದು ಕಲ್ಪಿಸಿರುತ್ತೇವೆ.

ಪರಾವರೈಕತ್ವವಿವೇಕವಹ್ನಿ-
ರ್ದಹತ್ಯವಿದ್ಯಾಗಹನಂ ಹ್ಯಶೇಷಮ್ ।
ಕಿಂ ಸ್ಯಾತ್ ಪುನಃ ಸಂಸರಣಸ್ಯ ಬೀಜ-
ಮದ್ವೈತಭಾವಂ ಸಮುಪೇಯುಷೋಽಸ್ಯ ॥೩೪೩॥

೩೪೩. ಪರ, ಅಪರ- ಎರಡೂ ಒಂದೇ[1] ಎಂಬ ವಿವೇಕಾಗ್ನಿಯು ಅವಿದ್ಯೆಯ ಕಾಡನ್ನು ಇಷ್ಟೂ ಉಳಿಯದಂತೆ ಸುಟ್ಟುಹಾಕುತ್ತದೆ. (ಹೀಗೆ) ಅದ್ವೈತಭಾವವನ್ನೇ ಹೊಂದಿರುವ ಇವನಿಗೆ ಮತ್ತೆ ಸಂಸಾರದಲ್ಲಿ ತೊಳಲುವದಕ್ಕೆ ಕಾರಣವು ಯಾವದು ಇದ್ದೀತು[2] ?

## ಸದಸದ್ವಿವೇಕ

ಆವರಣಸ್ಯ ನಿವೃತ್ತಿ-
ರ್ಭವತಿ ಚ ಸಮ್ಯಕ್ ಪದಾರ್ಥದರ್ಶನತಃ ।
ಮಿಥ್ಯಾಜ್ಞಾನವಿನಾಶ-
ಸ್ತದ್ವದ್ವಿಕ್ಷೇಪಜನಿತದುಃಖನಿವೃತ್ತಿಃ ॥೩೪೪॥

ಏತತ್ ತ್ರಿತಯಂ ದೃಷ್ಟಂ
ಸಮ್ಯಗ್ರಜ್ಜುಸ್ವರೂಪವಿಜ್ಞಾನಾತ್ ।
ತಸ್ಮಾದ್ವಸ್ತುಸತತ್ತ್ವಂ
ಜ್ಞಾತವ್ಯಂ ಬನ್ಧಮುಕ್ತಯೇ ವಿದುಷಾ ॥೩೪೫॥

೩೪೪-೩೪೫. ಚೆನ್ನಾಗಿ ಪದಾರ್ಥಗಳ ಜ್ಞಾನವನ್ನು ಮಾಡಿಕೊಳ್ಳುವದರಿಂದ ಆವರಣವು ಹೋಗುವದು, ತಪ್ಪುತಿಳಿವಳಿಕೆಯೂ ಹೋಗುವದು. ಅದರಂತೆ ವಿಕ್ಷೇಪದಿಂದುಂಟಾಗಿರುವ ದುಃಖವೂ ನೀಗುವದು. ಹಗ್ಗದ ಸ್ವರೂಪವನ್ನು ಅರಿತುಕೊಂಡದ್ದರಿಂದ ಈ ಮೂರೂ (ಆದದ್ದು) ಕಂಡುಬಂದಿರುತ್ತದೆ. ಆದ್ದರಿಂದ ವಿವೇಕಿಯಾದವನು ಬಂಧದಿಂದ ಬಿಡುಗಡೆಹೊಂದುವದಕ್ಕಾಗಿ ವಸ್ತುತತ್ತ್ವವನ್ನು ಅರಿತುಕೊಳ್ಳಬೇಕು.

---

1. ಬ್ರಹ್ಮ, ಜೀವ : ಬ್ರಹ್ಮ, ಜಗತ್ತು-ಇವೆರಡೂ ಒಂದೇ.
2. ಅವನು ತಾನೂ ಸರ್ವರೂ ಮಾಕ್ತರೆಂದೇ ಅರಿತುಕೊಂಡಿರುತ್ತಾನೆ. ಶಂ.ಗೀ. ೩-೧೮. ಅವನಿಗೆ ಅತ್ಯಂತಿಕವಾಗಿ ಸಂಸಾರನಿವೃತ್ತಿಯಾಗಿ ಆನಂದಸ್ವರೂಪವು ಸಿದ್ಧವಾಗಿರುತ್ತದೆ. ಶಂ. ಗೀ. ೧೮-೨.

ಅಯೋಽಗ್ನಿಯೋಗಾದಿವ ಸತ್ಸಮನ್ವಯಾ-
ನ್ಮಾತ್ರಾದಿರೂಪೇಣ ವಿಜೃಮ್ಭತೇ ಧೀಃ ।
ತತ್ಕಾರ್ಯಮೇತತ್ತ್ರಿತಯಂ[1] ಯತೋ ಮೃಷಾ
ದೃಷ್ಟಂ ಭ್ರಮಸ್ವಪ್ನಮನೋರಥೇಷು ॥ ೩೪೬ ॥

ತತೋ ವಿಕಾರಾಃ ಪ್ರಕೃತೇರಹಂಮುಖಾ
ದೇಹಾವಸಾನಾ ವಿಷಯಾಶ್ಚ ಸರ್ವೇ ।
ಕ್ಷಣೇಽನ್ಯಥಾಭಾವಿತಯಾ ಹ್ಯಮೀಷಾ-
ಮಸತ್ತ್ವಮಾತ್ಮಾ ತು[2] ಕದಾಪಿ ನಾನ್ಯಥಾ ॥ ೩೪೭ ॥

೩೪೬–೩೪೭. ಬೆಂಕಿಯ ಸಂಬಂಧದಿಂದ ಕಬ್ಬಿಣವು (ಕೆಂಪಗೆ ಕಾದು ಸುಡು)ವಂತೆ[3] ಸದ್ರೂಪನಾದ (ಆತ್ಮನ) ಸಂಬಂಧದಿಂದ ಬುದ್ಧಿಯು ಮಾತೃ – ಮುಂತಾದ ರೂಪದಿಂದ[4] ತೋರಿಕೊಳ್ಳುತ್ತದೆ. ಆ (ಬುದ್ಧಿಯ) ಕಾರ್ಯವಾದ ಈ (ಮಾತ್ರಾದಿ)ತ್ರಯವು[5] ಭ್ರಾಂತಿ, ಸ್ವಪ್ನ, ಮನೋರಥ– ಇವುಗಳಲ್ಲಿ ಹುಸಿಯಾಗಿರುವದಲ್ಲವೆ, ಆದ್ದರಿಂದ ಅಹಂಕಾರ ಮೊದಲು ದೇಹದವರೆಗಿನ ಪ್ರಕೃತಿಯ ವಿಕಾರಗಳೂ, ಎಲ್ಲಾ ವಿಷಯಗಳೂ ಕ್ಷಣಕ್ಷಣಕ್ಕೂ ಬೇರೆಯಾಗುತ್ತಿರುವದರಿಂದ ಅವು ಅಸತ್ತಾಗಿರುವವು. ಆತ್ಮನಾದರೋ ಯಾವಾಗಲೂ ಬೇರ್ಪಡುವದಿಲ್ಲ.[6]

ನಿತ್ಯಾದ್ವಯಾಖಣ್ಡಚಿದೇಕರೂಪೋ
ಬುದ್ಧ್ಯಾದಿಸಾಕ್ಷೀ ಸದಸದ್ವಿಲಕ್ಷಣಃ ।
ಅಹಂಪದಪ್ರತ್ಯಯಲಕ್ಷಿತಾರ್ಥಃ
ಪ್ರತ್ಯಕ್ ಸದಾನನ್ದಘನಃ ಪರಾತ್ಮಾ ॥ ೩೪೮ ॥

೩೪೮. ನಿತ್ಯನೂ ಅದ್ವಯನೂ ಅಖಂಡನೂ ಚಿನ್ಮಾತ್ರರೂಪನೂ ಬುದ್ಧಿಯೇ ಮುಂತಾದವುಗಳಿಗೆ ಸಾಕ್ಷಿಯೂ ಸತ್ತು ಮತ್ತು ಅಸತ್ತು– ಎಂಬ

1. 'ಏತದ್ದ್ವಿತಯಮ್' ಪಾ।

2. "ಕ್ಷಣೇಽನ್ಯಥಾಭಾವಿನ ಏಷ ಆತ್ಮಾ ನೋದೇತಿ ನಾಪ್ಯೇತಿ ಕದಾಪಿ ನಾನ್ಯಥಾ" ಎಂಬ ಪಾಠಕ್ಕಿಂತ ಇದೇ ಮೇಲು.

3. ಶಂ. ಗೀ. ೧೩–೧೫.

4. ಮಾತೃ, ಮಾನ, ಮೇಯ – ಎಂಬ ರೂಪದಿಂದ.

5. 'ದ್ವಿತಯಮ್' ಎಂಬ ಪಾಠಕ್ಕೆ ಈ ದ್ವೈತವು ಎಂದು ಅರ್ಥಮಾಡಿಕೊಳ್ಳಬೇಕಾಗುವದು.

6. ಹೀಗೆ ಆತ್ಮಾನಾತ್ಮಪದಾರ್ಥಗಳ ವಿವೇಕವನ್ನು ಮಾಡಿಕೊಳ್ಳಬೇಕು – ಎಂದು ಭಾವ. ಮುಂದಿನ ಶ್ಲೋಕದಲ್ಲಿ ಯಾವಾಗಲೂ ಸದ್ರೂಪನಾಗಿರುವ ಆತ್ಮನ ಸ್ವರೂಪವನ್ನು ಹೇಳಿದೆ.

ಎರಡಕ್ಕಿಂತಲೂ ವಿಲಕ್ಷಣನೂ[1] ಆದ ಅಹಂಪದಕ್ಕೂ (ಅಹಂ)ಪ್ರತ್ಯಯಕ್ಕೂ ಲಕ್ಷ್ಯಾರ್ಥವಾಗಿರುವವನು ಒಳಗಿರುವ ಸದಾನಂದಘನನಾದ ಪರಮಾತ್ಮನು.

ಇತ್ಥಂ ವಿಪಶ್ಚಿತ್ ಸದಸದ್ವಿಭಜ್ಯ
ನಿಶ್ಚಿತ್ಯ ತತ್ತ್ವಂ ನಿಜಬೋಧದೃಷ್ಟ್ಯಾ ।
ಜ್ಞಾತ್ವಾ ಸ್ವಮಾತ್ಮಾನಮಖಣ್ಡಬೋಧಂ
ತೇಭ್ಯೋ ವಿಮುಕ್ತಃ ಸ್ವಯಮೇವ ಶಾಮ್ಯತಿ ॥ ೩೪೯ ॥

೩೪೯. ಹೀಗೆಂದು ಜಾಣನಾದವನು ಸತ್ತನ್ನೂ ಅಸತ್ತನ್ನೂ[2] ವಿಂಗಡಿಸಿ ತನ್ನ ಜ್ಞಾನವೆಂಬ ನೋಟದಿಂದ ತತ್ತ್ವವನ್ನು ಗೊತ್ತುಪಡಿಸಿ ತನ್ನ ಆತ್ಮನು ಅಖಂಡಚೈತನ್ಯರೂಪನೆಂದರಿತುಕೊಂಡು ಆ (ಅಸತ್ಪದಾರ್ಥ)ಗಳಿಂದ ಬಿಡುಗಡೆ ಹೊಂದಿ ತಾನೇ ಶಾಂತನಾಗುವನು.

## ನಿರ್ವಿಕಲ್ಪಸಮಾಧಿಯ ಹೆಗ್ಗಳಿಕೆ

ಅಜ್ಞಾನಹೃದಯಗ್ರನ್ಥೇರ್ನಿಶ್ಶೇಷವಿಲಯಸ್ತದಾ ।
ಸಮಾಧಿನಾಽವಿಕಲ್ಪೇನ ಯದಾಽದ್ವೈತಾತ್ಮದರ್ಶನಮ್ ॥ ೩೫೦ ॥

೩೫೦. ನಿರ್ವಿಕಲ್ಪಕಸಮಾಧಿಯಿಂದ ಯಾವಾಗ ಅದ್ವೈತಾತ್ಮನ ದರ್ಶನವಾಗುವದೋ ಆಗಲೇ ಅಜ್ಞಾನಹೃದಯಗ್ರಂಥಿಯು ತೀರ ನಾಶ ವಾಗುವದು.

ತ್ವಮಹಮಿದಮಿತೀಯಂ ಕಲ್ಪನಾ ಬುದ್ಧಿದೋಷಾತ್
ಪ್ರಭವತಿ ಪರಮಾತ್ಮನ್ಯದ್ವಯೇ ನಿರ್ವಿಶೇಷೇ ।
ಪ್ರವಿಲಸತಿ ಸಮಾಧಾವಸ್ಯ ಸರ್ವೋ ವಿಕಲ್ಪೋ
ವಿಲಯನಮುಪಗಚ್ಛೇದ್ವಸ್ತುತತ್ತ್ವಾವಧೃತ್ಯಾ ॥ ೩೫೧ ॥

೩೫೧. ತನಗೆರಡನೆಯದಿಲ್ಲದವನೂ ಯಾವದೊಂದು ವಿಶೇಷವೂ ಇಲ್ಲ ದವನೂ ಆಗಿರುವ ಪರಮಾತ್ಮನಲ್ಲಿ ನೀನು, ನಾನು, ಇದು– ಎಂಬ ಕಲ್ಪನೆಯು ಬುದ್ಧಿದೋಷದಿಂದ ಉಂಟಾಗಿರುತ್ತದೆ. ಈ ಸಾಧಕನಿಗೆ ಸಮಾಧಿಯು ಉಂಟಾಗುತ್ತಲೂ ಪರಮಾರ್ಥದ ತತ್ತ್ವವು ಗೊತ್ತಾಗುವದರಿಂದ ಈ ವಿಕಲ್ಪ ಗಳೆಲ್ಲವೂ ಅಡಗಿಹೋಗುವವು.

---

1. ಸದಸತ್ತುಗಳಿಗಿಂತ ಎಂದರೆ ಕಾರ್ಯಕಾರಣರೂಪದಲ್ಲಿರುವ ಪ್ರಕೃತಿಗಿಂತ– ಎಂದರ್ಥ. ಪ್ರಕೃತವಾದ ಸದಸತ್ಪದಾರ್ಥಗಳು ಇವಲ್ಲ.
2. ಸತ್ತಾದ ಆತ್ಮನನ್ನೂ ಅಸತ್ತಾದ ಅಹಂಕಾರವೇ ಮುಂತಾದವನ್ನೂ–ಎಂದರ್ಥ.

ಶಾನ್ತೋ ದಾನ್ತಃ ಪರಮುಪರತಃ ಕ್ಷಾನ್ತಿಯುಕ್ತಃ ಸಮಾಧಿಂ
ಕುರ್ವನ್ನಿತ್ಯಂ ಕಲಯತಿ ಯತಿಃ ಸ್ವಸ್ಯ ಸರ್ವಾತ್ಮಭಾವಮ್ ।
ತೇನಾವಿದ್ಯಾತಿಮಿರಜನಿತಾನ್ ಸಾಧು ದಗ್ಧ್ವಾ ವಿಕಲ್ಪಾನ್
ಬ್ರಹ್ಮಾಕೃತ್ಯಾ ನಿವಸತಿ ಸುಖಂ ನಿಷ್ಕ್ರಿಯೋ ನಿರ್ವಿಕಲ್ಪಃ ॥೩೭೨॥

೩೭೨. ಯತಿಯಾದವನು ಶಾಂತನಾಗಿ ದಾಂತನಾಗಿ ಚೆನ್ನಾಗಿ (ಕ್ರಿಯೆಗಳೆಲ್ಲವನ್ನೂ) ಬಿಟ್ಟು, ತಾಳ್ಮೆಯಿಂದ ಕೂಡಿ, ನಿತ್ಯವೂ ಸಮಾಧಿಯನ್ನು ಮಾಡುತ್ತಾ[1] ತನ್ನ ಸರ್ವಾತ್ಮಭಾವವನ್ನು ಅನುಭವಿಸುತ್ತಿರುವನು. ಅವಿದ್ಯೆಯ ತಿಮಿರದಿಂದುಂಟಾದ ವಿಕಲ್ಪಗಳನ್ನು ಅದರಿಂದ ಚೆನ್ನಾಗಿ ಸುಟ್ಟಿರುವ ಆನಂದದಿಂದ ನಿಷ್ಕ್ರಿಯನೂ ನಿರ್ವಿಕಲ್ಪನೂ ಆಗಿ ಬ್ರಹ್ಮರೂಪದಿಂದ ಇದ್ದುಕೊಂಡಿರುತ್ತಾನೆ.

ಸಮಾಹಿತಾ ಯೇ ಪ್ರವಿಲಾಪ್ಯ ಬಾಹ್ಯಂ
ಶ್ರೋತ್ರಾದಿಚೇತಃ ಸ್ವಮಹಂ ಚಿದಾತ್ಮನಿ
ತ ಏವ ಮುಕ್ತಾ ಭವಪಾಶಬನ್ಧೈ-
ರ್ನಾನ್ಯೇ ತು ಪಾರೋಕ್ಷ್ಯಕಥಾಭಿಧಾಯಿನಃ ॥೩೭೩॥

೩೭೩. ಯಾರು ತಮ್ಮ ಹೊರಗಿನ ಶ್ರೋತ್ರವೇ ಮುಂತಾದ (ಇಂದ್ರಿಯಗಳು) ಚಿತ್ತ, ಅಹಂಕಾರ–ಇವುಗಳನ್ನು ಚಿದಾತ್ಮನಲ್ಲಿ ಲಯಮಾಡಿಕೊಂಡು ಸಮಾಧಿಯಲ್ಲಿರುವರೋ ಸಂಸಾರಪಾಶದ ಬಿಗಿತಗಳಿಂದ ಬಿಡುಗಡೆಯಾಗಿರುವವರು ಅವರೇ ಹೊರತು ಪರೋಕ್ಷವಾಗಿರುವ ಮಾತುಗಳನ್ನಾಡುವ ಮಿಕ್ಕವರಲ್ಲ.

ಉಪಾಧಿಭೇದಾತ್ ಸ್ವಯಮೇವ ಭಿದ್ಯತೇ
ಚೋಪಾಧ್ಯಪೋಹೇ ಸ್ವಯಮೇವ ಕೇವಲಃ ।
ತಸ್ಮಾದುಪಾಧೇರ್ವಿಲಯಾಯ ವಿದ್ವಾನ್
ವಸೇತ್ ಸದಾಕಲ್ಪಸಮಾಧಿನಿಷ್ಠಯಾ ॥೩೭೪॥

೩೭೪. ಉಪಾಧಿಗಳು ಬೇರೆಬೇರೆಯಾಗಿರುವದರಿಂದ ಆತ್ಮನೇ ಬೇರೆಬೇರೆಯಾಗಿರುತ್ತಾನೆ. ಉಪಾಧಿಗಳನ್ನು ತೆಗೆದೊಗೆದರೆ ಆತ್ಮನು ಒಬ್ಬನೇ ಆಗುತ್ತಾನೆ. ಆದ್ದರಿಂದ ಉಪಾಧಿಯನ್ನು ಲಯಮಾಡುವದಕ್ಕಾಗಿ ಜ್ಞಾನಿಯಾದವನು ಯಾವಾಗಲೂ ನಿರ್ವಿಕಲ್ಪಸಮಾಧಿಯ ನಿಷ್ಠೆಯಲ್ಲಿಯೇ ಇರತಕ್ಕದ್ದು.

---

1. ಸಮಾಧಿಯಿಲ್ಲದೆ ಬರಿಯ ಶ್ರವಣಮಾತ್ರದಿಂದ ಸಮ್ಯಗ್ಜ್ಞಾನವಿಲ್ಲವೆಂಬುದಕ್ಕೆ ಶಂ. ಗೀ. ೯–೧೬, ೬–೪೭, ೮–೬ ಇವನ್ನು ನೋಡಿ. ಶ್ರವಣಜ್ಞಾನವು ವಸ್ತುಗೋಚರವಲ್ಲ, ಸೂಕ್ಷ್ಮಬುದ್ಧಿಯಿಂದ ಕೆಲವು ವೇಳೆ ಉಂಟಾದರೂ ಸ್ಥಿರವಾಗಿರದು – ಎಂಬುದಕ್ಕೆ ಶಂ. ಗೀ. ೨–೬೬ನ್ನು ನೋಡಿ.

ಸತಿ ಸಕ್ತೋ ನರೋ ಯಾತಿ ಸದ್ಭಾವಂ ಹ್ಯೇಕನಿಷ್ಠಯಾ ।
ಕೀಟಕೋ ಭ್ರಮರಂ ಧ್ಯಾಯನ್ ಭ್ರಮರತ್ವಾಯ ಕಲ್ಪತೇ ॥೩೫೮॥

೩೫೮. ಸದ್ರೂಪನಾದ ಪರಮಾತ್ಮನಲ್ಲಿ ಆಸಕ್ತನಾಗಿರುವ ಮನುಷ್ಯನು ಆ ಏಕನಿಷ್ಠೆಯಿಂದ (ತಾನೇ) ಸದ್ರೂಪವನ್ನು ಹೊಂದುತ್ತಾನೆ. ಹುಳುವು ದುಂಬಿಯನ್ನೇ ಚಿಂತಿಸುತ್ತಿದ್ದು (ತಾನೇ) ದುಂಬಿಯಾಗಿಬಿಡುತ್ತದೆ.

ಕ್ರಿಯಾನ್ತರಾಸಕ್ತಿ[1]ಮಪಾಸ್ಯ ಕೀಟಕೋ
ಧ್ಯಾಯನ್ ಯಥಾಲಿಂ[2] ಹ್ಯಲಿಭಾವಮೃಚ್ಛತಿ ।
ತಥೈವ ಯೋಗೀ ಪರಮಾತ್ಮತತ್ತ್ವಂ
ಧ್ಯಾತ್ವಾ ಸಮಾಯಾತಿ ತದೇಕನಿಷ್ಠಯಾ ॥೩೫೯॥

೩೫೯. ಹುಳುವು ಹೇಗೆ ಮಿಕ್ಕ ಕೆಲಸವನ್ನು ಬಿಟ್ಟು ದುಂಬಿಯನ್ನೇ ಚಿಂತಿಸುತ್ತಿದ್ದು ತಾನೂ ದುಂಬಿಯೇ ಆಗಿಬಿಡುವದೋ[3] ಹಾಗೆಯೇ ಯೋಗಿಯು ಪರಮಾತ್ಮತತ್ತ್ವವನ್ನು ತದೇಕನಿಷ್ಠನಾಗಿ ಧ್ಯಾನಮಾಡುತ್ತಿದ್ದು ಅದೇ ರೂಪವನ್ನು ಪಡೆದುಕೊಳ್ಳುತ್ತಾನೆ.

ಅತೀವ ಸೂಕ್ಷ್ಮಂ ಪರಮಾತ್ಮತತ್ತ್ವಂ
ನ ಸ್ಥೂಲದೃಷ್ಟ್ಯಾ ಪ್ರತಿಪತ್ತುಮರ್ಹತಿ ।
ಸಮಾಧಿನಾತ್ಯನ್ತಸುಸೂಕ್ಷ್ಮವೃತ್ತ್ಯಾ
ಜ್ಞಾತವ್ಯಮಾರ್ಯೈರತಿಶುದ್ಧಬುದ್ಧಿಭಿಃ ॥೩೬೦॥

೩೬೦. ಪರಮಾತ್ಮತತ್ತ್ವವು ಬಹಳ ಸೂಕ್ಷ್ಮವಾಗಿರುವದರಿಂದ[4] ಸ್ಥೂಲದೃಷ್ಟಿಯಿಂದ ಅದನ್ನು ಹೊಂದುವದಕ್ಕೆ ಆಗಲಾರದು. (ಅದನ್ನು) ಅತಿಶುದ್ಧವಾದ ಬುದ್ಧಿಯುಳ್ಳ ಆರ್ಯರಿಂದ ಸಮಾಧಿಯಲ್ಲಿ ಅತ್ಯಂತಸೂಕ್ಷ್ಮವಾದ ಮನೋವೃತ್ತಿಯಿಂದ[5] ಅರಿತುಕೊಳ್ಳತಕ್ಕದ್ದು.

1. 'ಕ್ರಿಯಾನ್ತರಾಂ ಶಕ್ತಿಮೇ' ಎಂಬುದು ಅಶುದ್ಧಪಾಠ.
2. 'ಧ್ಯಾಯನ್ನಲಿತ್ವಂ' ಎಂಬ ಪಾಠದಲ್ಲಿ ಪುನರುಕ್ತಿಯಾಗಿರುವಂತೆ ಕಾಣುತ್ತದೆ.
3. ಶಂ. ಗೀ. ೮-೩.
4. ಯಜ್ಞದಲ್ಲಿ ಇಷ್ಟಕಾಚಯನವೇ ಮುಂತಾದ ಸ್ಥೂಲವಿಷಯದ ಜ್ಞಾನಕ್ಕೂ ಅಭ್ಯಾಸವು ಬೇಕು; ಅತಿಸೂಕ್ಷ್ಮವಾದ ಆತ್ಮಜ್ಞಾನಕ್ಕೆ ಬೇಕೆಂದು ಹೇಳುವದೇನು? ಶಂ. ಗೀ. ೨-೬೭; ಘಟಾದಿಜ್ಞಾನದಂತೆ ಸ್ಥೂಲವಿಷಯಕವಲ್ಲದ್ದರಿಂದ ಪರಮಸೂಕ್ಷ್ಮವಾದ ಇದನ್ನು ಅರಿಯುವದಕ್ಕೆ ಆವೃತ್ತಿ ಬೇಕು. ಸೂಕ್ಷ್ಮವಾಗಿರುವದರಿಂದ ಪ್ರತ್ಯಯಾವೃತ್ತಿ ಬೇಕೆಂಬುದಕ್ಕೆ ಶಂ. ಗೀ. ೧೮-೫೦ನ್ನು ನೋಡಿ.
5. ಕ. ೧-೩-೧೨.

ಯಥಾ ಸುವರ್ಣಂ ಪುಟಪಾಕಶೋಧಿತಂ
ತ್ಯಕ್ತ್ವಾ ಮಲಂ ಸ್ವಾತ್ಮಗುಣಂ ಸಮೃಚ್ಛತಿ ।
ತಥಾ ಮನಃ ಸತ್ತ್ವರಜಸ್ತಮೋಮಲಂ
ಧ್ಯಾನೇನ ಸಂತ್ಯಜ್ಯ ಸಮೇತಿ ತತ್ತ್ವಮ್ ॥ ೩೫೮ ॥

೩೫೮. ಹೇಗೆ ಚಿನ್ನವನ್ನು ಪುಟವಿಟ್ಟು ಕಾಯಿಸಿ ಶುದ್ಧಮಾಡಿದರೆ (ಬೆಸುಗೆಹಾಕಿದ್ದ) ಕೀಳುವಸ್ತುಗಳನ್ನೆಲ್ಲ ಬಿಟ್ಟು ತನ್ನ ಗುಣವನ್ನೇ ಹೊಂದುವದೋ ಹಾಗೆಯೇ[1] ಧ್ಯಾನದಿಂದ ಮನಸ್ಸು ಸತ್ತ್ವರಜಸ್ತಮಸ್ಸುಗಳ ಮಲವನ್ನು ಬಿಟ್ಟು[2] (ಪರಮಾರ್ಥ)ತತ್ತ್ವವನ್ನೇ ಹೊಂದುತ್ತದೆ.

ನಿರನ್ತರಾಭ್ಯಾಸವಶಾತ್ತದಿತ್ಥಂ
ಪಕ್ವಂ ಮನೋ ಬ್ರಹ್ಮಣಿ ಲೀಯತೇ ಯದಾ ।
ತದಾ ಸಮಾಧಿಃ ಸವಿಕಲ್ಪವರ್ಜಿತಃ
ಸ್ವತೋಽದ್ವಯಾನನ್ದರಸಾನುಭಾವಕಃ ॥ ೩೫೯ ॥

೩೫೯. ಹೀಗೆ ಎಡೆಬಿಡದೆ ಅಭ್ಯಾಸಮಾಡಿದ್ದರ ಬಲದಿಂದ ಆ ಮನಸ್ಸು ಹೀಗೆ ಪಕ್ವವಾಗಿ[3] ಬ್ರಹ್ಮದಲ್ಲಿ ಯಾವಾಗ ಲಯವಾಗುತ್ತದೆಯೋ ಆಗ ತಾನೇ ಅದ್ವಯಾನಂದರಸದ ಅನುಭವವನ್ನು ಕೊಡುವ ವಿಕಲ್ಪರಹಿತವಾದ[4] ಸಮಾಧಿಯಾಗುತ್ತದೆ.

ಸಮಾಧಿನಾನೇನ ಸಮಸ್ತವಾಸನಾ
ಗ್ರನ್ಥೇರ್ವಿನಾಶೋಽಖಿಲಕರ್ಮನಾಶಃ ।
ಅನ್ತರ್ಬಹಿಃ ಸರ್ವತ ಏವ ಸರ್ವದಾ
ಸ್ವರೂಪವಿಸ್ಫೂರ್ತಿರಯತ್ನತಃ ಸ್ಯಾತ್ ॥ ೩೬೦ ॥

೩೬೦. ಈ ಸಮಾಧಿಯಿಂದ ಎಲ್ಲಾ ಬಗೆಯ ವಾಸನಾಗ್ರಂಥಿಯ ನಾಶವೂ ಎಲ್ಲಾ ಕರ್ಮಗಳ ನಾಶವೂ ಆಗಿ ಒಳಗೂ ಹೊರಗೂ ಎಲ್ಲಾ ಕಡೆಯಲ್ಲಿಯೂ (ಆತ್ಮ)ಸ್ವರೂಪವೇ ಯಾವ ಯತ್ನವೂ ಇಲ್ಲದೆ ತೋರಿಕೊಳ್ಳುವದು.[5]

---

1. ಅಭ್ಯಾಸಕ್ರಮದಿಂದ ತ್ರಿಗುಣಗಳನ್ನು ತಪ್ಪಿಸಿಕೊಳ್ಳಬಹುದೆಂಬುದಕ್ಕೆ ದೃಷ್ಟಾಂತವಿದು.

2. ಪ್ರತಿಬಂಧಕವಾದ ತ್ರಿಗುಣಗಳು, ಅವುಗಳ ಕಾರ್ಯವಾದ ವಿಪರೀತಪ್ರತ್ಯಯಗಳು, ರಾಗದ್ವೇಷಾದಿಗಳು– ಇವು ತೊಲಗಿ ಉಂಟಾಗುವ ಶುದ್ಧಸತ್ತ್ವಭಾವವೊಂದಿದೆ.

3. ಶಂ. ಗೀ. ೧೮– ರಲ್ಲಿ 'ಅಭ್ಯಾಸಾತ್ ಪಕ್ವವಿಜ್ಞಾನಃ' ಎಂಬ ಸ್ಮೃತಿಯನ್ನು ಉದಾಹರಿಸಿದೆ.

4. ಸವಿಕಲ್ಪಕನಿರ್ವಿಕಲ್ಪಕಸಮಾಧಿಗಳ ವಿವರವನ್ನು ಶಂ. ಗೀ. –೩ರಲ್ಲಿ ನೋಡಿ.

5. ಸರ್ವವಾಸನಾಕ್ಷಯ, ಸರ್ವಕಾಮಪ್ರಮೋಕ, ಸರ್ವಕರ್ಮಪ್ರವಿಲಯ– ಎಂಬ ಅನಿಷ್ಟಗಳ ನಿವೃತ್ತಿಯೂ ದೃಷ್ಟದುಃಖಾನುಪಲಬ್ಧಿ, ಸದಾನಂದಾನುಭೂತಿ, ವಿದೇಹಕೈವಲ್ಯ –ಎಂಬ ಇಷ್ಟಗಳ ಪ್ರಾಪ್ತಿಯೂ ಸಮಾಧಿಯ ಫಲವು. ಅನಿಷ್ಟನಿವೃತ್ತಿಯನ್ನು ಇಲ್ಲಿ ಹೇಳಿದೆ, ಇಷ್ಟಪ್ರಾಪ್ತಿಯನ್ನು ಹಿಂದಿನ ಶ್ಲೋಕದಲ್ಲಿ ಹೇಳಿದೆ. ಶಂ. ಗೀ ೪–೩೦.

ಶ್ರುತೇಃ ಶತಗುಣಂ ವಿದ್ಯಾನ್ಮನನಂ ಮನನಾದಪಿ ।
ನಿದಿಧ್ಯಾಸಂ ಲಕ್ಷಗುಣಮನನ್ತಂ ನಿರ್ವಿಕಲ್ಪಕಮ್ ॥೩೬೧॥

೩೬೧. ಶ್ರವಣಕ್ಕಿಂತ ಮನನವು ನೂರುಮಡಿ ಹೆಚ್ಚು, ಮನನಕ್ಕಿಂತ ನಿದಿಧ್ಯಾಸನವು ಲಕ್ಷದಷ್ಟು ಮೇಲಾದದ್ದು, ನಿರ್ವಿಕಲ್ಪಕ (ಸಮಾಧಿಯು ಅದಕ್ಕಿಂತ) ಅನಂತಗುಣವಾಗಿ ಮೇಲಾದದ್ದು.[1]

ನಿರ್ವಿಕಲ್ಪಕಸಮಾಧಿನಾ ಸ್ಫುಟಂ
ಬ್ರಹ್ಮತತ್ತ್ವಮವಗಮ್ಯತೇ ಧ್ರುವಮ್ ।
ನಾನ್ಯಥಾ ಚಲತಯಾ ಮನೋಗತೇಃ
ಪ್ರತ್ಯಯಾನ್ತರವಿಮಿಶ್ರಿತಂ ಭವೇತ್ ॥ ೩೬೨ ॥

೩೬೨. ನಿರ್ವಿಕಲ್ಪಕಸಮಾಧಿಯಿಂದ ನಿಶ್ಚಯವಾಗಿಯೂ ಬ್ರಹ್ಮತತ್ತ್ವವು ಸ್ಫುಟವಾಗಿ ಗೊತ್ತಾಗುತ್ತದೆ. ಅದಿಲ್ಲದಿದ್ದರೆ ಆಗದು. (ಏಕೆಂದರೆ) ಮನೋಗತಿಯು ಚಂಚಲವಾಗಿರುವದರಿಂದ ಬೇರೆ ಪ್ರತ್ಯಯಗಳಿಂದ ಬೆರೆತಿರುವದು.[2]

ಅತಃ ಸಮಾಧತ್ಸ್ವ ಯತೇನ್ದ್ರಿಯಃ ಸದಾ ।
ನಿರನ್ತರಂ ಶಾನ್ತಮನಾಃ ಪ್ರತೀಚಿ ।
ವಿಧ್ವಂಸಯ ಧ್ವಾನ್ತಮನಾದ್ಯವಿದ್ಯಯಾ
ಕೃತಂ ಸದೇಕತ್ವವಿಲೋಕನೇನ ॥ ೩೬೩ ॥

೩೬೩. ಆದ್ದರಿಂದ ಯಾವಾಗಲೂ ಇಂದ್ರಿಯಗಳನ್ನು ಬಿಗಿಹಿಡಿದುಕೊಂಡು ಒಂದೇಸಮನೆ ಮನಸ್ಸಿನಲ್ಲಿ ಶಾಂತಿಯನ್ನು ಹೊಂದಿ ಪ್ರತ್ಯಗಾತ್ಮನಲ್ಲಿ ಸಮಾಧಿಯನ್ನು ಹೊಂದುವನಾಗು. ಸದ್ರೂಪನಾದ ಆತ್ಮನು ಒಬ್ಬನೇ ಎಂಬುದನ್ನು ಕಂಡುಕೊಂಡು ಅನಾದ್ಯವಿದ್ಯೆಯಿಂದಾಗಿರುವ ಕತ್ತಲೆಯನ್ನು ಹೋಗಲಾಡಿಸಿಕೊ.

## ಧ್ಯಾನಮಾಡುವ ಕ್ರಮ

ಯೋಗಸ್ಯ ಪ್ರಥಮಂ ದ್ವಾರಂ ವಾಙ್ನಿರೋಧೋಽಪರಿಗ್ರಹಃ ।
ನಿರಾಶಾ ಚ ನಿರೀಹಾ ಚ ನಿತ್ಯಮೇಕಾನ್ತಶೀಲತಾ ॥೩೬೪॥

೩೬೪. ಯೋಗಕ್ಕೆ ಮೊದಲನೆಯ ಬಾಗಿಲೆಂದರೆ ಮಾತನ್ನು ನಿಲ್ಲಿಸುವದು, ತನ್ನದೆಂಬ ವಸ್ತುವಿಲ್ಲದೆ ಇರುವದು, ಯಾವ ಆಶೆಯೂ ಇಲ್ಲದಿರುವದು, ಯಾವ ಕರ್ಮವೂ ಇಲ್ಲದಿರುವದು. ಯಾವಾಗಲೂ ಏಕಾಂತದಲ್ಲಿರುವದು.[3]

1. ಇದಕ್ಕೆ ಪ್ರಮಾಣವಾಕ್ಯವು ಯಾವುದೆಂಬುದು ತಿಳಿಯಲಿಲ್ಲ ; ಶಂ. ಗೀ. ಯಲ್ಲಿ ಹುಡುಕಬೇಕು.

2. ಸಮಾಧಿಯಿಂದಲೇ ಮನಸ್ಸಿನ ಚಾಂಚಲ್ಯವು ನೀಗುವದು. ಶಂ. ಗೀ. ೧ –೫೨.

3. ಶಂ. ಗೀ. ೬–೧

ಏಕಾನ್ತಸ್ಥಿತಿರಿನ್ದ್ರಿಯೋಪರಮಣೇ ಹೇತುರ್ದಮಶ್ಚೇತಸಃ
ಸಂರೋಧೇ ಕರಣಂ ಶಮೇನ ವಿಲಯಂ ಯಾಯಾದಹಂವಾಸನಾ ।
ತೇನಾನನ್ದರಸಾನುಭೂತಿರಚಲಾ ಬ್ರಾಹ್ಮೀ ಸದಾ ಯೋಗಿನ-
ಸ್ತಸ್ಮಾಚ್ಚಿತ್ತನಿರೋಧ ಏವ ಸತತಂ ಕಾರ್ಯಃ ಪ್ರಯತ್ನಾನ್ಮುನೇಃ ॥

೩೬೫. ಏಕಾಂತದಲ್ಲಿದ್ದುಕೊಂಡಿರುವದು ಇಂದ್ರಿಯಗಳು ಹಿಮ್ಮೆಟ್ಟುವದಕ್ಕೆ ಕಾರಣವಾಗಿರುತ್ತದೆ ; ದಮವು ಚಿತ್ತವನ್ನು ತಡೆಗಟ್ಟುವದಕ್ಕೆ ಕಾರಣವಾಗುತ್ತದೆ : ಶಮದಿಂದ ಅಹಂವಾಸನೆಯು ಲಯವಾಗುತ್ತದೆ. ಇದರಿಂದ ಯೋಗಿಗೆ ಬ್ರಹ್ಮಸಂಬಂಧವಾದ ಆನಂದರಸದ ಅನುಭವವು ಯಾವಾಗಲೂ ಅಲುಗಾಡದೆ ಇರುತ್ತದೆ. ಆದ್ದರಿಂದ ಮುನಿಯಾದವನು ಯಾವಾಗಲೂ ಚಿತ್ತನಿರೋಧವನ್ನೇ[1] ಬಿಡದೆ ಪ್ರಯತ್ನಪೂರ್ವಕವಾಗಿ ಮಾಡುತ್ತಿರಬೇಕು.

ವಾಚಂ ನಿಯಚ್ಛಾತ್ಮನಿ ತಂ ನಿಯಚ್ಛ
ಬುದ್ಧೌ ಧಿಯಂ ಯಚ್ಛ ಚ ಬುದ್ಧಿಸಾಕ್ಷಿಣಿ ।
ತಂ ಚಾಪಿ ಪೂರ್ಣಾತ್ಮನಿ ನಿರ್ವಿಕಲ್ಪೇ
ವಿಲಾಪ್ಯ ಶಾನ್ತಿಂ ಪರಮಾಂ ಭಜಸ್ವ ॥ ೩೬೬ ॥

೩೬೬. ವಾಕ್ಕನ್ನು ಮನಸ್ಸಿನಲ್ಲಿ ತಡೆದಿಟ್ಟುಕೊ ; ಆ ಮನಸ್ಸನ್ನು ಬುದ್ಧಿಯಲ್ಲಿ ತಡೆದಿಟ್ಟುದೂ ; ಆ ಬುದ್ಧಿಯನ್ನು ಬುದ್ಧಿಸಾಕ್ಷಿಯಲ್ಲಿ ನಿಲ್ಲಿಸಿಕೊ ; ಆ ಸಾಕ್ಷಿಯನ್ನು ಯಾವ ವಿಕಲ್ಪವೂ ಇಲ್ಲದ ಪೂರ್ಣಾತ್ಮನಲ್ಲಿ ವಿಲಯಮಾಡಿಕೊಂಡು[3] ಪರಮಶಾಂತಿಯನ್ನು ಹೊಂದು.

ದೇಹಪ್ರಾಣೇನ್ದ್ರಿಯಮನೋಬುದ್ಧ್ಯಾದಿಭಿರುಪಾಧಿಭಿಃ ।
ಯೈರ್ಯೈರ್ವೃತ್ತೇಃ ಸಮಾಯೋಗಸ್ತತ್ತದ್ಭಾವೋಽಸ್ಯ ಯೋಗಿನಃ ॥

೩೬೭. ಆ ಯೋಗಿಗೆ ದೇಹ, ಪ್ರಾಣ, ಇಂದ್ರಿಯಗಳು, ಮನಸ್ಸು, ಬುದ್ಧಿ-ಮುಂತಾದ ಉಪಾಧಿಗಳಲ್ಲಿ ಯಾವಯಾವದರೊಡನೆ ಸಂಬಂಧವಾಗುವದೋ ಆಯಾ ಸ್ವರೂಪವುಂಟಾಗುತ್ತದೆ.[4]

---

1. ಶಂ. ಗೀ. ೬-೨೭.

2. ಇಲ್ಲಿ ಪಾತಂಜಲಯೋಗವನ್ನೇನೂ ಹೇಳಿಲ್ಲ. ನಾನೇ ಬ್ರಹ್ಮವು, ನಾನೇ ಎಲ್ಲವೂ-ಎಂಬ ಪ್ರತ್ಯಯಾವೃತ್ತಿಯನ್ನು ಮಾತ್ರ ಇಲ್ಲಿ ಹೇಳಿರುತ್ತದೆ ; ಆದರಿಂದಲೇ ನಿರ್ವಿಕಲ್ಪಕ ಸಮಾಧಿಯು ಸಿಕ್ಕುತ್ತದೆ ಎಂಬುದು ಗ್ರಂಥಕರ್ತರ ಆಶಯ. ಶಂ. ಗೀ. ೬-೧೪.

3. ಇಲ್ಲಿ ಹೇಳಿರುವದು ಕಠ ೧-೩. ೩ರಲ್ಲಿರುವದಕ್ಕಿಂತ ಸ್ವಲ್ಪ ಭಿನ್ನಕ್ರಮವಾಗಿದೆ. ಶಂ ಗೀ. ೬-೨೫ರಲ್ಲಿ ಶ್ರುತ್ಯನುಸಾರವಾಗಿಯೇ ಇದೆ. ಅಲ್ಲಿ ಬ್ರಹ್ಮಾಕಾರವೃತ್ತಿಯಿಂದ ಮತ್ತೊಂದು ಭಾವನೆಯಿಲ್ಲದಿರುವದೇ ಯೋಗವೆಂದಿರುವದನ್ನು ಲಕ್ಷಿಸಿರಿ.

4. ಆದ್ದರಿಂದ ಸದ್ಭಾವನೆಯಿಂದಲೇ ಇವು ತೊಲಗಬೇಕಾಗಿದೆ ಎಂದು ಭಾವ. ಶಂ. ಗೀ. ೬-೨೮.

ತನ್ನಿವೃತ್ತ್ಯಾ ಮುನೇಃ ಸಮ್ಯಕ್ಸರ್ವೋಪರಮಣಂ ಸುಖಮ್ ।
ಸಂದೃಶ್ಯತೇ ಸದಾನನ್ದರಸಾನುಭವವಿಪ್ಲವಃ ॥೩೬೮॥

೩೬೮. ಇವುಗಳನ್ನು ತೊಲಗಿಸಿಕೊಳ್ಳುವದರಿಂದ ಚೆನ್ನಾಗಿ ಎಲ್ಲದರಿಂದ ಲೂ ಉಪರತಿಯನ್ನು ಪಡೆಯುವ ಸುಖವು ಕಾಣಿಸಿಕೊಳ್ಳುವದು, ಸದಾನಂದ ರಸದ ಅನುಭವವು ಉಕ್ಕುವದು.[1]

## ವೈರಾಗ್ಯದ ಆವಶ್ಯಕತೆ

ಅನ್ತಸ್ತ್ಯಾಗೋ ಬಹಿಸ್ತ್ಯಾಗೋ ವಿರಕ್ತಸ್ಯೈವ ಯುಜ್ಯತೇ ।
ತ್ಯಜತ್ಯನ್ತರ್ಬಹಿಃ ಸಙ್ಗಂ ವಿರಕ್ತಸ್ತು ಮುಮುಕ್ಷಯಾ ॥೩೬೯॥

ಬಹಿಸ್ತು ವಿಷಯೈಃ ಸಙ್ಗಂ ತಥಾನ್ತರಹಮಾದಿಭಿಃ ।
ವಿರಕ್ತ ಏವ ಶಕ್ನೋತಿ ತ್ಯಕ್ತುಂ ಬ್ರಹ್ಮಣಿ ನಿಷ್ಠಿತಃ ॥೩೭೦॥

೩೬೯–೩೭೦. ಒಳಗಿನ ತ್ಯಾಗವೂ ಹೊರಗಿನ ತ್ಯಾಗವೂ ವಿರಕ್ತನಾದವನಿಗೇ ಯುಕ್ತವಾಗಿರುತ್ತದೆ. ವಿರಕ್ತನಾದವನೇ ಮೋಕ್ಷೇಚ್ಛೆಯಿಂದ ಒಳಗಿನ ಮತ್ತು ಹೊರಗಿನ ಸಂಗವನ್ನು ಬಿಡುತ್ತಾನೆ. ಹೊರಗೆ ವಿಷಯಗಳ ಸಂಗವನ್ನೂ ಒಳಗೆ ಅಹಂಕಾರಾದಿಗಳ ಸಂಗವನ್ನೂ ವಿರಕ್ತನಾದವನು ಮಾತ್ರ ಬ್ರಹ್ಮದಲ್ಲಿ ನಿಷ್ಠೆಯನ್ನು ಹೊಂದಿ ಬಿಡಬಲ್ಲನು.

ವೈರಾಗ್ಯಬೋಧೌ ಪುರುಷಸ್ಯ ಪಕ್ಷಿವತ್
ಪಕ್ಷೌ ವಿಜಾನೀಹಿ ವಿಚಕ್ಷಣ ತ್ವಮ್ ।
ವಿಮುಕ್ತಿಸೌಧಾಗ್ರತಲಾಧಿರೋಹಣಂ
ತಾಭ್ಯಾಂ ವಿನಾ ನಾನ್ಯತರೇಣ ಸಿಧ್ಯತಿ ॥೩೭೧॥

೩೭೧. ಎಲೈ ವಿವೇಕಿಯೆ, ವೈರಾಗ್ಯವೂ ಜ್ಞಾನವೂ ಹಕ್ಕಿಗೆ ಇರುವಂತೆ ಮನುಷ್ಯನಿಗೆ ಎರಡು ರೆಕ್ಕೆಗಳೆಂದು ತಿಳಿ. ಮುಕ್ತಿಯ ಉಪ್ಪರಿಗೆಯ ಮೇಲಕ್ಕೆ ಹಾರುವದು ಅವುಗಳೊಳಗೆ ಒಂದಿಲ್ಲದಿದ್ದರೂ ಸಾಧಿಸಲಾಗದು.

ಅತ್ಯನ್ತವೈರಾಗ್ಯವತಃ ಸಮಾಧಿಃ
ಸಮಾಹಿತಸ್ಯೈವ ದೃಢಪ್ರಬೋಧಃ ।
ಪ್ರಬುದ್ಧತತ್ತ್ವಸ್ಯ ಹಿ ಬನ್ಧಮುಕ್ತಿ-
ರ್ಮುಕ್ತಾತ್ಮನೋ ನಿತ್ಯಸುಖಾನುಭೂತಿಃ ॥೩೭೨॥

1. ಯೋಗಕ್ಕೆ ಪ್ರತಿಬಂಧರಹಿತವಾದ ಆತ್ಮೈಕತ್ವದರ್ಶನವೂ ಆನಂದಾನುಭವವೂ [illegible]. ಶಂ. ಗೀ. ೬-೨.

೩೭೫. ಅತ್ಯಂತವೈರಾಗ್ಯವುಳ್ಳಾತನಿಗೇ ಸಮಾಧಿಯುಂಟಾಗುವದು.[1] ಸಮಾಧಿಯುಂಟಾದವನಿಗೇ ದೃಢವಾದ ಜ್ಞಾನವಾಗುತ್ತದೆ[2]; ತತ್ತ್ವಜ್ಞಾನವುಳ್ಳವನಿಗೇ ಬಂಧದಿಂದ ಬಿಡುಗಡೆಯಾಗುವದು. ಮುಕ್ತಾತ್ಮನಾದವನಿಗೆ ನಿತ್ಯಾನಂದದ ಅನುಭವವುಂಟಾಗುವದು.

ವೈರಾಗ್ಯಾನ್ನ ಪರಂ ಸುಖಸ್ಯ ಜನಕಂ ಪಶ್ಯಾಮಿ ವಶ್ಯಾತ್ಮನ-
 ಸ್ತಚ್ಚೇಚ್ಛುದ್ಧತರಾತ್ಮಬೋಧಸಹಿತಂ ಸ್ವಾರಾಜ್ಯಸಾಮ್ರಾಜ್ಯಧುಕ್ ।
ಏತದ್ದ್ವಾರಮಜಸ್ರಮುಕ್ತಿಯುವತೇರ್ಯಸ್ಮಾತ್ ತ್ವಮಸ್ಮಾತ್ ಪರಂ
 ಸರ್ವತ್ರಾಸ್ಪೃಹಯಾ ಸದಾತ್ಮನಿ ಸದಾ ಪ್ರಜ್ಞಾಂ ಕುರು ಶ್ರೇಯಸೇ ॥

೩೭೬. ಅಂತಃಕರಣವನ್ನು ವಶದಲ್ಲಿಟ್ಟುಕೊಂಡಿರುವವನಿಗೆ ವೈರಾಗ್ಯಕ್ಕಿಂತ ಹೆಚ್ಚಿನದಾಗಿ ಸುಖವನ್ನುಂಟುಮಾಡುವ ಮತ್ತೊಂದನ್ನು ನಾನು ಕಾಣೆನು. ಅದು ಅತಿಶುದ್ಧವಾದ ಆತ್ಮಜ್ಞಾನದೊಡನೆ ಸೇರಿದ್ದರೆ ಸ್ವಾರಾಜ್ಯಸಾಮ್ರಾಜ್ಯವನ್ನು ಕರೆಯುವ (ಕಾಮಧೇನು)ವಾಗುವದು. ಇದೇ ನಿತ್ಯಮುಕ್ತಿಯೆಂಬ ತರುಣಿಯನ್ನು ಪಡೆದುಕೊಳ್ಳುವದಕ್ಕೆ ಬಾಗಿಲಾಗಿರುವದರಿಂದ ನೀನು ಮತ್ತೆ ಯಾವದರಲ್ಲಿಯೂ ಆಕ್ಕರೆಯನ್ನಿಟ್ಟುಕೊಳ್ಳದೆ ಸದ್ರೂಪಾತ್ಮನಲ್ಲಿ ಯಾವಾಗಲೂ ಪ್ರಜ್ಞೆಯನ್ನು ಮಾಡುತ್ತಿರು[3], (ಇದು) ಶ್ರೇಯಸ್ಸನ್ನುಂಟುಮಾಡುವದು.

ಆಶಾಂ ಛಿಂಧಿ ವಿಷೋಪಮೇಷು ವಿಷಯೇಷ್ವೇಷೈವ ಮೃತ್ಯೋಃ ಸೃತಿ-
 ಸ್ತ್ಯಕ್ತ್ವಾ ಜಾತಿಕುಲಾಶ್ರಮೇಷ್ವಭಿಮತಿಂ ಮುಂಚಾತಿದೂರಾತ್
 ಕ್ರಿಯಾಃ ।
ದೇಹಾದಾವಸತಿ ತ್ಯಜಾಽಽತ್ಮಧಿಷಣಾಂ ಪ್ರಜ್ಞಾಂ ಕುರುಷ್ವಾಽಽತ್ಮನಿ
 ತ್ವಂ ದ್ರಷ್ಟಾಸ್ಯಮಲೋಽಸಿ ನಿರ್ದ್ವಯಪರಂ ಬ್ರಹ್ಮಾಽಸಿ
 ಯದ್ವಸ್ತುತಃ ॥೩೭೭॥

೩೭೭. ವಿಷದಂತಿರುವ ವಿಷಯಗಳಲ್ಲಿ ಆಸೆಯನ್ನು ಕತ್ತರಿಸಿಹಾಕು; ಈ ಆಸೆಯೇ ಮೃತ್ಯುವಿನ ಹಾದಿಯು[5]; ಜಾತಿ, ಕುಲ, ಆಶ್ರಮ- ಇವುಗಳಲ್ಲಿ

1. ಮಹಾವೈರಾಗ್ಯವೂ ಮೋಕ್ಷೇಚ್ಛೆಯೂ ತತ್ಪರತ್ವವೂ ಜ್ಞಾನನಿಷ್ಠಾರೂಪವಾದ ಸಮಾಧಿಗೆ ಕಾರಣವೆಂದು ಶಂ. ಗೀ. ೩-೭ ರಲ್ಲಿ ಹೇಳಿದೆ.

2. ಶಂ. ಗೀ. ೨-೫೫.

3. 'ವಿಜ್ಞಾಯ ಪ್ರಜ್ಞಾಂ ಕುರ್ವೀತ' ಎಂಬ ಶ್ರುತಿಯನ್ನು ಲಕ್ಷ್ಯದಲ್ಲಿಟ್ಟು ಹೇಳಿದ ಮಾತಿದು. ಶಂ. ಗೀ. ೬-೩, ೬- ೦; ಬೃ. ವಾ. ೪- -೭೦ ರಲ್ಲಿರುವ ಪೂರ್ವಪಕ್ಷವನ್ನು ಇದಕ್ಕೆ ಹೋಲಿಸಿರಿ.

4. 'ಕೃತಿಃ' ಪಾ॥

5. 'ಸೃತಿಃ' ಎಂಬುದಕ್ಕೆ ಬದಲು 'ಕೃತಿಃ' ಎಂದಿದ್ದರೆ ಮೃತ್ಯುವಿನ ಕೆಲಸವು ಎಂದು ಕನ್ನಡಿಸಿಕೊಳ್ಳಬೇಕು.

ಅಭಿಮಾನವನ್ನು ಬಿಟ್ಟು ಕರ್ಮಗಳನ್ನು ಬಲುದೂರದಿಂದಲೇ ಬಿಟ್ಟುಬಿಡು. ಅಸದ್ರೂಪವಾಗಿರುವ ದೇಹವೇ ಮುಂತಾದದ್ದರಲ್ಲಿ ಅದೇ ನಾನೆಂಬ ಬುದ್ಧಿಯನ್ನು ಬಿಟ್ಟು ಆತ್ಮನಲ್ಲಿಯೇ ಪ್ರಜ್ಞೆಯನ್ನು ಮಾಡಿಕೊ. ಏಕೆಂದರೆ ನೀನು ಪರಮಾರ್ಥವಾಗಿ ನೋಡುವ (ಸಾಕ್ಷಿಯಾಗಿರುವೆ), ನಿರ್ಮಲನಾಗಿರುವ ಅದ್ವಿತೀಯಪರಬ್ರಹ್ಮವೇ ಆಗಿರುವೆ.

## ಧ್ಯಾನವನ್ನು ಮಾಡಬೇಕೆಂಬ ಉಪದೇಶ

ಲಕ್ಷ್ಯೇ ಬ್ರಹ್ಮಣಿ ಮಾನಸಂ ದೃಢತರಂ ಸಂಸ್ಥಾಪ್ಯ ಬಾಹ್ಯೇನ್ದ್ರಿಯಂ
ಸ್ವಸ್ಥಾನೇ ವಿನಿವೇಶ್ಯ ನಿಶ್ಚಲತನುಶ್ಚೋಪೇಕ್ಷ್ಯ ದೇಹಸ್ಥಿತಿಮ್ ।
ಬ್ರಹ್ಮಾತ್ಮೈಕ್ಯಮುಪೇತ್ಯ ತನ್ಮಯತಯಾ ಚಾಖಣ್ಡವೃತ್ತ್ಯಾನಿಶಂ
ಬ್ರಹ್ಮಾನನ್ದರಸಂ ಪಿಬಾತ್ಮನಿ ಮುದಾ ಶೂನ್ಯೈಃ ಕಿಮನ್ಯೈರ್ಭ್ರಮೈಃ[1] ॥

೩೮೩. ಲಕ್ಷ್ಯವಾಗಿರುವ ಬ್ರಹ್ಮದಲ್ಲಿ ಮನಸ್ಸನ್ನು ಗಟ್ಟಿಯಾಗಿ ನಿಲ್ಲಿಸಿಕೊಂಡು, ಹೊರಗಿನ ಇಂದ್ರಿಯಗಳನ್ನು ತಮ್ಮ ತಮ್ಮ ಗೋಳಕದಲ್ಲಿಯೇ ಇಟ್ಟು, ಶರೀರವನ್ನು ಅಲುಗಾಡಿಸದೆ, ದೇಹವು ಹೇಗೆ ನಿಂತೀತೆಂಬುದನ್ನು ಮನಸ್ಸಿಗೆ ತಾರದೆ, ಬ್ರಹ್ಮಾತ್ಮೈಕ್ಯವನ್ನು ಹೊಂದಿ ಅದೇ ರೂಪದಿಂದಿದ್ದುಕೊಂಡು ಅಖಂಡವೃತ್ತಿಯಿಂದ[2] ಯಾವಾಗಲೂ ಬ್ರಹ್ಮಾನಂದರಸವನ್ನು ಸಂತೋಷದಿಂದ ಕುಡಿಯುತ್ತಿರು. ಮಿಕ್ಕ ಬರಿಯ ಭ್ರಮೆಗಳಿಂದೇನಾಗಬೇಕು ?

ಅನಾತ್ಮಚಿನ್ತನಂ ತ್ಯಕ್ತ್ವಾ ಕಶ್ಮಲಂ ದುಃಖಕಾರಣಮ್ ।
ಚಿನ್ತಯಾತ್ಮಾನಮಾನನ್ದರೂಪಂ ಯನ್ಮುಕ್ತಿಕಾರಣಮ್ ॥ ೩೮೪ ॥

೩೮೪. ಕೊಳಕೂ ದುಃಖಕ್ಕೆ ಕಾರಣವೂ ಆಗಿರುವ ಅನಾತ್ಮಚಿಂತನೆಯನ್ನು ಬಿಟ್ಟು ಕಳೆದು ಆನಂದರೂಪವಾಗಿರುವ ಆತ್ಮನನ್ನೇ ಚಿಂತಿಸುತ್ತಿರು ; ಅದೇ ಮುಕ್ತಿಗೆ ಕಾರಣವು.

ಏಷ ಸ್ವಯಂಜ್ಯೋತಿರಶೇಷಸಾಕ್ಷೀ
ವಿಜ್ಞಾನಕೋಶೇ[3] ವಿಲಸತ್ಯಜಸ್ರಮ್ ।
ಲಕ್ಷ್ಯಂ ವಿಧಾಯೈನಮಸದ್ವಿಲಕ್ಷಣ- (?)
ಮಖಣ್ಡವೃತ್ತ್ಯಾತ್ಮತಯಾನುಭಾವಯ ॥೩೮೫॥

---

1. 'ಕಿಮನ್ಯೈರ್ಭ್ರಮೈಃ' ಪಾ॥
2. ಅಖಂಡಾಕಾರವೃತ್ತಿ ಎಂಬ ಮಾತು ಗ್ರಂಥಕಾರರಿಗೆ ಬಹಳ ಪ್ರಿಯ.
3. 'ವಿಜ್ಞಾನಕೋಶೋ' ಪಾ॥

೩೭೭. ಎಲ್ಲಕ್ಕೂ ಸಾಕ್ಷಿಯಾಗಿರುವ ಈ ಸ್ವಯಂಪ್ರಕಾಶನಾದ ಆತ್ಮನು ವಿಜ್ಞಾನಕೋಶದಲ್ಲಿ ಯಾವಾಗಲೂ ಹೊಳೆಯುತ್ತಿರುತ್ತಾನೆ. ಅಸತ್ಪದಾರ್ಥಗಳಿಗಿಂತ ಬೇರೆಯಾಗಿರುವ ಈತನನ್ನು ಲಕ್ಷ್ಯವಾಗಿಟ್ಟುಕೊಂಡು ಅಖಂಡವೃತ್ತಿಯಿಂದ ಇವನೇ ನಾನೆಂದು ಭಾವಿಸುತ್ತಿರು.

ಏತಮಚ್ಛಿನ್ನಯಾ ವೃತ್ತ್ಯಾ ಪ್ರತ್ಯಯಾನ್ತರಶೂನ್ಯಯಾ ।
ಉಲ್ಲೇಖಯನ್ ವಿಜಾನೀಯಾತ್ ಸ್ವಸ್ವರೂಪತಯಾ ಸ್ಫುಟಮ್ ॥

೩೭೮. ಈತನನ್ನು ಮತ್ತೊಂದು (ಬಗೆಯ) ಪ್ರತ್ಯಯವಿಲ್ಲದ ಕಡಿವಡೆಯದ ವೃತ್ತಿಯಿಂದ ಚಿಂತಿಸುತ್ತಾ ಇವನೇ ತನ್ನ ಸ್ವರೂಪವೆಂದು ಸ್ಫುಟವಾಗಿ ಅರಿತುಕೊಳ್ಳಬೇಕು.

ಅತ್ರಾತ್ಮತ್ವಂ ದೃಢೀಕುರ್ವನ್ನಹಮಾದಿಷು ಸಂತ್ಯಜನ್ ।
ಉದಾಸೀನತಯಾ ತೇಷು ತಿಷ್ಠೇತ್ ಸ್ಫುಟಘಟಾದಿವತ್[1] ॥೩೭೯॥

೩೭೯. ಇದರಲ್ಲಿಯೇ ಆತ್ಮಭಾವವನ್ನು ಗಟ್ಟಿಗೊಳಿಸಿಕೊಳ್ಳುತ್ತಾ[2] ಅಹಂಕಾರವೇ ಮುಂತಾದವುಗಳಲ್ಲಿ (ಆ ಭಾವನೆಯನ್ನು) ಬಿಡುತ್ತಾ ಒಡೆದ ಗಡಿಗೆಯೇ ಮುಂತಾದವುಗಳಲ್ಲಿ ಹೇಗೋ ಹಾಗೆ ಅವುಗಳಲ್ಲಿ ಉದಾಸೀನನಾಗಿರಬೇಕು.

## ಪರಮಾತ್ಮದರ್ಶನ

ವಿಶುದ್ಧಮನ್ತಃಕರಣಂ ಸ್ವರೂಪೇ
ನಿವೇಶ್ಯ ಸಾಕ್ಷಿಣ್ಯವಬೋಧಮಾತ್ರೇ ।
ಶನೈಃ ಶನೈರ್ನಿಶ್ಚಲತಾಮುಪಾನಯನ್
ಪೂರ್ಣಂ ಸ್ವಮೇವಾನುವಿಲೋಕಯೇತ್ ತತಃ ॥ ೩೮೦ ॥

೩೮೦. ತನ್ನ ರೂಪವಾದ ಕೇವಲಚೈತನ್ಯಸ್ವರೂಪನಾದ ಸಾಕ್ಷಿಯಲ್ಲಿಯೇ ವಿಶುದ್ಧವಾದ ಅಂತಃಕರಣವನ್ನು ಇಟ್ಟುಕೊಂಡು ಮೆಲ್ಲಮೆಲ್ಲಗೆ ನಿಶ್ಚಲತೆಯನ್ನು ಹೊಂದಿಸಿ ಆಮೇಲೆ ಪೂರ್ಣನಾದ[4] ಆತ್ಮನನ್ನೇ ನೋಡಬೇಕು.

---

1. 'ಘಟಪಟಾದಿವತ್' ಎಂಬುದಕ್ಕಿಂತ ಇದೇ ಮೇಲು.

3. ಆತ್ಮನಲ್ಲಿ ಆತ್ಮಭಾವನೆಯನ್ನು ಗಟ್ಟಿಗೊಳಿಸಿಕೊಳ್ಳಬೇಕು—ಎಂದದ್ದರಿಂದ ಇಲ್ಲಿ ಭಾವನೆಯನ್ನೇ ಹೇಳಿದಂತೆ ಆಗಿದೆ.

3, 'ಪೂರ್ಣಾತ್ಮನೇವ' ಎಂಬುದಕ್ಕಿಂತ ಉತ್ತಮಪಾಠವಿದು.

4. ಪೂರ್ಣನೆಂದರೆ ಅದ್ವಿತೀಯನೂ ನಿತ್ಯಶುದ್ಧನೂ ಆನಂದೈಕರಸನೂ ಎಂದು ಹೇಳಿದಂತೆ. ಶಂ. ಗೀ. ೨–೨೪.

ದೇಹೇನ್ದ್ರಿಯಪ್ರಾಣಮನೋಽಹಮಾದಿಭಿಃ
  ಸ್ವಾಜ್ಞಾನಕ್ಲೃಪ್ತೈರಖಿಲೈರುಪಾಧಿಭಿಃ ।
ವಿಮುಕ್ತಮಾತ್ಮಾನಮಖಣ್ಡರೂಪಂ
  ಪೂರ್ಣಂ ಮಹಾಕಾಶಮಿವಾವಲೋಕಯೇತ್ ॥೩೮೧॥

೩೮೧. ತನ್ನ ಅಜ್ಞಾನದಿಂದ ಕಲ್ಪಿತವಾಗಿರುವ ದೇಹ, ಇಂದ್ರಿಯ, ಪ್ರಾಣ, ಮನಸ್ಸು, ಅಹಂಕಾರ- ಮುಂತಾದ ಯಾವ ಉಪಾಧಿಗಳೂ ಇಲ್ಲದ ಅಖಂಡರೂಪನಾದ ಪೂರ್ಣಾತ್ಮನನ್ನು ಮಹಾಕಾಶದಂತೆ[1] ನೋಡಬೇಕು.

ಘಟಕಲಶಕುಸೂಲಸೂಚಿಮುಖ್ಯೈ-
  ರ್ಗಗನಮುಪಾಧಿಶತೈರ್ವಿಮುಕ್ತಮೇಕಮ್ ।
ಭವತಿ ನ ವಿವಿಧಂ ತಥೈವ ಶುದ್ಧಂ
  ಪರಮಹಮಾದಿವಿಮುಕ್ತಮೇಕಮೇವ ॥೩೮೨॥

೩೮೨. ಗಡಿಗೆ, ಚರಿಗೆ, ಕೊಪ್ಪರಿಗೆ, ಸೂಜಿ[2]- ಮುಂತಾದ ನೂರಾರು ಉಪಾಧಿಗಳ ಗೊಡವೆಯಿಲ್ಲದೆ ಆಕಾಶವು ತಾನೊಂದೇ ಆಗಿರುವದೇ ಹೊರತು ಬಗೆಬಗೆಯಾಗಿರುವದಿಲ್ಲ. ಅದರಂತೆ ಅಹಂಕಾರವೇ ಮುಂತಾದವುಗಳ ಗೊಡವೆಯಿಲ್ಲದ ಶುದ್ಧವಾದ ಪರವಸ್ತುವು ಒಂದೇ ಆಗಿರುತ್ತದೆ.

ಬ್ರಹ್ಮಾದಿಸ್ತಮ್ಬಪರ್ಯನ್ತಾ ಮೃಷಾಮಾತ್ರಾ ಉಪಾಧಯಃ ।
ತತಃ ಪೂರ್ಣಂ ಸ್ವಮಾತ್ಮಾನಂ ಪಶ್ಯೇದೇಕಾತ್ಮನಾ ಸ್ಥಿತಮ್ ॥೩೮೩॥

೩೮೩. ಬ್ರಹ್ಮನಿಂದ ಹಿಡಿದು ಸ್ತಂಬದ ಪರ್ಯಂತವಾಗಿರುವ ಉಪಾಧಿಗಳು ತೀರ ಹುಸಿಯೇ ಆಗಿರುತ್ತವೆ. ಆದ್ದರಿಂದ ಒಂದೇ ರೂಪದಿಂದ ಇರುತ್ತಿರುವ ತನ್ನ ಆತ್ಮನು ಪೂರ್ಣನೆಂದು ಕಾಣಬೇಕು.

ಯತ್ರ ಭ್ರಾನ್ತ್ಯಾ ಕಲ್ಪಿತಂ ಯದ್ವಿವೇಕೇ
  ತತ್ತನ್ಮಾತ್ರಂ ನೈವ ತಸ್ಮಾದ್ವಿಭಿನ್ನಮ್ ।
ಭ್ರಾನ್ತೇರ್ನಾಶೇ ಭ್ರಾನ್ತಿದೃಷ್ಟಾಹಿತತ್ತ್ವಂ
  ರಜ್ಜುಸ್ತದ್ವದ್ವಿಶ್ವಮಾತ್ಮಸ್ವರೂಪಮ್ ॥೩೮೪॥

೩೮೪. ಯಾವದರಲ್ಲಿ ಯಾವದು ಭ್ರಾಂತಿಯಿಂದ ಕಲ್ಪಿತವಾಗಿರುವದೋ ಅದು ಅವೆರಡನ್ನೂ ವಿಂಗಡಿಸಿಕೊಂಡಾಗ ಆ (ಆಧಾರ)ಮಾತ್ರವೇ ಆಗಿರುವದೇ ಹೊರತು ಅದಕ್ಕಿಂತ ಬೇರೆಯಾಗಿರುವದಿಲ್ಲ. ಭ್ರಾಂತಿಯು ನಾಶವಾದರೆ ಭ್ರಾಂತಿ

1. ಇದರ ಅಭಿಪ್ರಾಯವನ್ನು ಮುಂದಿನ ಶ್ಲೋಕದಲ್ಲಿ ವರ್ಣಿಸಿದೆ.
2. ಶಂ ಗೀ. ೬-೪೩

ಯಿಂದ ಕಂಡ ಹಾವಿನ ತತ್ತ್ವವು ಹಗ್ಗವೇ ಆಗಿರುತ್ತದೆ; ಇದರಂತೆ ವಿಶ್ವವು ಆತ್ಮಸ್ವರೂಪವೇ ಆಗಿರುತ್ತದೆ.

ಸ್ವಯಂ ಬ್ರಹ್ಮಾ ಸ್ವಯಂ ವಿಷ್ಣುಃ ಸ್ವಯಮಿನ್ದ್ರಃ ಸ್ವಯಂ ಶಿವಃ ।
ಸ್ವಯಂ ವಿಶ್ವಮಿದಂ ಸರ್ವಂ ಸ್ವಸ್ಮಾದನ್ಯನ್ನ ಕಿಞ್ಚನ ॥೩೮೫॥

೩೮೫. ತಾನೇ ಬ್ರಹ್ಮವು, ತಾನೇ ವಿಷ್ಣುವು, ತಾನೇ ಇಂದ್ರನು, ತಾನೇ ಶಿವನು, ತಾನೇ ಈ ವಿಶ್ವವೆಲ್ಲವೂ ಆಗಿರುತ್ತಾನೆ. ತನಗಿಂತ ಬೇರೆ ಯಾವದೊಂದೂ ಇರುವದಿಲ್ಲ.

ಅನ್ತಃ ಸ್ವಯಂ ಚಾಪಿ ಬಹಿಃ ಸ್ವಯಂ ಚ
ಸ್ವಯಂ ಪುರಸ್ತಾತ್ ಸ್ವಯಮೇವ ಪಶ್ಚಾತ್ ।
ಸ್ವಯಂ ಹ್ಯವಾಚ್ಯಾಂ ಸ್ವಯಮಪ್ಯುದೀಚ್ಯಾಂ
ತಥೋಪರಿಷ್ಟಾತ್ ಸ್ವಯಮಪ್ಯಧಸ್ತಾತ್ ॥ ೩೮೬ ॥

೩೮೬. ತಾನೇ ಒಳಗೆ, ತಾನೇ ಹೊರಗೆ; ತಾನೇ ಮುಂದುಗಡೆ, ತಾನೇ ಹಿಂದ ಗಡೆ; ತಾನೇ ಬಲಕ್ಕೆ, ತಾನೇ ಎಡಕ್ಕೆ; ಇದರಂತೆ ತಾನೇ ಮೇಲೆ, ಕೆಳಗೂ ತಾನೇ.[1]

ತರಙ್ಗಫೇನಭ್ರಮಬುದ್ಬುದಾದಿ
ಸರ್ವಂ ಸ್ವರೂಪೇಣ ಜಲಂ ಯಥಾ ತಥಾ ।
ಚಿದೇವ ದೇಹಾದ್ಯಹಮನ್ತಮೇತತ್
ಸರ್ವಂ ಚಿದೇವೈಕರಸಂ ವಿಶುದ್ಧಮ್ ॥ ೩೮೭ ॥

೩೮೭. ತೆರೆ, ನೊರೆ, ಸುಳಿ, ಗುಳ್ಳೆ– ಮುಂತಾದದ್ದೆಲ್ಲವೂ[2] ಹೇಗೆ ತನ್ನ ನಿಜವಾದ ರೂಪದಿಂದ ನೀರೇ ಆಗಿರುವದೋ ಇದರಂತೆ ದೇಹವೇ ಮುಂತಾಗಿ ಅಹಂಕಾರದವರೆಗಿರುವ ಇದೆಲ್ಲವೂ ಚಿನ್ಮಾತ್ರವೇ, ಏಕರಸವಾದ ವಿಶುದ್ಧಚಿನ್ಮಾತ್ರವೇ.

ಸದೇವೇದಂ ಸರ್ವಂ ಜಗದವಗತಂ ವಾಙ್ಮನಸಯೋಃ
ಸತೋಽನ್ಯನ್ನಾಸ್ತ್ಯೇವ ಪ್ರಕೃತಿಪರಸೀಮ್ನಿ ಸ್ಥಿತವತಃ ।
ಪೃಥಕ್ ಕಿಂ ಮೃತ್ಸ್ನಾಯಾಃ ಕಲಶಘಟಕುಮ್ಭಾದ್ಯವಗತಂ
ವದತ್ಯೇಷ ಭ್ರಾನ್ತಸ್ತ್ವಮಹಮಿತಿ ಮಾಯಾಮದಿರಯಾ ॥

1. ಛಾಂ. ೭-೨೫-೧,೨ ರ ಅರ್ಥವಿದು.

2. ಶಂ. ಗೀ. ೬-೩೫.

೩೮೮. ಪ್ರಕೃತಿಯು ಎಲ್ಲೆಯನ್ನು ದಾಟಿ ನಿಂತಿರುವಾತನಿಗೆ ವಾಕ್ಕಿಗೂ ಮನಸ್ಸಿಗೂ ತೋರುತ್ತಿರುವ ಜಗತ್ತೆಲ್ಲವೂ ಸನ್ಮಾತ್ರವೇ ; ಸತ್ತಿಗಿಂತ ಬೇರೆಯಾದದ್ದು ಇಲ್ಲವೇ ಇಲ್ಲ. ಚರಿಗೆ, ಗಡಿಗೆ, ಹರವಿ– ಮುಂತಾದದ್ದು ಮಣ್ಣಿಗಿಂತ ಬೇರೆಯಾಗಿರುವದೇನು ? (ಆದರೂ) ಈ ಭ್ರಾಂತನು ಮಾಯೆಯೆಂಬ ಮದ್ಯದ (ಅಮಲಿ)ನಿಂದ 'ನೀನು', 'ನಾನು' ಎನ್ನುತ್ತಿದಾನಲ್ಲ !

ಕ್ರಿಯಾಸಮಭಿಹಾರೇಣ ಯತ್ರ ನಾನ್ಯದಿತಿ ಶ್ರುತಿಃ ।
ಬ್ರವೀತಿ ದ್ವೈತರಾಹಿತ್ಯಂ ಮಿಥ್ಯಾಧ್ಯಾಸನಿವೃತ್ತಯೇ ॥ ೩೮೯ ॥

೩೮೯. 'ಯತ್ರ ನಾನ್ಯತ್' (ಛಾಂ. ೭–೨೪–೧) ಎಂಬ ಶ್ರುತಿಯು ಮಿಥ್ಯೆಯಾಗಿರುವ ಅಧ್ಯಾಸವನ್ನು ತೊಲಗಿಸುವದಕ್ಕಾಗಿ ಕ್ರಿಯೆಗಳನ್ನು ಒಟ್ಟುಗೂಡಿಸಿ[1] ಮತ್ತೆಮತ್ತೆ ದ್ವೈತವನ್ನು ಇಲ್ಲವೆನ್ನುತ್ತದೆ.

ಆಕಾಶವನ್ನಿರ್ಮಲನಿರ್ವಿಕಲ್ಪ–
ನಿಸ್ಸೀಮನಿಷ್ಪನ್ದನನಿರ್ವಿಕಾರಮ್ ।
ಅನ್ತರ್ಬಹಿಃ ಶೂನ್ಯಮನನ್ಯಮದ್ವಯಂ
ಸ್ವಯಂ ಪರಂ ಬ್ರಹ್ಮ ಕಿಮಸ್ತಿ ಬೋಧ್ಯಮ್ ॥ ೩೯೦ ॥

೩೯೦. ಆಕಾಶದಂತೆ ನಿರ್ಮಲನಾಗಿ, ಯಾವ ವಿಕಲ್ಪವೂ ಇಲ್ಲದೆ, ಎಲ್ಲೆಕಟ್ಟಿಲ್ಲದೆ, ಅಲುಗಾಡದೆ, ಮಾರ್ಪಾಡಿಲ್ಲದೆ, ಒಳಗುಹೊರಗೆಂಬುದಿಲ್ಲದೆ ನಮಗಿಂತ ಬೇರೆಯಲ್ಲದೆ, ತನಗೆರಡನೆಯದಿಲ್ಲದಿರುವ ಪರಬ್ರಹ್ಮವೇ ತಾನು. (ಇದಕ್ಕಿಂತ ಬೇರೆ) ತಿಳಿಯತಕ್ಕದ್ದೇನಿದೆ ?

ವಕ್ತವ್ಯಂ ಕಿಮು ವಿದ್ಯತೇಽತ್ರ ಬಹುಧಾ ಬ್ರಹ್ಮೈವ ಜೀವಃ ಸ್ವಯಂ ಬ್ರಹ್ಮೈತಜ್ಜಗದಾತತಂ ನು ಸಕಲಂ ಬ್ರಹ್ಮಾದ್ವಿತೀಯಂ ಶ್ರುತೇಃ[2] । ಬ್ರಹ್ಮೈವಾಹಮಿತಿ ಪ್ರಬುದ್ಧಮತಯಃ ಸಂತ್ಯಕ್ತಬಾಹ್ಯಾಃ ಸ್ಫುಟಂ ಬ್ರಹ್ಮೀಭೂಯ ವಸನ್ತಿ ಸನ್ತತಚಿದಾನನ್ದಾತ್ಮನೈತದ್ಧ್ರುವಮ್[3] ॥

೩೯೧. ಇಲ್ಲಿ (ಹೆಚ್ಚಾಗಿ) ಹೇಳತಕ್ಕದ್ದೇನಿದೆ ? ಶ್ರುತಿಪ್ರಮಾಣದಿಂದ[4] ಜೀವನು ತಾನೇ ಬ್ರಹ್ಮವಾಗಿರುತ್ತಾನೆ. ಈ ಹರಡಿರುವ ಜಗತ್ತೆಲ್ಲವೂ ಬ್ರಹ್ಮವೇ,

1. ಮತ್ತೊಂದನ್ನು ಕಾಣುವದಿಲ್ಲ, ಮತ್ತೊಂದನ್ನು ಕೇಳುವದಿಲ್ಲ, ಮತ್ತೊಂದನ್ನು ಅರಿಯುವದಿಲ್ಲ – ಎಂದು ದ್ವಿತೀಯವಸ್ತುವಿನ ಸಂಬಂಧದ ಕ್ರಿಯೆಯೇ ಇಲ್ಲವೆಂದು ಹೇಳುತ್ತದೆ ಎಂದರ್ಥ.

2. 'ಶ್ರುತಿಃ' ಪಾ||

3. '–ನ್ನೈವ ಧ್ರುವವತ್' ಪಾ||

4. ಶಂ. ಗೀ. ೬೩–ರಲ್ಲಿ ಉದಾಹರಿಸಿರುವ ಶ್ರುತಿಗಳನ್ನು ನೋಡಿ.

ಬ್ರಹ್ಮವು ತನಗೆರಡನೆಯದಿಲ್ಲದ್ದೇ. 'ಬ್ರಹ್ಮನೇ ನಾನು' ಎಂದು ತಿಳಿದುಕೊಂಡಿರುವ ಬುದ್ಧಿಯುಳ್ಳವರು ಹೊರಗಿನದೆಲ್ಲವನ್ನೂ ತ್ಯಜಿಸಿ ಸ್ಫುಟವಾಗಿ ಬ್ರಹ್ಮವೇ ಆಗಿ ಎಡೆಬಿಡದಿರುವ ಚಿದಾನಂದಾತ್ಮರೂಪದಿಂದಲೇ ಇರುವರು. ಇದು ನಿಶ್ಚಯವು.

ಜಹಿ ಮಲಮಯಕೋಶೇಽಹಂಧಿಯೋತ್ಥಾಪಿತಾಽಽಶಾಂ
ಪ್ರಸಭಮನಿಲಕಲ್ಪೇ ಲಿಙ್ಗದೇಹೇಽಪಿ ಪಶ್ಚಾತ್ ।
ನಿಗಮಗದಿತಕೀರ್ತಿಂ ನಿತ್ಯಮಾನನ್ದಮೂರ್ತಿಂ[1]
ಸ್ವಯಮಿತಿ ಪರಿಚೀಯ ಬ್ರಹ್ಮರೂಪೇಣ ತಿಷ್ಠ ॥೭೯೨॥

೭೯೨. ಮಲಪೂರ್ಣವಾಗಿರುವ (ಈ) ಚೀಲದಲ್ಲಿ[2] ನಾನೆಂಬ ಬುದ್ಧಿಯಿಂದ ಎದ್ದುಕೊಂಡಿರುವ ಆಶೆಯನ್ನು ಬಿಟ್ಟುಬಿಡು; ಆಮೇಲೆ ಗಾಳಿಯಂತಿರುವ ಲಿಂಗದೇಹದಲ್ಲಿಯೂ (ಆಶೆಯನ್ನು) ತೀರ ತೊರೆದುಬಿಡು. ಶಾಸ್ತ್ರದಲ್ಲಿ ಹೊಗಳಿರುವ ಕೀರ್ತಿಯುಳ್ಳವನೂ ಯಾವಾಗಲೂ ಆನಂದವಿಗ್ರಹನೂ ಆಗಿರುವ ಪರಮಾತ್ಮನೇ ನಾನೆಂದರಿತುಕೊಂಡು ಬ್ರಹ್ಮರೂಪದಿಂದ ನಿಲ್ಲುವನಾಗು.

ಶವಾಕಾರಂ ಯಾವದ್ ಭಜತಿ ಮನುಜಸ್ತಾವದಶುಚಿಃ
ಪರೇಭ್ಯಃ ಸ್ಯಾತ್ ಕ್ಲೇಶೋ ಜನನಮರಣವ್ಯಾಧಿನಿಲಯಃ ।
ಯದಾತ್ಮಾನಂ ಶುದ್ಧಂ ಕಲಯತಿ ಶಿವಾಕಾರಮಚಲಂ
ತದಾ ತೇಭ್ಯೋ ಮುಕ್ತೋ ಭವತಿ ಹಿ ತದಾಹ ಶ್ರುತಿರಪಿ ॥

೭೯೩. ಮನುಷ್ಯನು ಹೆಣದ ರೂಪವನ್ನು[3] ಎಲ್ಲಿಯವರೆಗೆ ಚಿಂತಿಸುತ್ತಿರುವನೋ ಅಲ್ಲಿಯವರೆಗೆ ಅಶುಚಿಯಾಗಿರುತ್ತಾನೆ. ಮತ್ತೊಬ್ಬರಿಂದ ಅವನಿಗೆ ತೊಂದರೆಯುಂಟಾಗುತ್ತಿರುವದು, (ಅವನು) ಹುಟ್ಟುಸಾವುಬೇನೆಗಳಿಗೆ ನೆಲೆಮನೆಯಾಗಿರುತ್ತಾನೆ. ಯಾವಾಗ ತಾನು ಶುದ್ಧವಾದ ನಿಶ್ಚಲವಾದ ಶಿವಾಕಾರನೆಂದು ಅರಿತುಕೊಳ್ಳುವನೋ ಆಗ ಅವುಗಳಿಂದ ಬಿಡುಗಡೆಹೊಂದುತ್ತಾನೆ. ಶ್ರುತಿಯೂ[4] ಹೀಗೆಂದು ಹೇಳುತ್ತದೆ.

## ಆತ್ಮನಲ್ಲಿ ಭೇದವಿಲ್ಲ

ಸ್ವಾತ್ಮನ್ಯಾರೋಪಿತಾಶೇಷಾಭಾಸವಸ್ತುನಿರಾಸತಃ ।
ಸ್ವಯಮೇವ ಪರಂ ಬ್ರಹ್ಮ ಪೂರ್ಣಮದ್ವಯಮಕ್ರಿಯಮ್ ॥೭೯೪॥

1. 'ಕೀರ್ತಿವರ್', 'ಮೂರ್ತಿವರ್' ಎಂದು ಪಾ॥ 2. ದೇಹದಲ್ಲಿ.
3. ದೇಹರೂಪವನ್ನು.
4. ಶ್ವೇ. ೩–೨೦, ಕ. ೨–೩–೧೪, ಬೃ. ೪–೪–೭.

೩೯೪. ತನ್ನ ಆತ್ಮನಲ್ಲಿ ಹುಟ್ಟುಗಟ್ಟಿಕೊಂಡಿರುವ ತೋರಿಕೆಯ ವಸ್ತುಗಳೆಲ್ಲವನ್ನೂ ಅಳಿಸಿಹಾಕುವದರಿಂದ ತಾನೇ ಪೂರ್ಣವೂ, ತನಗೆರಡನೆಯದಿಲ್ಲದ್ದೂ ಯಾವ ಕ್ರಿಯೆಯೂ ಇಲ್ಲದ್ದೂ ಆದ ಪರಬ್ರಹ್ಮವಾಗುವನು.

ಸಮಾಹಿತಾಯಾಂ ಸತಿ ಚಿತ್ತವೃತ್ತೌ
ಪರಾತ್ಮನಿ ಬ್ರಹ್ಮಣಿ ನಿರ್ವಿಕಲ್ಪೇ ।
ನ ದೃಶ್ಯತೇ ಕಶ್ಚಿದಯಂ ವಿಕಲ್ಪಃ
ಪ್ರಜಲ್ಪಮಾತ್ರಃ ಪರಿಶಿಷ್ಯತೇ ತತಃ ॥೩೯೫॥

೩೯೫. ಚಿತ್ತದ ವೃತ್ತಿಯು ಯಾವ ವಿಕಲ್ಪವೂ ಇಲ್ಲದ ಬ್ರಹ್ಮವಾದ ಪರಮಾತ್ಮನಲ್ಲಿ ನೆರೆನಿಲ್ಲಲಾಗಿ ಈ ವಿಕಲ್ಪವು ಯಾವದೊಂದೂ ಕಾಣಬರುವದಿಲ್ಲ. ಆವೇಳೆ ಬಾಯ ಮಾತೇ ಉಳಿದುಕೊಳ್ಳುವದು.

ಅಸತ್ಕಲ್ಪೋ ವಿಕಲ್ಪೋಽಯಂ ವಿಶ್ವಮಿತ್ಯೇಕವಸ್ತುನಿ ।
ನಿರ್ವಿಕಾರೇ ನಿರಾಕಾರೇ ನಿರ್ವಿಶೇಷೇ ಭಿದಾ ಕುತಃ ॥೩೯೬॥

೩೯೬. (ಆ) ಒಂದು ವಸ್ತುವಿನಲ್ಲಿಯೇ ಈ ಜಗತ್ತೆಂಬ ವಿಕಲ್ಪವು[1] ಅಸದ್ವಸ್ತುವಿನಂತೆಯೇ ಇರುವದು; ಯಾದ ವಿಕಾರವೂ ಯಾವ ಆಕಾರವೂ ಯಾವ ವಿಶೇಷವೂ ಇಲ್ಲದ್ದರಲ್ಲಿ ಭೇದವೆಲ್ಲಿಯದು[2] ?

ದ್ರಷ್ಟೃದರ್ಶನದೃಶ್ಯಾದಿಭಾವಶೂನ್ಯೈಕವಸ್ತುನಿ ।
ನಿರ್ವಿಕಾರೇ ನಿರಾಕಾರೇ ನಿರ್ವಿಶೇಷೇ ಭಿದಾ ಕುತಃ ॥೩೯೭॥

೩೯೭. ನೋಡುವವನು, ನೋಟ, ನೋಡಲ್ಪಡತಕ್ಕದ್ದು– ಮುಂತಾದ ಭಾವಗಳು ಯಾವವೂ ಇಲ್ಲದ ಆ ಒಂದೇ ವಸ್ತುವಿನಲ್ಲಿ. ಯಾವ ವಿಕಾರವೂ ಯಾವ ಆಕಾರವೂ ಯಾವ ವಿಶೇಷವೂ ಇಲ್ಲದ್ದರಲ್ಲಿ ಭೇದವೆಲ್ಲಿಯದು ?

ಕಲ್ಪಾರ್ಣವ ಇವಾತ್ಯಂತಪರಿಪೂರ್ಣೈಕವಸ್ತುನಿ ।
ನಿರ್ವಿಕಾರೇ ನಿರಾಕಾರೇ ನಿರ್ವಿಶೇಷೇ ಭಿದಾ ಕುತಃ ॥೩೯೮॥

೩೯೮. ಪ್ರಲಯಕಾಲದ ಸಮುದ್ರದಂತೆ ಅತ್ಯಂತಪೂರ್ಣವಾಗಿರುವ ಒಂದೇ ವಸ್ತುವಿನಲ್ಲಿ ಯಾವ ವಿಕಾರವೂ ಯಾವ ಆಕಾರವೂ ಯಾವ ವಿಶೇಷವೂ ಇಲ್ಲದ್ದರಲ್ಲಿ ಭೇದವೆಲ್ಲಿಯದು ?

1. 'ವಿಕಲ್ಪೋ ನ ಹಿ ವಸ್ತು' ಎಂಬ ಈ (ನೃ. ಉ. ) ವಾಕ್ಯವು ಶಂ. ಗೀ. ಯಲ್ಲಿ ಬಹಳ ಸಲ ಉದಾಹೃತವಾಗಿದೆ.

2. 'ನೈವ ತತ್ರ ಕಾಚನ ಭಿದಾಸ್ತಿ' (ನೃ. ಉ. ೨) ಈ ವಚನವು ಶಂ.ಗೀ.ಯಲ್ಲಿ ಬಹಳ ಸಲ ಉದಾಹೃತವಾಗಿದೆ.

ತೇಜಸೀವ ತಮೋ ಯತ್ರ ಪ್ರಲೀನಂ[1] ಭ್ರಾನ್ತಿಕಾರಣಮ್ ।
ಅದ್ವಿತೀಯೇ ಪರೇ ತತ್ತ್ವೇ ನಿರ್ವಿಶೇಷೇ ಭಿದಾ ಕುತಃ ॥ ೩೯೯ ॥

೩೯೯. ಬೆಳಕಿನಲ್ಲಿ ಕತ್ತಲೆಯಂತೆ ಭ್ರಾಂತಿಕಾರಣವು ಎಲ್ಲಿ ಅಡಗಿ ಹೋಗಿರುವದೋ ಆ ಯಾವ ವಿಶೇಷವೂ ಇಲ್ಲದ ತನಗೆರಡನೆಯದಿಲ್ಲದ ಪರತತ್ತ್ವದಲ್ಲಿ ಭೇದವೆಲ್ಲಿಯದು ?

ಏಕಾತ್ಮಕೇ ಪರೇ ತತ್ತ್ವೇ ಭೇದವಾರ್ತಾ ಕಥಂ ಭವೇತ್ ।
ಸುಷುಪ್ತೌ ಸುಖಮಾತ್ರಾಯಾಂ ಭೇದಃ ಕೇನಾವಲೋಕಿತಃ ॥೪೦೦॥

೪೦೦. ಒಂದೇ ರೂಪವಾಗಿರುವ ಪರತತ್ತ್ವದಲ್ಲಿ ಭೇದದ ಸುದ್ದಿಯು ಹೇಗೆ ಬಂದೀತು ? ಆನಂದಮಾತ್ರವಾಗಿರುವ ಸುಷುಪ್ತಿಯಲ್ಲಿ ಭೇದವನ್ನು ಕಂಡಿರುವವರು ಯಾರು ?

ನ ಹ್ಯಸ್ತಿ ವಿಶ್ವಂ ಪರತತ್ತ್ವಬೋಧಾತ್ ।
ಸದಾತ್ಮನಿ ಬ್ರಹ್ಮಣಿ ನಿರ್ವಿಕಲ್ಪೇ ।
ಕಾಲತ್ರಯೇ ನಾಪ್ಯಹಿರೀಕ್ಷಿತೋ ಗುಣೇ
ನ ಹ್ಯಮ್ಬುಬಿನ್ದುರ್ಮೃಗತೃಷ್ಣಿಕಾಯಾಮ್ ॥೪೦೧॥

೪೦೧. ಪರತತ್ತ್ವವನ್ನು ಅರಿತುಕೊಂಡ ಬಳಿಕ ಸದ್ರೂಪವಾಗಿರುವ ವಿಕಲ್ಪವಿಲ್ಲದ ಬ್ರಹ್ಮದಲ್ಲಿ ಜಗತ್ತು ಇಲ್ಲವೇ ಇಲ್ಲ. ಹಗ್ಗದಲ್ಲಿ ಮೂರು ಕಾಲಕ್ಕೂ ಹಾವನ್ನು ಕಂಡದ್ದೇ ಇಲ್ಲ, ಬಿಸಿಲುಕುದುರೆಯಲ್ಲಿ ಒಂದು ತೊಟ್ಟು ನೀರೂ ಇರುವದೇ ಇಲ್ಲ.

ಮಾಯಾಮಾತ್ರಮಿದಂ ದ್ವೈತಮದ್ವೈತಂ ಪರಮಾರ್ಥತಃ ।
ಇತಿ ಬ್ರೂತೇ ಶ್ರುತಿಃ ಸಾಕ್ಷಾತ್ ಸುಷುಪ್ತಾವನುಭೂಯತೇ ॥೪೦೨॥

೪೦೨. "ಮಾಯಾಮಾತ್ರವೇ ದ್ವೈತವು, ಅದ್ವೈತವೇ ಪರಮಾರ್ಥ" ?) ಎಂದು ಶ್ರುತಿ[2] ಹೇಳುತ್ತದೆ. ಸುಷುಪ್ತಿಯಲ್ಲಿ ನೇರಾಗಿಯೇ ಅನುಭವಕ್ಕೆ ಬರುತ್ತದೆ.[3]

1. 'ವಿಲೀನಂ' ಪಾ॥

2. ಇದು ಯಾವ ಶ್ರುತಿಯೆಂಬುದು ಗೊತ್ತಾಗಲಿಲ್ಲ ; ಗೌಡಪಾದಕಾರಿಕೆಯಲ್ಲಿ ಇದು ಆಗಮಪ್ರಕರಣದಲ್ಲಿದೆ. ಶಂ. ಗೀ. [illegible], [illegible]–೧೩, ೧೩–೩, [illegible]– ೯–ಮುಂತಾದ ಕಡೆಗಳಲ್ಲಿ ಇದನ್ನು ಶ್ರುತಿಯೆಂದಿದೆ. ಸೂ. ಸಂ. ಯಜ್ಞವೈಭವ ೩೦.೫ ನ್ನು ನೋಡಿ.

3. ಸುಷುಪ್ತಿಯಲ್ಲಿ ಅದ್ವೈತವಿದೆ ಎಂಬುದನ್ನು ಹಿಂದೆ ೪೦ ರಲ್ಲಿಯೂ ಹೇಳಿದೆ ಎಂಬುದನ್ನು ಲಕ್ಷಿಸಬೇಕು.

ನಾನ್ಯತ್ವಮಧಿಷ್ಠಾನಾದಾರೋಪ್ಯಸ್ಯ ನಿರೀಕ್ಷಿತಮ್ ।
ಪಣ್ಡಿತೈ ರಜ್ಜುಸರ್ಪಾದೌ ವಿಕಲ್ಪೋ ಭ್ರಾನ್ತಿಜೀವನಃ ॥೪೦೬॥

೪೦೬. ಆರೋಪಿತವಾದದ್ದು ಅಧಿಷ್ಠಾನಕ್ಕಿಂತ ಬೇರೆಯಿರುವದಿಲ್ಲ ವೆಂಬುದನ್ನು ಹಗ್ಗದಹಾವೇ ಮುಂತಾದ್ದಕಡೆಯಲ್ಲಿ ವಿವೇಕಿಗಳು ಕಂಡಿರುತ್ತಾರೆ. (ಆದ್ದರಿಂದ) ಈ ವಿಕಲ್ಪವು ಭ್ರಾಂತಿಯಿಂದ ಬಾಳಿಕೊಂಡಿರುತ್ತದೆ.

ಚಿತ್ತಮೂಲೋ ವಿಕಲ್ಪೋಽಯಂ ಚಿತ್ತಾಭಾವೇ ನ ಕಶ್ಚನ ।
ಅತಶ್ಚಿತ್ತಂ ಸಮಾಧೇಹಿ ಪ್ರತ್ಯಗ್ರೂಪೇ ಪರಾತ್ಮನಿ ॥೪೦೭॥

೪೦೭. ಈ ವಿಕಲ್ಪಕ್ಕೆ ಚಿತ್ತವೇ ಬೇರು, ಚಿತ್ತವಿಲ್ಲದಿದ್ದರೆ ಯಾವ (ವಿಕಲ್ಪವೂ) ಇರುವದಿಲ್ಲ. ಆದ್ದರಿಂದ ಒಳಗಿನ ಆತ್ಮನ ರೂಪದಲ್ಲಿರುವ ಪರಮಾತ್ಮನಲ್ಲಿ ನೆಲೆನಿಲ್ಲಿಸಿಕೊ.

## ಸಮಾಧಿಯಲ್ಲಾಗುವ ಪೂರ್ಣಬ್ರಹ್ಮಾನುಭವ

ಕಿಮಪಿ ಸತತಬೋಧಂ ಕೇವಲಾನನ್ದರೂಪಂ
ನಿರುಪಮಮತಿವೇಲಂ ನಿತ್ಯಮುಕ್ತಂ ನಿರೀಹಮ್ ।
ನಿರವಧಿಗಗನಾಭಂ ನಿಷ್ಕಲಂ ನಿರ್ವಿಕಲ್ಪಂ
ಹೃದಿ ಕಲಯತಿ ವಿದ್ವಾನ್ ಬ್ರಹ್ಮ ಪೂರ್ಣಂ ಸಮಾಧೌ ॥೪೦೮॥

೪೦೮. ಬಿಡದೆ ಹಬ್ಬಿಕೊಂಡಿರುವ ಚಿತ್ಸ್ವರೂಪವೂ ಬರಿಯ ಆನಂದ ಸ್ವರೂಪವೂ ಹೋಲಿಕೆಯಿಲ್ಲದ್ದಾಗಿಯೂ ಎಲ್ಲೆ ಕಟ್ಟಿಲ್ಲದ್ದಾಗಿಯೂ ಯಾವಾಗಲೂ ಮುಕ್ತವಾಗಿರುವದಾಗಿಯೂ ಯಾವ ವ್ಯಾಪಾರವೂ ಇಲ್ಲದ್ದಾಗಿಯೂ ಗಡಿಯಿಲ್ಲದ ಆಕಾಶದಂತಿರುವದಾಗಿಯೂ ಅವಯವಗಳಿಲ್ಲದ್ದಾಗಿಯೂ ಯಾವ ವಿಕಲ್ಪವೂ ಇಲ್ಲದ್ದಾಗಿಯೂ ಇರುವ ತಾನೇ ಒಂದು ಬಗೆಯಾಗಿರುವ ಪೂರ್ಣಬ್ರಹ್ಮವನ್ನು ಜ್ಞಾನಿಯು ಸಮಾಧಿಯಲ್ಲಿ ಹೃದಯದಲ್ಲಿ ಅನುಭವಿಸುತ್ತಾನೆ.[1]

ಪ್ರಕೃತಿವಿಕೃತಿಶೂನ್ಯಂ ಭಾವನಾತೀತಭಾವಂ
ಸಮರಸಮಸಮಾನಂ ಮಾನಸಂಬನ್ಧದೂರಮ್ ।
ನಿಗಮವಚನಸಿದ್ಧಂ ನಿತ್ಯಮಸ್ಮತ್ಪ್ರಸಿದ್ಧಂ
ಹೃದಿ ಕಲಯತಿ ವಿದ್ವಾನ್ ಬ್ರಹ್ಮ ಪೂರ್ಣಂ ಸಮಾಧೌ ॥೪೦೯॥

1. ನಿರ್ವಿಕಲ್ಪಸಮಾಧಿಯಲ್ಲಿ ಬ್ರಹ್ಮಾನುಭವವು ಸ್ಫುಟವಾಗಿ ಕಾಣುವದೆಂಬುದು ಪ್ರಕೃತಕ್ಕೆ ಅಪ್ಪುಮೆಚ್ಚಾದ ವಿಷಯ.

೪೦೭. ಕಾರ್ಯಕಾರಣಗಳಿಲ್ಲದ್ದಾಗಿಯೂ (ಮನಸ್ಸಿನಲ್ಲಿ) ಭಾವಿಸಿಕೊಳ್ಳುವದಕ್ಕಾಗದ ಸ್ವರೂಪವುಳ್ಳದ್ದಾಗಿಯೂ ಸಮರಸವಾಗಿಯೂ ತನಗೆ ಸಮಾನವಾದದ್ದಿಲ್ಲದ್ದಾಗಿಯೂ ಪ್ರಮಾಣದ ಸಂಬಂಧಕ್ಕೆ ದೂರವಾಗಿರುವದಾಗಿಯೂ ವೇದಾಂತವಚನಸಿದ್ಧವಾಗಿಯೂ ಯಾವಾಗಲೂ ನಾನೆಂಬ ರೂಪದಿಂದಲೇ ಪ್ರಸಿದ್ಧವಾಗಿರುವದಾಗಿಯೂ ಇರುವ ಪೂರ್ಣಬ್ರಹ್ಮವನ್ನು ಸಮಾಧಿಯಲ್ಲಿ ಜ್ಞಾನಿಯು ಹೃದಯದಲ್ಲಿ ಅನುಭವಿಸುತ್ತಾನೆ.

ಅಜರಮಮರಮಸ್ತಾಭಾಸವಸ್ತುಸ್ವರೂಪಂ
ಸ್ತಿಮಿತಸಲಿಲರಾಶಿಪ್ರಖ್ಯಮಾಖ್ಯಾವಿಹೀನಮ್ ।
ಶಮಿತಗುಣವಿಕಾರಂ ಶಾಶ್ವತಂ ಶಾನ್ತಮೇಕಂ
ಹೃದಿ ಕಲಯತಿ ವಿದ್ವಾನ್ ಬ್ರಹ್ಮ ಪೂರ್ಣಂ ಸಮಾಧೌ ॥ ೪೦೮ ॥

೪೦೮. ಮುಪ್ಪಿಲ್ಲದಾಗಿಯೂ ಸಾವಿಲ್ಲದ್ದಾಗಿಯೂ ತೋರಿಕೆಗಳಿಲ್ಲವೂ ಅಡಗಿಹೋಗಿರುವ ವಸ್ತುವಿನ ಸ್ವರೂಪವಾಗಿರುವದಾಗಿಯೂ ಅಲುಗಾಡದೆ ಇರುವ ಕಡಲಿನಂತಿರುವದಾಗಿಯೂ ಹೆಸರಿಲ್ಲದ್ದಾಗಿಯೂ ತ್ರಿಗುಣದ ವಿಕಾರಗಳು ಯಾವವೂ ಇಲ್ಲದ್ದಾಗಿಯೂ ಶಾಶ್ವತವಾಗಿಯೂ ಶಾಂತವಾಗಿಯೂ ಒಂದೇ ಒಂದಾಗಿಯೂ ಇರುವ ಪೂರ್ಣಬ್ರಹ್ಮವನ್ನು ಸಮಾಧಿಯಲ್ಲಿ ಜ್ಞಾನಿಯು ಹೃದಯದಲ್ಲಿ ಅನುಭವಿಸುತ್ತಾನೆ.

## ಸಮಾಧಿಯಿಂದಲೇ ಬಂಧದ ಬಿಡುಗಡೆ

ಸಮಾಹಿತಾನ್ತಃಕರಣಃ ಸ್ವರೂಪೇ
ವಿಲೋಕಯಾऽऽತ್ಮಾನಮಖಣ್ಡವೈಭವಮ್ ।
ವಿಚ್ಛಿನ್ಧಿ ಬನ್ಧಂ ಭವಗನ್ಧಗನ್ಧಿತಂ
ಯತ್ನೇನ ಪುಂಸ್ತ್ವಂ ಸಫಲೀಕುರುಷ್ವ ॥ ೪೦೯ ॥

೪೦೯. ಅಂತಃಕರಣವನ್ನು ಸ್ವರೂಪದಲ್ಲಿ ನೆಲೆನಿಲ್ಲಿಸಿಕೊಂಡು ಅಖಂಡೈಶ್ವರ್ಯಯುಕ್ತನಾದ ಆತ್ಮನನ್ನು ಕಂಡುಕೊ; ಸಂಸಾರವಾಸನೆಯಿಂದೊಡಗೂಡಿರುವ ಬಂಧವನ್ನು ಕತ್ತರಿಸಿಕೊ. ಪ್ರಯತ್ನಪೂರ್ವಕವಾಗಿ ಪುರುಷತ್ವವನ್ನು ಸಫಲಗೊಳಿಸಿಕೊ!

ಸರ್ವೋಪಾಧಿವಿನಿರ್ಮುಕ್ತಂ ಸಚ್ಚಿದಾನನ್ದಮದ್ವಯಮ್ ।
ಭಾವಯಾऽऽತ್ಮಾನಮಾತ್ಮಸ್ಥಂ ನ ಭೂಯಃ ಕಲ್ಪಸೇऽಧ್ವನೇ ॥ ೪೧೦ ॥

೪೨೯. ಯಾವ ಉಪಾಧಿಯೂ ಇಲ್ಲದ ಸಚ್ಚಿದಾನಂದನೂ ಅದ್ವಿತೀಯನೂ ಆಗಿರುವ ನಿಜ್ವ ಸ್ವರೂಪದಿಂದಲೇ ಆತ್ಮನನ್ನು ಚಿಂತಿಸು. ಹಾಗಾದರೆ ಮತ್ತೆ ಈ ಸಂಸಾರದ ದೀರ್ಘಪ್ರಯಾಣಕ್ಕೆ (ನೀನು) ಸಿಕ್ಕಿಕೊಳ್ಳುವದಿಲ್ಲ.[1]

1. "ವಾಚಂ ಯಚ್ಛ ಮನೋ ಯಚ್ಛ ಯಚ್ಛ ಪ್ರಾಣೇಂದ್ರಿಯಾಣಿ ಚ । ಆತ್ಮಾನಮಾತ್ಮನಾ ಯಚ್ಛ ನ ಭೂಯಃ ಕಲ್ಪಸೇಽಧ್ವನೇ ॥" ಎಂಬ ಶ್ಲೋಕವನ್ನು ಶಂ. ಗೀ. ಯಲ್ಲಿ ಮತ್ತೆಮತ್ತೆ ಉದಾಹರಿಸಿದೆ. ಶಂ. ಗೀ. ೬-೫ರ ವ್ಯಾಖ್ಯಾನವನ್ನು ಪೂರ ಓದಿನೋಡಿ.

# ೯. ಆತ್ಮಸಾಕ್ಷಾತ್ಕಾರದ ಫಲ

## ಸಮಾಧಿಯಿಂದ ತತ್ತ್ವವನ್ನರಿತುಕೊಂಡವನಿಗೆ ಶರೀರಾಭಿಮಾನವಿರುವದಿಲ್ಲ

ಛಾಯೇವ ಪುಂಸಃ ಪರಿದೃಶ್ಯಮಾನ-
  ಮಾಭಾಸರೂಪೇಣ ಫಲಾನುಭೂತ್ಯಾ ।
ಶರೀರಮಾರಾಚ್ಛವವನ್ನಿರಸ್ತಂ
  ಪುನರ್ನ ಸಂಧತ್ತ ಇದಂ ಮಹಾತ್ಮಾ  ॥ ೪೧೮ ॥

೪೧೮. ಫಲವನ್ನನುಭವಿಸುವದರಿಂದ[1] ಮನುಷ್ಯನ ನೆರಳಿನಂತೆ[2] ತೋರಿಕೆಯ ರೂಪದಿಂದ ಕಂಡುಬರುತ್ತಿರುವ ಶರೀರವನ್ನು, ಹೆಣದಂತೆ ದೂರ ಕಿತ್ತೊಗೆದ ಬಳಿಕ ಮಹಾತ್ಮನಾದವನು ಮತ್ತೆ ಅದನ್ನು ಮನಸ್ಸಿಗೆ ತಂದುಕೊಳ್ಳುವದೇ ಇಲ್ಲ.

ಸತತವಿಮಲಬೋಧಾನನ್ದರೂಪಂ ಸಮೇತ್ಯ
  ತ್ಯಜ ಜಡಮಲರೂಪೋಪಾಧಿಮೇತಂ ಸುದೂರೇ ।
ಅಥ ಪುನರಪಿ ನೈಷ ಸ್ಮರ್ಯತಾಂ ವಾನ್ತವಸ್ತು
  ಸ್ಮರಣವಿಷಯಭೂತಂ ಕಲ್ಪತೇ ಕುತ್ಸನಾಯ  ॥ ೪೧೯ ॥

೪೧೯. ಯಾವಾಗಲೂ ನಿರ್ಮಲವಾಗಿರುವ ಚಿದಾನಂದರೂಪವನ್ನು ಪಡೆದುಕೊಂಡು ಜಡವಾಗಿಯೂ ಮಲರೂಪವಾಗಿಯೂ ಇರುವ ಈ ಉಪಾಧಿಯನ್ನು ಬಹುದೂರದಲ್ಲಿಯೇ ಬಿಟ್ಟುಬಿಡು, ಆಮೇಲೆ ಇದನ್ನು ಮತ್ತೂ ನೆನಪಿಗೆ ತಂದುಕೊಳ್ಳಲೇಬೇಡ ; ಏಕೆಂದರೆ ಓಕರಿಸಿ ಉಗುಳಿದ ವಸ್ತುವನ್ನು[3] ಮತ್ತೆ ನೆನೆಸಿಕೊಂಡರೆ ಅಸಹ್ಯವಾಗುತ್ತದೆ.

ಸಮೂಲಮೇತತ್ ಪರಿದಹ್ಯ ವಹ್ನೌ
  ಸದಾತ್ಮನಿ ಬ್ರಹ್ಮಣಿ ನಿರ್ವಿಕಲ್ಪೇ ।
ತತಃ ಸ್ವಯಂ ನಿತ್ಯವಿಶುದ್ಧಬೋಧಾ-
  ನನ್ದಾತ್ಮನಾ ತಿಷ್ಠತಿ ವಿದ್ವರಿಷ್ಠಃ  ॥ ೪೨೦ ॥

1. ಪ್ರಾರಬ್ಧಕರ್ಮವನ್ನು ಅನುಭವಿಸುವದರಿಂದ.

2. ಶಂ. ಗೀ. ೧೮–೫೬.

3. ದೇಹದಲ್ಲಿ ಮತ್ತೆ ಆತ್ಮಬುದ್ಧಿಯನ್ನು ಮಾಡುವದು ಇಷ್ಟೇ ಅಸಹ್ಯಕರವೆಂದು

೪೧೩. ಬ್ರಹ್ಮವಿದ್ವರಿಷ್ಠನಾದವನು ಈ ಶರೀರವನ್ನು ಮೂಲಸಹಿತವಾಗಿ[1] ನಿರ್ವಿಕಲ್ಪಬ್ರಹ್ಮವೆಂಬ ಸದ್ರೂಪವಾದ ಬೆಂಕಿಯಲ್ಲಿ ಸುಟ್ಟುಹಾಕಿ ಆಮೇಲೆ ತಾನು ನಿತ್ಯಶುದ್ಧಜ್ಞಾನಾನಂದಸ್ವರೂಪದಿಂದ ಇದ್ದುಬಿಡುತ್ತಾನೆ.

ಪ್ರಾರಬ್ಧಸೂತ್ರಗ್ರಥಿತಂ ಶರೀರಂ
ಪ್ರಯಾತು ವಾ ತಿಷ್ಠತು ಗೋರಿವ ಸ್ರಕ್ ।
ನ ತತ್ ಪುನಃ ಪಶ್ಯತಿ ತತ್ತ್ವವೇತ್ತಾಽಽ-
ನಂದಾತ್ಮನಿ ಬ್ರಹ್ಮಣಿ ಲೀನವೃತ್ತಿಃ ॥ ೪೧೪ ॥

೪೧೪. ಪ್ರಾರಬ್ಧವೆಂಬ ಹಗ್ಗಕ್ಕೆ ಕಟ್ಟುಬಿದ್ದಿರುವ ಈ ಶರೀರವು ಹೋಗಲಿ ಅಥವಾ ಇರಲಿ, ಗೋವು ತನ್ನ ಕೊರಳಿಗೆ ಹಾಕಿರುವ ಮಾಲೆಯು (ಬಿದ್ದುಹೋದರೂ ಇದ್ದರೂ ಅದರ ಚಿಂತೆಯಿಲ್ಲದಿರುವಂತೆ[2]) ಆನಂದಸ್ವರೂಪವಾದ ಬ್ರಹ್ಮದಲ್ಲಿ ವೃತ್ತಿಯನ್ನು ಲಯಗೊಳಿಸಿಕೊಂಡಿರುವ ತತ್ತ್ವಜ್ಞಾನಿಯು ಮತ್ತೆ ಅದನ್ನು ಕಣ್ಣೆತ್ತಿ ನೋಡುವದೇ ಇಲ್ಲ.

ಅಖಂಡಾನಂದಮಾತ್ಮಾನಂ ವಿಜ್ಞಾಯ ಸ್ವಸ್ವರೂಪತಃ ।
ಕಿಮಿಚ್ಛನ್ ಕಸ್ಯ ವಾ ಹೇತೋರ್ದೇಹಂ ಪುಷ್ಣಾತಿ ತತ್ತ್ವವಿತ್ ॥೪೧೫॥

೪೧೫. ಅಖಂಡಾನಂದಸ್ವರೂಪನಾದ ಆತ್ಮನೇ ತಾನೆಂದು ಅರಿತುಕೊಂಡ ಬಳಿಕ ತತ್ತ್ವಜ್ಞಾನಿಯು ಏನನ್ನು ಇಚ್ಛಿಸುವವನಾಗಿ[3] ಯಾರ ಪ್ರಯೋಜನಕ್ಕಾಗಿ ದೇಹಪೋಷಣೆಯನ್ನು ಮಾಡಿಕೊಂಡಾನು ?

## ವೈರಾಗ್ಯ, ಜ್ಞಾನ, ಉಪರತಿ, ಆನಂದಾನುಭವ

ಸಂಸಿದ್ಧಸ್ಯ ಫಲಂ ತ್ವೇತಜ್ಜೀವನ್ಮುಕ್ತಸ್ಯ ಯೋಗಿನಃ ।
ಬಹಿರಂತಃ ಸದಾನಂದರಸಾಸ್ವಾದನಮಾತ್ಮನಿ ॥೪೧೬॥

ವೈರಾಗ್ಯಸ್ಯ ಫಲಂ ಬೋಧೋ ಬೋಧಸ್ಯೋಪರತಿಃ ಫಲಮ್ ।
ಸ್ವಾನಂದಾನುಭವಾಚ್ಛಾಂತಿರೇಷೈವೋಪರತೇಃ ಫಲಮ್ ॥ ೪೧೭ ॥

ಯದ್ಯುತ್ತರೋತ್ತರಾಭಾವಃ ಪೂರ್ವಂ ಪೂರ್ವಂ ತು ನಿಷ್ಫಲಮ್॥

1. ಅಜ್ಞಾನಸಹಿತವಾಗಿ.

2. ಭಾಗ. ೩–೨೮–೩೭ಕ್ಕೆ ಹೋಲಿಸಿ.

3. ಬೃ. ೪–೪–೧೨.

೪೧೫-೪೧೭. ಸಂಸಿದ್ಧನಾಗಿ[1] ಜೀವನ್ಮುಕ್ತನಾಗಿರುವ[2] ಯೋಗಿಗೆ ದೊರಕುವ ಫಲವೆಂದರೆ ಇದೇ; ಹೊರಗೂ ಒಳಗೂ ಯಾವಾಗಲೂ ಆನಂದರಸವನ್ನು ಸವಿನೋಡುತ್ತಿರುವದು. ವೈರಾಗ್ಯಕ್ಕೆ ಜ್ಞಾನವೇ ಫಲವು, ಜ್ಞಾನಕ್ಕೆ ಉಪರತಿಯೇ ಫಲವು ; ಉಪರತಿಗೆ ಆತ್ಮಾನಂದಾನುಭವವನ್ನು ಹೊಂದಿ ಶಾಂತಿಯನ್ನು ಪಡೆದುಕೊಳ್ಳುವದೇ ಫಲವು.[3] ಇವುಗಳಲ್ಲಿ ಮುಂದುಮುಂದಿನದು ಉಂಟಾಗದೆಹೋದರೆ ಮೊದಮೊದಲಿನದು ನಿರರ್ಥಕವು.

ನಿವೃತ್ತಿಃ ಪರಮಾ ತೃಪ್ತಿರಾನನ್ದೋಽನುಪಮಃ ಸ್ವತಃ ।
ದೃಷ್ಟದುಃಖೇಷ್ವನುದ್ವೇಗೋ ವಿದ್ಯಾಯಾಃ ಪ್ರಸ್ತುತಂ ಫಲಮ್ ॥

೪೧೭. (ಕರ್ಮಗಳಿಂದ) ಹಿಮ್ಮೆಟ್ಟುವದು, ಹೆಚ್ಚಿನ ತೃಪ್ತಿ, ಹೋಲಿಕೆಯಿಲ್ಲದ ಆತ್ಮಾನಂದ, ಒದಗಿದ ದುಃಖಗಳಿಂದ ಕಳವಳಗೊಳ್ಳದಿರುವದು-(ಇದೇ) ಜ್ಞಾನಕ್ಕೆ ಮೊದಲು ಆಗಬೇಕಾದ ಫಲವು.

ಯತ್ಕೃತಂ ಭ್ರಾನ್ತಿವೇಲಾಯಾಂ ನಾನಾಕರ್ಮ ಜುಗುಪ್ಸಿತಮ್ ।
ಪಶ್ಚಾನ್ನರೋ ವಿವೇಕೇನ ತತ್ಕಥಂ ಕರ್ತುಮರ್ಹತಿ     ೪೧೮॥

೪೧೮. ಮನುಷ್ಯನು ಭ್ರಾಂತಿಯ ಕಾಲದಲ್ಲಿ ಯಾವ ಬಗೆಬಗೆಯ ಹೇಸಿಗೆಯ ಕರ್ಮವನ್ನು ಮಾಡಿದ್ದನೋ ಅದನ್ನು ಆ ಬಳಿಕವೂ ವಿವೇಕಪೂರ್ವಕವಾಗಿ ಹೇಗೆತಾನೆ ಮಾಡಿಯಾನು ?

ವಿದ್ಯಾಫಲಂ ಸ್ಯಾದಸತೋ ನಿವೃತ್ತಿಃ
  ಪ್ರವೃತ್ತಿರಜ್ಞಾನಫಲಂ ತದೀಕ್ಷಿತಮ್ ।
ತಜ್ಜ್ಞಾಜ್ಞಯೋರ್ಯನ್ಮೃಗತೃಷ್ಣಿಕಾದೌ
  ನೋ ಚೇದ್ವಿದೋ ದೃಷ್ಟಫಲಂ ಕಿಮಸ್ಮಾತ್     ॥೪೧೯॥

೪೧೯. ಮಿಥ್ಯೆಯಾದ್ದರಿಂದ ಹಿಂಜರಿಯುವದೇ ವಿದ್ಯೆಯ ಫಲವು, ಮುಂಬರಿಯುವದೇ ಅಜ್ಞಾನದ ಫಲವು. ಏಕೆಂದರೆ ಬಿಸಿಲುಕುದುರೆಯೋ

1. ಸಾಧಕ, ಸಿದ್ಧ, ಸಂಸಿದ್ಧ-ಎಂಬ ಮೂವರಲ್ಲಿ ಸಂಸಿದ್ಧನು ಏಳನೆಯ ಭೂಮಿಕೆಯನ್ನು ಏರಿ ಮತ್ತೊಬ್ಬರ ಪ್ರಯತ್ನದಿಂದ ಶರೀರಕರ್ಮವನ್ನು ಮಾಡುತ್ತಿರುವ ಜೀವನ್ಮುಕ್ತನು. ಶಂ. ಗೀ ೧:-೬೮ ; ನಿತ್ಯನಿರಂತರಸಮಾಧಿನಿಷ್ಠೆಯನ್ನು ಮಾಡಿ ಹೊರಗಿನ ವಾಸನೆಗಳನ್ನೆಲ್ಲ ಕಳೆದುಕೊಂಡವನೇ ಯೋಗಸಂಸಿದ್ಧನು, ಶಂ. ಗೀ. ೪-೩೮.

2. ಶಂ ಗೀ. ೪-೧೯.

3. ವೈರಾಗ್ಯ, ಬೋಧ, ಉಪರತಿ- ಇವುಗಳ ನಿರೂಪಣವನ್ನು ಪಂಚದಶಿ, ಚಿತ್ರದೀಪದಲ್ಲಿ ೨೮೭ರಿಂದ ೨೮೦ರವರೆಗೆ ಮಾಡಿರುವ ವರ್ಣನೆಗೆ ಇದನ್ನು ಹೋಲಿಸಿ ನೋಡಬೇಕು.

ಮುಂತಾದವುಗಳಲ್ಲಿ ಅದನ್ನು ಬಲ್ಲವರು ( ಹಿಂಜರಿಯುವದೂ ) ಅರಿಯದವರು (ಮುಂಬರಿಯುವದೂ) ಕಂಡುಬಂದಿರುತ್ತದೆ. ಹಾಗಿಲ್ಲದಿದ್ದರೆ ಜ್ಞಾನಿಗೆ ದೃಷ್ಟಫಲವೆಂಬುದು ಇದಕ್ಕಿಂತಲೂ ಮತ್ತೆ ಬೇರೆ ಯಾವದು ?[1]

ಅಜ್ಞಾನಹೃದಯಗ್ರನ್ಥೇರ್ವಿನಾಶೋ ಯದ್ಯಶೇಷತಃ |
ಅನಿಚ್ಛೋರ್ವಿಷಯಃ ಕಿಂ ನು ಪ್ರವೃತ್ತೇಃ ಕಾರಣಂ ಸ್ವತಃ ॥೪೨೦॥

೪೨೦ ಅವಿದ್ಯಾರೂಪವಾದ ಹೃದಯಗ್ರಂಥಿಯು ಒಂದಿಷ್ಟೂ ಉಳಿಯದಂತೆ ಅಳಿದುಹೋಗಿದ್ದರೆ ಯಾವ ಬಯಕೆಯೂ ಇಲ್ಲದವನಿಗೆ ವಿಷಯವು ತಾನೇ ಪ್ರವೃತ್ತಿಗೆ ಕಾರಣವಾದೀತೇನು ?

ವಾಸನಾನುದಯೋ ಭೋಗ್ಯೇ ವೈರಾಗ್ಯಸ್ಯ ಪರೋಽವಧಿಃ
ಅಹಂಭಾವೋದಯಾಭಾವೋ ಬೋಧಸ್ಯ ಪರಮೋಽವಧಿಃ |
ಲೀನವೃತ್ತೇರನುತ್ಪತ್ತಿರ್ಮರ್ಯಾದೋಪರತೇಸ್ತು ಸಾ ॥೪೨೧॥

೪೨೧. ವಿಷಯಭೋಗದಲ್ಲಿ ವಾಸನೆಯು ಎದ್ದುಕೊಳ್ಳದಿರುವದೇ ವೈರಾಗ್ಯದ ಕೊನೆಯ ಎಲ್ಲೆ; ನಾನೆಂಬ ಭಾವನೆಯುಂಟಾಗದಿರುವದೇ ಜ್ಞಾನಕ್ಕೆ ಕೊನೆಯ ಎಲ್ಲೆ ; (ಒಂದು) ಸಲ ಲಯವಾದ ವೃತ್ತಿಯು ಮತ್ತೆ ಏಳದಿರುವದೇ ಉಪರತಿಯ ಎಲ್ಲೆ[2].

ಬ್ರಹ್ಮಾಕಾರತಯಾ ಸದಾ ಸ್ಥಿತತಯಾ ನಿರ್ಮುಕ್ತಬಾಹ್ಯಾರ್ಥಧೀ-
ರನ್ಯಾವೇದಿತಭೋಗ್ಯಭೋಗಕಲನೋ ನಿದ್ರಾಲುವದ್ಬಾಲವತ್ |
ಸ್ವಪ್ನಾಲೋಕಿತಲೋಕವಜ್ಜಗದಿದಂ ಪಶ್ಯನ್ ಕ್ವಚಿಲ್ಲಬ್ಧಧೀ-
ರಾಸ್ತೇ ಕಶ್ಚಿದನನ್ತಪುಣ್ಯಫಲಭುಗ್ಧನ್ಯಃ ಸ ಮಾನ್ಯೋ ಭುವಿ ॥೪೨೨॥

೪೨೨. ವೃತ್ತಿಯು ಬ್ರಹ್ಮಾಕಾರವಾಗಿಯೇ ಯಾವಾಗಲೂ ಇದ್ದುಬಿಟ್ಟಿರುವದರಿಂದ ಹೊರಗಿನ ವಿಷಯಗಳ ವೃತ್ತಿಯೇ ಇಲ್ಲದೆ, ಮತ್ತೊಬ್ಬರು ತಿಳಿಸಿದ ಭೋಗ್ಯವಸ್ತುಗಳನ್ನು, ತೂಕಡಿಸುತ್ತಿರುವವನಂತೆಯೂ[3] ಮಗುವಿನಂತೆಯೂ ಭೋಗಿಸುತ್ತಾ, ಈ ಲೋಕವನ್ನೆಲ್ಲ ಕನಸಿನಲ್ಲಿಕಾಣುವ ಲೋಕದಂತೆ ಕಾಣುತ್ತಾ ಎಲ್ಲಿಯೋ ಒಂದೊಂದು ವೇಳೆ ಹೊರಮುಖವಾದ ಬುದ್ಧಿಯುಳ್ಳವನಾಗುತ್ತಾ

1. ಶಂ. ಗೀ. ೩–೧೭.

2. ಈ ಅವಧಿಯನ್ನು ಪಂಚದಶಿಯ ಚಿತ್ರದೀಪ ೨೮೫–೨೮೬ ನೆಯ ಶ್ಲೋಕಗಳಲ್ಲಿ ವರ್ಣಿಸಿರುವ ಬಗೆಯನ್ನು ನೋಡಿರಿ.

3. ಯೋ. ವಾ. ನಿ. ಪೂ. ೧೨೬–೬೫.

ಅನಂತಪುಣ್ಯದ ಫಲವನ್ನನುಭವಿಸುತ್ತಿರುವವನು ಯಾವನೋ ಒಬ್ಬೊಬ್ಬನಿ ದ್ದಾನೆ, ಅವನೇ ಧನ್ಯನು. ಅವನೇ ಭೂಲೋಕದಲ್ಲಿ ಮಾನ್ಯನು !

## ಅಪರೋಕ್ಷಜ್ಞಾನಿಯು ಜೀವನ್ಮುಕ್ತನು

ಸ್ಥಿತಪ್ರಜ್ಞೋ ಯತಿರಯಂ ಯಃ ಸದಾನನ್ದಮಶ್ನುತೇ ।
ಬ್ರಹ್ಮಣ್ಯೇವ ವಿಲೀನಾತ್ಮಾ ನಿರ್ವಿಕಾರೋ ವಿನಿಷ್ಕ್ರಿಯಃ ॥೪೨೩॥

೪೨೩. ಯಾವನು ಬ್ರಹ್ಮದಲ್ಲಿಯೇ ಮನಸ್ಸನ್ನು ಲಯಗೊಳಿಸಿಕೊಂಡು ಒಂದು ವಿಕಾರವೂ ಇಲ್ಲದೆ[1], ಯಾವದೊಂದು ಕರ್ಮವೂ ಇಲ್ಲದೆ ಯಾವಾಗಲೂ ಆನಂದವನ್ನು ಹೊಂದಿರುವನೋ ಆ ಯತಿಯು ಸ್ಥಿತಪ್ರಜ್ಞನು.

ಬ್ರಹ್ಮಾತ್ಮನೋಃ ಶೋಧಿತಯೋರೇಕಭಾವಾವಗಾಹಿನೀ ।
ನಿರ್ವಿಕಲ್ಪಾ ಚ ಚಿನ್ಮಾತ್ರಾ ವೃತ್ತಿಃ ಪ್ರಜ್ಞೇತಿ ಕಥ್ಯತೇ ॥೪೨೪॥
ಸುಸ್ಥಿತಾ ಸಾ ಭವೇದ್ಯಸ್ಯ ಸ್ಥಿತಪ್ರಜ್ಞಃ ಸ ಉಚ್ಯತೇ ॥

೪೨೪. (ತತ್, ತ್ವಂ–ಪದಗಳಿಗೆ ಅರ್ಥವಾದ) ಬ್ರಹ್ಮ, ಆತ್ಮ– ಇಬ್ಬರ ಶೋಧನೆಮಾಡಿ ಒಂದೇ ಎಂಬುದನ್ನು ತಿಳಿಯುವ[2] ನಿರ್ವಿಕಲ್ಪವಾದ ಚಿನ್ಮಾತ್ರ ವೃತ್ತಿಯು[3] ಪ್ರಜ್ಞೆ ಎನಿಸುವದು. ಆ ಪ್ರಜ್ಞೆಯು ಯಾವಾತನಿಗೆ ನೆಲೆನಿಂತಿ ರುವದೋ ಅವನು ಸ್ಥಿತಪ್ರಜ್ಞನೆನಿಸುತ್ತಾನೆ.

ಯಸ್ಯ ಸ್ಥಿತಾ ಭವೇತ್ ಪ್ರಜ್ಞಾ ಯಸ್ಯಾನನ್ದೋ ನಿರನ್ತರಃ ।
ಪ್ರಪಞ್ಚೋ ವಿಸ್ಮೃತಪ್ರಾಯಃ ಸ ಜೀವನ್ಮುಕ್ತ ಇಷ್ಯತೇ ॥೪೨೫॥

೪೨೫. ಯಾವನ ಪ್ರಜ್ಞೆಯು ನಿಲೆನಿಂತಿರುವದೋ ಯಾವನ ಆನಂದವು ಕಡಿವಡೆಯದೆ ಇರುವದೋ, (ಯಾವನಿಗೆ) ಪ್ರಪಂಚವು ಮರೆತೇಹೋದಂತೆ ಆಗಿರುವದೋ ಅವನು ಜೀವನ್ಮುಕ್ತ[4]ನೆನಿಸುವನು.

1. ಶಂ. ಗೀ. ೨–೫೫.

2. ೨೪೯ನೆಯ ಶ್ಲೋಕವನ್ನು ನೋಡಿರಿ.

3. ಚಿನ್ಮಾತ್ರವಾಗಿ ಉಳಿಯುವ ವೃತ್ತಿಯೂ ಉಂಟೆಂದು ಇಲ್ಲಿ ಹೇಳಿರುವದನ್ನು ಲಕ್ಷಿಸಬೇಕು. ಸಮಾಧಿಯಲ್ಲಿಯೂ ವೃತ್ತಿಯಿರಬೇಕೆಂದು ಇಲ್ಲಿ ಸೂಚಿತವಾಗಿದೆ.

4. ಹಿಂದಿನ ಶ್ಲೋಕದಲ್ಲಿಯೂ 'ಜೀವನ್ಮುಕ್ತಃ ಸ ಉಚ್ಯತೇ' ಎಂಬ ಪಾಠವಿದೆ. ಅದನ್ನು ಸ್ಥಿತಪ್ರಜ್ಞನೆಂದೇ ತಿದ್ದಿಕೊಂಡಿದೇವೆ. ಇಲ್ಲಿ "ಸ್ಥಿತಪ್ರಜ್ಞ" ಎಂದಿರಬೇಕೋ, 'ಜೀವನ್ಮುಕ್ತಃ' ಎಂಬುದೇ ಸರಿಯಾದ ಪಾಠವೋ ನಿರ್ಣಯಿಸುವದು ಕಷ್ಟ.

ಲೀನಧೀರಪಿ ಜಾಗರ್ತಿ ಯೋ ಜಾಗ್ರದ್ಧರ್ಮವರ್ಜಿತಃ ।
ಬೋಧೋ ನಿರ್ವಾಸನೋ ಯಸ್ಯ ಸ ಜೀವನ್ಮುಕ್ತ ಇಷ್ಯತೇ ॥೪೩೬॥

೪೩೬. ಯಾವನು ಮನಸ್ಸನ್ನು ಲಯಗೊಳಿಸಿಕೊಂಡಿದ್ದರೂ ಎಚ್ಚರದ ಧರ್ಮವು ಯಾವದೂ ಇಲ್ಲದೆ ಎಚ್ಚತ್ತಿರುವನೋ[1], ಯಾವನ ಜ್ಞಾನವು ಯಾವದೊಂದು ವಾಸನೆಯೂ ಇಲ್ಲದಿರುವದೋ ಅವನು ಜೀವನ್ಮುಕ್ತನೆನಿಸುವನು.

ಶಾನ್ತಸಂಸಾರಕಲನಃ ಕಲಾವಾನಪಿ ನಿಷ್ಕಲಃ ।
ಯಃ ಸಚಿತ್ತೋಽಪಿ ನಿಶ್ಚಿತ್ತಃ[2] ಸ ಜೀವನ್ಮುಕ್ತ ಇಷ್ಯತೇ[3] ॥೪೩೭॥

೪೩೭. ಯಾವನು ಸಂಸಾರವ್ಯಾಪಾರವೆಲ್ಲ ಅಳಿದುಹೋಗಿರುವವನಾಗಿ ಅವಯವಗಳಿರುವವನಾದರೂ ನಿರವಯವನಾಗಿರುವನೋ, ಚಿತ್ತವಿದ್ದರೂ ಚಿತ್ತವಿಲ್ಲದವನಾಗಿರುವನೋ ಅವನು ಜೀವನ್ಮುಕ್ತನೆನಿಸುವನು[4].

ವರ್ತಮಾನೇಽಪಿ ದೇಹೇಽಸ್ಮಿಞ್ಛಾಯಾವದನುವರ್ತಿನಿ ।
ಅಹನ್ತಾಮಮತಾಭಾವೋ ಜೀವನ್ಮುಕ್ತಸ್ಯ ಲಕ್ಷಣಮ್ ॥೪೩೮॥

೪೩೮. ಈ ದೇಹವು ನೆರಳಿನಂತೆ[5] ಬೆಂಬಿಡದು ಇದ್ದುಕೊಂಡೇ ಇರುವದಾದರೂ ಅದರಲ್ಲಿ ನಾನು, ನನ್ನದು–ಎಂಬ ಭಾವವಿಲ್ಲದಿರುವದು ಜೀವನ್ಮುಕ್ತನ ಗುರುತು.

ಅತೀತಾನನುಸನ್ಧಾನಂ ಭವಿಷ್ಯದವಿಚಾರಣಮ್ ।
ಔದಾಸೀನ್ಯಮಪಿ ಪ್ರಾಪ್ತೇ ಜೀವನ್ಮುಕ್ತಸ್ಯ ಲಕ್ಷಣಮ್ ॥೪೩೯॥

೪೩೯. ಹಿಂದೆ ಆಗಿಹೋದದ್ದನ್ನು ನೆನಸಿಕೊಳ್ಳದಿರುವದು, ಮುಂದೆ ಆಗಬಹುದಾದದ್ದನ್ನು ಮನಸ್ಸಿಗೆ ಹತ್ತಿಸಿಕೊಳ್ಳದಿರುವದು, (ಈಗ) ಒದಗಿಬಂದಿರುವವರಲ್ಲಿ ಅಸಡ್ಡೆಯಿಂದಿರುವದು– (ಇದು) ಜೀವನ್ಮುಕ್ತನ ಗುರುತು.

ಗುಣದೋಷವಿಶಿಷ್ಟೇಽಸ್ಮಿನ್ ಸ್ವಭಾವೇನ ವಿಲಕ್ಷಣೇ ।
ಸರ್ವತ್ರ ಸಮದರ್ಶಿತ್ವಂ ಜೀವನ್ಮುಕ್ತಸ್ಯ ಲಕ್ಷಣಮ್ ॥೪೪೦॥

---

1. ಶಂ. ಗೀ. ೨–೬೯.

2. "ನಿಶ್ಚಿನ್ತಃ", "ಯಸ್ಯ ಚಿತ್ತಂ ವಿನಿಶ್ಚಿನ್ತಂ ವಾ"–ಎಂಬ ಪಾಠಗಳಿಗಿಂತ ಇದು ಮೇಲು.

3. ಜೀ. ವಿ. ಉ, ೯–೩, ೯–೧೩. ಎರಡನೆಯ ಶ್ಲೋಕವನ್ನು ಜೀವನ್ಮುಕ್ತಿವಿವೇಕದಲ್ಲಿಯೂ ಉದಾಹರಿಸಿದೆ.

4. ಯೋಗವಾಸಿಷ್ಠದ ಉತ್ಪತ್ತಿಪ್ರಕರಣದ ಶ್ಲೋಕಗಳ ಪಾಠವನ್ನನುಸರಿಸಿ ಕನ್ನಡಿಸಿದೆ.

5. ಗೀತೆ, ೪೮೦–ಈ ಶ್ಲೋಕಗಳಲ್ಲಿಯೂ ದೇಹಕ್ಕೆ ಇದೇ ಉಪಮಾನವಿದೆ.

೪೩೦. ಗುಣದೋಷವಿಶಿಷ್ಟವಾಗಿ ಸ್ವಭಾವದಿಂದಲೇ ವಿಲಕ್ಷಣವಾಗಿರುವ[1] ಈ (ಜಗತ್ತಿನಲ್ಲಿ) ಎಲ್ಲೆಲ್ಲಿಯೂ ಸಮದರ್ಶಿಯಾಗಿರುವದು ಜೀವನ್ಮುಕ್ತನ ಗುರುತು

ಇಷ್ಟಾನಿಷ್ಟಾರ್ಥಸಂಪ್ರಾಪ್ತೌ ಸಮದರ್ಶಿತಯಾಽಽತ್ಮನಿ ।
ಉಭಯತ್ರಾಽವಿಕಾರಿತ್ವಂ ಜೀವನ್ಮುಕ್ತಸ್ಯ ಲಕ್ಷಣಮ್ ॥೪೩೧॥

೪೩೧. ಇಷ್ಟವಾದ ಅಥವಾ ಅನಿಷ್ಟವಾದ ಅರ್ಥವು ಬಂದೊದಗಿದರೆ[2] (ಆ) ಎರಡರಲ್ಲಿಯೂ ಸಮದರ್ಶಿಯಾಗಿ[3] ತನ್ನಲ್ಲಿ ಯಾವ ವಿಕಾರವನ್ನೂ ಹೊಂದದಿರುವದು ಜೀವನ್ಮುಕ್ತನ ಗುರುತು.

ಬ್ರಹ್ಮಾನನ್ದರಸಾಸ್ವಾದಾಸಕ್ತಚಿತ್ತತಯಾ ಯತೇಃ ।
ಅನ್ತರ್ಬಹಿರವಿಜ್ಞಾನಂ ಜೀವನ್ಮುಕ್ತಸ್ಯ ಲಕ್ಷಣಮ್ ॥೪೩೨॥

೪೩೨. ಬ್ರಹ್ಮಾನಂದರಸವನ್ನು ಸವಿನೋಡುವದರಲ್ಲಿಯೇ ಚಿತ್ತವು ಆಸಕ್ತವಾಗಿರುವದರಿಂದ ಯತಿಯಾಗಿರುವವನಿಗೆ ಒಳಗುಹೊರಗುಗಳ ಅರಿವೇ ಇಲ್ಲದಿರುವದು ಜೀವನ್ಮುಕ್ತನ ಲಕ್ಷಣವು.

ದೇಹೇನ್ದ್ರಿಯಾದೌ ಕರ್ತವ್ಯೇ ಮಮಾಹಂಭಾವವರ್ಜಿತಃ ।
ಔದಾಸೀನ್ಯೇನ ಯಸ್ತಿಷ್ಠೇತ್ ಸ ಜೀವನ್ಮುಕ್ತಲಕ್ಷಣಃ ॥೪೩೩॥

೪೩೩. ದೇಹ, ಇಂದ್ರಿಯಗಳು– ಮುಂತಾದವುಗಳಲ್ಲಿಯೂ ಮಾಡಬೇಕಾಗಿರುವ ಕರ್ಮದಲ್ಲಿಯೂ ನಾನುನನ್ನದೆಂಬ ಭಾವವಿಲ್ಲದೆ ಯಾವನು ಉದಾಸೀನಭಾವದಿಂದಿರುವನೋ ಅವನು ಜೀವನ್ಮುಕ್ತನ ಲಕ್ಷಣವುಳ್ಳವನು.

ವಿಜ್ಞಾತ ಆತ್ಮನೋ ಯಸ್ಯ ಬ್ರಹ್ಮಭಾವಃ ಶ್ರುತೇರ್ಬಲಾತ್ ।
ಭವಬನ್ಧವಿನಿರ್ಮುಕ್ತಃ ಸ ಜೀವನ್ಮುಕ್ತಲಕ್ಷಣಃ ॥೪೩೪॥

೪೩೪. ಯಾವನು ತಾನು ಬ್ರಹ್ಮವೇ ಎಂದು ಶ್ರುತಿಪ್ರಮಾಣದ ಬಲದಿಂದ ಅರಿತಿರುವನೋ ಸಂಸಾರಬಂಧದಿಂದ ಬಿಡುಗಡೆಹೊಂದಿರುವ ಆತನು ಜೀವನ್ಮುಕ್ತನ ಲಕ್ಷಣವುಳ್ಳವನು.

1. ಆತ್ಮನು ಗುಣದೋಷಗಳನ್ನು ಮೀರಿರುತ್ತಾನೆ, ಜಗತ್ತು ಅವನಿಗಿಂತ ವಿಲಕ್ಷಣವಾಗಿದೆ.

2. ನಿಜವಾಗಿ ಜ್ಞಾನಿಗೆ ಇಷ್ಟವಾಗಲಿ ಅನಿಷ್ಟವಾಗಲಿ ಇಲ್ಲದಿದ್ದರೂ ಲೋಕದೃಷ್ಟಿಯಿಂದ ಇದನ್ನು ಹೇಳಿದೆ. ಶಂ. ಗೀ. ೧೪–೨೫.

3. ಸಮದರ್ಶಿಯಾಗಿರುವದೆಂಬುದು ಮುಕ್ತರೆಲ್ಲರಿಗೂ ತಿಳಿಯಬರುವ ಲಕ್ಷಣವು. ಶಂ. ಗೀ. ೬–೩೨.

ದೇಹೇನ್ದ್ರಿಯೇಷ್ವಹಂಭಾವ ಇದಂಭಾವಸ್ತದನ್ಯಕೇ ।
ಯಸ್ಯ ನೋ ಭವತಃ ಕ್ವಾಪಿ ಸ ಜೀವನ್ಮುಕ್ತ ಇಷ್ಯತೇ ॥೪೩೫॥

೪೩೫. ಯಾವನಿಗೆ ದೇಹೇಂದ್ರಿಯಗಳಲ್ಲಿ ನಾನೆಂಬ ಭಾವವೂ ಅವುಗಳಿಗಿಂತ ಬೇರೆಯಾದವುಗಳಲ್ಲಿ ಇದು ಎಂಬ ಭಾವವೂ[1] ಎಂದಿಗೂ ಉಂಟಾಗದಿರುವದೋ ಆವನು ಜೀವನ್ಮುಕ್ತನೆನಿಸುವನು.

ನ ಪ್ರತ್ಯಗ್ಬ್ರಹ್ಮಣೋರ್ಭೇದಂ ಕದಾಪಿ ಬ್ರಹ್ಮಸರ್ಗಯೋಃ ।
ಪ್ರಜ್ಞಯಾ ಯೋ ವಿಜಾನಾತಿ ಸ ಜೀವನ್ಮುಕ್ತ ಇಷ್ಯತೇ[2] ॥೪೩೬॥

೪೩೬. ಪ್ರತ್ಯಗಾತ್ಮ, ಬ್ರಹ್ಮ- ಇವರಿಗಾಗಲಿ, ಬ್ರಹ್ಮ, ಸೃಷ್ಟಿ- ಇವುಗಳಿಗಾಗಲಿ ಎಂದಿಗೂ ಯಾವನು ಭೇದವನ್ನು ಎಣಿಸದ ಪ್ರಜ್ಞೆಯುಳ್ಳವನಾಗಿರುವನೋ ಆವನು ಜೀವನ್ಮುಕ್ತನೆನಿಸುವನು.

ಸಾಧುಭಿಃ ಪೂಜ್ಯಮಾನೇಽಸ್ಮಿನ್ ಪೀಡ್ಯಮಾನೇಽಪಿ ದುರ್ಜನೈಃ ।
ಸಮಭಾವೋ ಭವೇದ್ಯಸ್ಯ ಸ ಜೀವನ್ಮುಕ್ತ ಇಷ್ಯತೇ ॥೪೩೭॥

೪೩೭. ತನ್ನನ್ನು ಒಳ್ಳೆಯವರು ಗೌರವಿಸುತ್ತಿದ್ದರೂ ಕೆಟ್ಟವರು ತೊಂದರೆಗೊಳಿಸುತ್ತಿದ್ದರೂ ಯಾವಾತನಿಗೆ ಸಮಭಾವವೇ ಇರುವದೋ[4] ಆವನು ಜೀವನ್ಮುಕ್ತನೆನಿಸುವನು.

ಯತ್ರ ಪ್ರವಿಷ್ಟಾ ವಿಷಯಾಃ ಪರೇರಿತಾ
ನದೀಪ್ರವಾಹಾ ಇವ ವಾರಿರಾಶೌ
ಲಿನನ್ತಿ ಸನ್ಮಾತ್ರತಯಾ ನ ವಿಕ್ರಿಯಾ-
ಮುತ್ಪಾದಯನ್ತ್ಯೇಷ ಯತಿರ್ವಿಮುಕ್ತಃ ॥೪೩೮॥

೪೩೮. ಮತ್ತೊಬ್ಬರಿಂದ ಪ್ರೇರಿತವಾಗಿ ಬರುವ ವಿಷಯಗಳು ಯಾವನನ್ನು ಒಳಹೊಕ್ಕರೆ ಕಡಲನ್ನು ಸೇರಿದ ನದೀಪ್ರವಾಹದಂತೆ[5] ಅಡಗಿ ಸನ್ಮಾತ್ರವಾಗುವವೋ ಯಾವ ವಿಕಾರವನ್ನೂ ಉಂಟುಮಾಡುವದಿಲ್ಲವೋ ಆ ಯತಿಯೇ ಮುಕ್ತನು.

1 ಶಂ. ಗೀ. ೫ ೧೩, ೧೪-೧೫.

2. ಈ ಶ್ಲೋಕದಲ್ಲಿಯೂ ಹಿಂದಿನ ಶ್ಲೋಕದಲ್ಲಿಯೂ 'ಜೀವನ್ಮುಕ್ತಲಕ್ಷಣಃ' ಎಂಬ ಪಾಠವೂ ಉಂಟು.

3. ಅದೇಹಾವರ್ತ್ಯೈಕತ್ವಜ್ಞಾನ. ಶಂ. ಗೀ. ೫- ೭, ೭-೧೯,

4. ಶಂ. ಗೀ. ೪-೨೨.    5. ಶಂ. ಗೀ. ೨-೭೦.

## ಅಪರೋಕ್ಷಜ್ಞಾನಿಗೆ ಸಂಸಾರವಿಲ್ಲ

**ವಿಜ್ಞಾತಬ್ರಹ್ಮತತ್ತ್ವಸ್ಯ ಯಥಾಪೂರ್ವಂ ನ ಸಂಸೃತಿಃ[1] ।**
**ಅಸ್ತಿ ಚೇನ್ನ ಸ ವಿಜ್ಞಾತಬ್ರಹ್ಮಭಾವೋ ಬಹಿರ್ಮುಖಃ ॥೪೩೯॥**

೪೩೯. ಬ್ರಹ್ಮತತ್ತ್ವವನ್ನು ಬಲ್ಲವನಿಗೆ ಮುನ್ನಿನಂತೆಯೇ ಸಂಸಾರವಿರುವದಿಲ್ಲ.[2] ಇದ್ದರೆ ಹೊರಮುಖವಾಗಿರುವ (ಚಿತ್ತವುಳ್ಳ) ಆತನು ಬ್ರಹ್ಮತತ್ತ್ವವನ್ನು ಅರಿತುಕೊಂಡವನೇ ಅಲ್ಲ.

**ಪ್ರಾಚೀನವಾಸನಾವೇಗಾದಸೌ ಸಂಸರತೀತಿ ಚೇತ್ ।**
**ನ ಸದೇಕತ್ವವಿಜ್ಞಾನಾನ್ಮಂದೀ ಭವತಿ ವಾಸನಾ ॥೪೪೦॥**

೪೪೦. ಅವನು ಹಿಂದಿನ ವಾಸನೆಯಿಂದ ಸಂಸಾರದಲ್ಲಿರುತ್ತಾನೆ-ಎಂದರೆ ಅದು ಸರಿಯಲ್ಲ. ಏಕೆಂದರೆ ಸದ್ರೂಪವಾದ (ಬ್ರಹ್ಮ)ವೊಂದೇ (ಪರಮಾರ್ಥವು) ಎಂಬ ಜ್ಞಾನದಿಂದ ವಾಸನೆಯು ಕಡಿಮೆಯಾಗಿಹೋಗುತ್ತದೆ.

**ಅತ್ಯಂತಕಾಮುಕಸ್ಯಾಪಿ ವೃತ್ತಿಃ ಕುಣ್ಠತಿ ಮಾತರಿ ।**
**ತಥೈವ ಬ್ರಹ್ಮಣಿ ಜ್ಞಾತೇ ಪೂರ್ಣಾನಂದೇ ಮನೀಷಿಣಃ ॥೪೪೧॥**

೪೪೧. ಅತ್ಯಂತಕಾಮುಕನಿಗೂ ತಾಯಿಯ ವಿಷಯದಲ್ಲಿ ಕಾಮವೃತ್ತಿಯು ಮುಕ್ಕಾಗುತ್ತದೆ; ಪೂರ್ಣಾನಂದರೂಪವಾದ ಬ್ರಹ್ಮವನ್ನು ಅರಿತುಕೊಂಡಿರುವ ಜ್ಞಾನಿಗೂ ಹಾಗೆಯೇ (ಸಂಸಾರವೃತ್ತಿಯು ಮುಕ್ಕಾಗುತ್ತದೆ)[3].

## ಅಪರೋಕ್ಷಜ್ಞಾನಿಗೆ ಪ್ರಾರಬ್ಧಕರ್ಮವಿಲ್ಲ

**ನಿದಿಧ್ಯಾಸನಶೀಲಸ್ಯ ಬಾಹ್ಯಪ್ರತ್ಯಯ ಈಕ್ಷ್ಯತೇ ।**
**ಬ್ರವೀತಿ ಶ್ರುತಿರೇತಸ್ಯ ಪ್ರಾರಬ್ಧಂ ಫಲದರ್ಶನಾತ್ ॥೪೪೨॥**

1. ಶಿವಧರ್ಮವಾಕ್ಯವನ್ನು ಮನಸ್ಸಿನಲ್ಲಿಟ್ಟುಕೊಂಡು ಈ ವಾಕ್ಯವನ್ನು ಬರೆದಂತಿದೆ. ಈ ಶ್ಲೋಕವನ್ನು ಶ್ವೇತಾಶ್ವತರ ಭಾಷ್ಯದ ಉಪೋದ್ಘಾತದಲ್ಲಿ ಉದಾಹರಿಸಿದೆ. 'ಜ್ಞಾನಾಮೃತೇನ ತೃಪ್ತಸ್ಯ ಕೃತಕೃತ್ಯಸ್ಯ ಯೋಗಿನಃ । ನೈವಾಸ್ತಿ ಕಿಞ್ಚಿತ್ ಕರ್ತವ್ಯಮಸ್ತಿ ಚೇನ್ನ ಸ ತತ್ತ್ವವಿತ್ ॥' ಶಂ. ಗೀ. ೩-೧೮.

2. ಶಂ. ಗೀ. ೩-೧೭.

3. ಕಾಮಿಗೇ ಸ್ವೇಚ್ಛಾಪ್ರವೃತ್ತಿಗೆ ತಡೆಯಿರುತ್ತದೆ; ಹೀಗಿರುವಲ್ಲಿ ಪೂರ್ಣಾನಂದವನ್ನು ಸವಿಯುತ್ತಿರುವವನಿಗೆ ಸುಖೇಚ್ಛೆಯಿಂದ ಸ್ವೇಚ್ಛಾಪ್ರವೃತ್ತಿಯಾಗಲಾರದೆಂಬುದನ್ನು ಹೇಳತಕ್ಕದ್ದೇನು ?-ಎಂದು ಭಾವ.

೪೪೩. ನಿದಿಧ್ಯಾಸನವನ್ನು ಮಾಡುತ್ತಿರುವವನಿಗೆ ಹೊರಗಿನ (ವಿಷಯ) ಗಳು ಅರಿವು ಕಾಣಬರುತ್ತದೆ. ( ಹೀಗೆ ) ಕರ್ಮದ ಫಲ(ವಾದ ಭೋಗ)ವು[1] ಕಂಡುಬರುತ್ತಿರುವದರಿಂದ ಅವನಿಗೆ ಪ್ರಾರಬ್ಧಕರ್ಮವುಂಟೆಂದು ಶ್ರುತಿ ಹೇಳುತ್ತಿರುವದು[2].

**ಸುಖಾದ್ಯನುಭವೋ ಯಾವತ್ ತಾವತ್ ಪ್ರಾರಬ್ಧಮಿಷ್ಯತೇ ।**
**ಫಲೋದಯಃ ಕ್ರಿಯಾಪೂರ್ವೋ ನಿಷ್ಕ್ರಿಯೋ ನ ಹಿ ಕುತ್ರಚಿತ್ ॥೪೪೪॥**

೪೪೪. ಸುಖವೇ ಮುಂತಾದದ್ದರ ಅನುಭವವು ಎಲ್ಲಿಯವರೆಗೆ ಇರುವದೋ ಅಲ್ಲಿಯವರೆಗೂ ಪ್ರಾರಬ್ಧವನ್ನು ಒಪ್ಪಬೇಕು. ಏಕೆಂದರೆ ಫಲವುಂಟಾಗುವದಕ್ಕೆ ಮೊದಲು ಕರ್ಮವಿರಬೇಕು. ಕರ್ಮವಿಲ್ಲದೆ (ಅದು) ಎಂದಿಗೂ ಆಗಲಾರದು.

**ಅಹಂ ಬ್ರಹ್ಮೇತಿ ವಿಜ್ಞಾನಾತ್ ಕಲ್ಪಕೋಟಿಶತಾರ್ಜಿತಮ್ ।**
**ಸಞ್ಚಿತಂ ವಿಲಯಂ ಯಾತಿ ಪ್ರಬೋಧಾತ್ ಸ್ವಪ್ನಕರ್ಮವತ್ ॥೪೪೫॥**

೪೪೫. 'ನಾನು ಬ್ರಹ್ಮವು' ಎಂಬ ಅರಿವಿನಿಂದ ಒಂದು ಕೋಟಿ ಕಲ್ಪಗಳಿಂದ ಸಂಪಾದಿಸಿದ್ದ ಸಂಚಿತಕರ್ಮವುಕೂಡ ಎಚ್ಚರದಿಂದ ಕನಸಿನ ಕರ್ಮವು ನಾಶವಾಗುವಂತೆ ನಾಶವಾಗಿಬಿಡುತ್ತದೆ.

**ಯತ್ ಕೃತಂ ಸ್ವಪ್ನವೇಲಾಯಾಂ ಪುಣ್ಯಂ ವಾ ಪಾಪಮುಲ್ಬಣಮ್ ।**
**ಸುಪ್ತೋತ್ಥಿತಸ್ಯ ಕಿಂ ತತ್ ಸ್ಯಾತ್ ಸ್ವರ್ಗಾಯ ನರಕಾಯ ವಾ ॥೪೪೬॥**

೪೪೬. ಕನಸಿನ ಕಾಲದಲ್ಲಿ ಮಾಡಿದ್ದ ಎಷ್ಟೇ ಹೆಚ್ಚಿನ ಪುಣ್ಯವಾಗಲಿ ಪಾಪವಾಗಲಿ, ನಿದ್ರೆಯಿಂದೆಚ್ಚತ್ತವನಿಗೆ ಸ್ವರ್ಗಕ್ಕೆ ಅಥವಾ ನರಕಕ್ಕೆ ಕಾರಣವಾದೀತೇನು ?

**ಸ್ವಮಸಙ್ಗಮುದಾಸೀನಂ ಪರಿಜ್ಞಾಯ ನಭೋ ಯಥಾ ।**
**ನ ಶ್ಲಿಷ್ಯತೇ ಯತಿಃ ಕಿಞ್ಚಿತ್ ಕದಾಚಿದ್ ಭಾವಿಕರ್ಮಭಿಃ ॥೪೪೭॥**

೪೪೭. ತನ್ನ ಆತ್ಮನು ಆಕಾಶದಂತೆ ಅಸಂಗನೆಂದೂ ಉದಾಸೀನನೆಂದೂ ಅರಿತುಕೊಂಡ ಬಳಿಕ ಯತಿಯಾದವನಿಗೆ ಆಗಾಮಿಕರ್ಮಗಳಿಂದ ಒಂದಿಷ್ಟು ಅಂಟು ಎಂದಿಗೂ ಆಗಲಾರದು.

**ನ ನಭೋ ಘಟಯೋಗೇನ ಸುರಾಗನ್ಧೇನ ಲಿಪ್ಯತೇ ।**
**ತಥಾತ್ಮೋಪಾಧಿಯೋಗೇನ ತದ್ಧರ್ಮೈರ್ನೈವ ಲಿಪ್ಯತೇ ॥೪೪೮॥**

1. ೪೦೩ನೆಯ ಶ್ಲೋಕದಂತೆ ಇಲ್ಲಿಯೂ ಕರ್ಮಫಲಭೋಗವನ್ನೇ ಫಲವೆಂದಿದೆ.
2. 'ತಾವದೇವ ಚಿರಮ್' (ಛಾಂ. ೬-೧೪-೨) ಎಂಬ ಶ್ರುತಿ. ಶಂ.ಗೀ. ೬-೧೯

೪೪೭. ಆಕಾಶಕ್ಕೆ ಗಡಿಗೆಯ ಸಂಬಂಧದಿಂದ (ಅದರ) ಹೊಂಡದ ನಾಶವು ಹತ್ತಿಕೊಳ್ಳಲಾರದು. ಇದರಂತೆ ಆತ್ಮನಿಗೆ ಉಪಾಧಿಯ ಸಂಬಂಧದಿಂದ ಅವರ ಧರ್ಮಗಳು ಹತ್ತಿಕೊಳ್ಳಲಾರವು.

ಜ್ಞಾನೋದಯಾತ್ ಪುರಾಽರಬ್ಧಂ ಕರ್ಮ ಜ್ಞಾನಾನ್ನ ನಶ್ಯತಿ ।
ಅದತ್ವಾ ಸ್ವಫಲಂ ಲಕ್ಷ್ಯಮುದ್ದಿಶ್ಯೋತ್ಸೃಷ್ಟಬಾಣವತ್ ॥ ೪೪೮ ॥

೪೪೮. ಗುರಿಯಿಟ್ಟು ಬಿಟ್ಟ ಬಾಣವು ಹೇಗೆ ಗುರಿಯನ್ನು ಹೊಡೆಯದೆ ಬಿಡದೋ, ಹಾಗೆ ಜ್ಞಾನವುಂಟಾಗುವ ಮುಂಚೆಯೇ ಫಲವನ್ನು ಕೊಡುವದಕ್ಕೆ ಮೊದಲುಮಾಡಿರುವ ಪ್ರಾರಬ್ಧಕರ್ಮವು ತನ್ನ ಫಲವನ್ನು ಕೊಡದೆ ಜ್ಞಾನದಿಂದ ನಾಶವಾಗಲಾರದು.[1]

ವ್ಯಾಘ್ರಬುದ್ಧ್ಯಾ ವಿನಿರ್ಮುಕ್ತೋ ಬಾಣಃ ಪಶ್ಚಾತ್ತು ಗೋಮತೌ ।
ನ ತಿಷ್ಠತಿ ಛಿನತ್ತ್ಯೇವ ಲಕ್ಷ್ಯಂ ವೇಗೇನ ನಿರ್ಭರಮ್ ॥ ೪೪೯ ॥

೪೪೯. ಹುಲಿಯೆಂಬ ಬುದ್ಧಿಯಿಂದ ಬಿಟ್ಟ ಬಾಣವು ಆಮೇಲೆ ಅದು ಹಸುವೆಂಬ ಬುದ್ಧಿಯುಂಟಾದರೂ ನಿಲ್ಲುವದಿಲ್ಲ; ವೇಗದಿಂದ ಹೋಗಿ ತನ್ನ ಗುರಿಯನ್ನು ಹೊಡೆದೇತೀರುತ್ತದೆ.

ಪ್ರಾರಬ್ಧಂ ಬಲವತ್ತರಂ ಖಲು ವಿದಾಂ ಭೋಗೇನ ತಸ್ಯ ಕ್ಷಯಃ
ಸಮ್ಯಗ್ಜ್ಞಾನಹುತಾಶನೇನ ವಿಲಯಃ ಪ್ರಾಕ್ಸಂಚಿತಾಗಾಮಿನಾಮ್ ।
ಬ್ರಹ್ಮಾತ್ಮೈಕ್ಯಮವೇಕ್ಷ್ಯ ತನ್ಮಯತಯಾ ಯೇ ಸರ್ವದಾ ಸಂಸ್ಥಿತಾ-
ಸ್ತೇಷಾಂ ತತ್ತ್ರಿತಯಂ ನ ಹಿ ಕ್ವಚಿದಪಿ ಬ್ರಹ್ಮೈವ ತೇ ನಿರ್ಗುಣಮ್॥

೪೫೦. ಪ್ರಾರಬ್ಧಕರ್ಮವು ಎಲ್ಲಕ್ಕಿಂತಲೂ ಬಲವಾದದ್ದು. ಜ್ಞಾನಿಗಳು ಅದರ ಫಲವನ್ನು ಅನುಭವಿಸಿಯೇ ಅದನ್ನು ಸವೆಯಿಸಬೇಕು. ಸರಿಯಾದ ತಿಳಿವಳಿಕೆಯೆಂಬ ಬೆಂಕಿಯಿಂದ ಹಿಂದಿನ ಸಂಚಿತ, ಮುಂದಿನ ಆಗಾಮಿ– ಈ ಎರಡು ಬಗೆಯ ಕರ್ಮಗಳೂ ನಾಶವಾಗುತ್ತವೆ. (ಆದರೆ) ಯಾರು ಬ್ರಹ್ಮವೂ ಆತ್ಮನೂ ಒಂದೇ ಎಂಬುದನ್ನು ಕಂಡುಕೊಂಡು ಆ ರೂಪದಿಂದಲೇ ಯಾವಾಗಲೂ ಇದ್ದುಕೊಂಡಿರುವರೋ ಅವರಿಗೆ ಈ ಮೂರು (ಬಗೆಯ ಕರ್ಮವೂ) ಇರುವದಿಲ್ಲ: ಏಕೆಂದರೆ ಅವರು ನಿರ್ಗುಣವಾದ ಬ್ರಹ್ಮವೇ ಆಗಿರುತ್ತಾರೆ.[2]

ಉಪಾಧಿತಾದಾತ್ಮ್ಯವಿಹೀನಕೇವಲ-
ಬ್ರಹ್ಮಾತ್ಮನೈವಾತ್ಮನಿ ತಿಷ್ಠತೋ ಮುನೇಃ ।
ಪ್ರಾರಬ್ಧಸದ್ಭಾವಕಥಾ ನ ಯುಕ್ತಾ
ಸ್ವಪ್ನಾರ್ಥಸಂಬನ್ಧಕಥೇವ ಜಾಗ್ರತಃ ॥ ೪೫೦ ॥

1. ಶಂ. ಗೀ. ೪–೩೭.  2. ಶಂ. ಗೀ. ೬–೩೭.

೪೫೧. ಉಪಾಧಿಯೋ ತಾನಾಗದೆ ಬರಿಯ ಬ್ರಹ್ಮರೂಪದಿಂದಲೇ ತನ್ನ ಸ್ವರೂಪದಲ್ಲಿ ನಿಂತಿರುವ ಮುನಿಗೆ, ಎಚ್ಚತ್ತಿರುವವನಿಗೆ ಕನಸಿನ ಪದಾರ್ಥಗಳ ಸಂಬಂಧವು ಉಂಟೆಂಬ ಮಾತು ಹೇಗೆ ಸರಿಯಲ್ಲವೋ ಹಾಗೆ, ಪ್ರಾರಬ್ಧ ವುಂಟೆಂಬ ಮಾತು ಸಲ್ಲದು.

ನ ಹಿ ಪ್ರಬುದ್ಧಃ ಪ್ರತಿಭಾಸದೇಹೇ
ದೇಹೋಪಯೋಗಿನ್ಯಪಿ ಚ ಪ್ರಪಞ್ಚೇ ।
ಕರೋತ್ಯಹನ್ತಾಂ ಮಮತಾಮಿದನ್ತಾಂ
ಕಿಂ ತು ಸ್ವಯಂ ತಿಷ್ಠತಿ ಜಾಗರೇಣ ॥ ೪೫೨ ॥

೪೫೨. ಎಚ್ಚತ್ತವನು (ಕನಸಿನ) ತೋರಿಕೆಯ ದೇಹದಲ್ಲಾಗಲಿ (ಆ) ದೇಹಕ್ಕೆ ಬೇಕಾದ ಪ್ರಪಂಚದಲ್ಲಾಗಲಿ (ಇದು) ನಾನು, ನನ್ನದು, ಇದು ವಿಷಯವು–ಎಂಬ (ಭಾವನೆ) ಯನ್ನೇನೂ ಮಾಡಿಕೊಂಡಿರುವದಿಲ್ಲ. ಮತ್ತೇನೆಂದರೆ ತಾನುತಾನು ಎಚ್ಚತ್ತು ಸ್ವಸ್ಥನಾಗಿರುತ್ತಾನೆ. ಅಲ್ಲವೆ ?

ನ ತಸ್ಯ ಮಿಥ್ಯಾರ್ಥಸಮರ್ಥನೇಚ್ಛಾ
ನ ಸಙ್ಗ್ರಹಸ್ತಜ್ಜಗತೋಽಪಿ ದೃಷ್ಟಃ ।
ತತ್ರಾನುವೃತ್ತಿರ್ಯದಿ ಚೇನ್ಮೃಷಾರ್ಥೇ
ನ ನಿದ್ರಯಾ ಮುಕ್ತ ಇತೀಷ್ಯತೇ ಧ್ರುವಮ್ ॥ ೪೫೩ ॥

೪೫೩. ಅವನಿಗೆ ಮಿಥ್ಯಾರೂಪವಾದ (ಕನಸಿನ) ವಸ್ತುಗಳನ್ನು ಬಯಸುವ ಹಂಬಲಿರುವದಿಲ್ಲ; ಆ ಜಗತ್ತನ್ನು ಅವರು ಕೂಡಿಟ್ಟುಕೊಳ್ಳುವದೂ ಕಂಡು ಬರುವದಿಲ್ಲವಷ್ಟೆ ? ಆ ಸುಳ್ಳುತೋರಿಕೆಯ ಪದಾರ್ಥದಲ್ಲಿಯೂ ಅವನ ಪ್ರವೃತ್ತಿ ಯಿದ್ದರೆ ಅವನು ನಿದ್ರೆಯಿಂದೆಚ್ಚತ್ತೇ ಇಲ್ಲವೆಂದು ನಿಶ್ಚಯಿಸುತ್ತೇವೆ.

ತದ್ವತ್ ಪರೇ ಬ್ರಹ್ಮಣಿ ವರ್ತಮಾನಃ
ಸದಾತ್ಮನಾ ತಿಷ್ಠತಿ ನಾನ್ಯದೀಕ್ಷತೇ ।
ಸ್ಮೃತಿರ್ಯಥಾ ಸ್ವಪ್ನವಿಲೋಕಿತಾರ್ಥೇ
ತಥಾವಿದಃ ಪ್ರಾಶನಮೋಚನಾದೌ ॥ ೪೫೪ ॥

೪೫೪. ಇದರಂತೆ ಪರಬ್ರಹ್ಮದಲ್ಲಿಯೇ ಇದ್ದುಕೊಂಡಿರುವಾತನು ಸದ್ರೂಪ ದಿಂದಲೇ ಇದ್ದುಬಿಡುತ್ತಾನೆ, ಮತ್ತೊಂದನ್ನು ಕಾಣುವದಿಲ್ಲ. ಕನಸಿನಲ್ಲಿ ಕಂಡ ಪದಾರ್ಥದ ನೆನಪು ಹೇಗೋ ಹಾಗೆಯೇ (ಆ) ಜ್ಞಾನಿಗೆ ಊಟಮಾಡುವದು, ಬಿಡುವದು – ಮುಂತಾದವುಗಳಲ್ಲಿಯೂ (ಭಾವನೆಯಿರುತ್ತದೆ).

ಕರ್ಮಣಾ ನಿರ್ಮಿತೋ ದೇಹಃ ಪ್ರಾರಬ್ಧಂ ತಸ್ಯ ಕಲ್ಪ್ಯತಾಮ್ ।
ನಾನಾದೇರಾತ್ಮನೋ ಯುಕ್ತಂ ನೈವಾತ್ಮಾ ಕರ್ಮನಿರ್ಮಿತಃ ॥ ೪೫೫ ॥

೪೫೫. ದೇಹವು ಕರ್ಮದಿಂದ ಆಗಿರುತ್ತದೆ; (ಆದ್ದರಿಂದ) ಅದಕ್ಕೆ ಪ್ರಾರಬ್ಧವನ್ನು ಕಲ್ಪಿಸಬಹುದು. ಅನಾದಿಯಾದ ಆತ್ಮನಿಗೆ ಅದನ್ನು ಕಲ್ಪಿಸುವದು ಯುಕ್ತವಲ್ಲ; ಏಕೆಂದರೆ ಆತ್ಮನು ಕರ್ಮದಿಂದ ಆಗಿರುವವನಲ್ಲ.

ಅಜೋ ನಿತ್ಯ ಇತಿ ಬ್ರೂತೇ ಶ್ರುತಿರೇಷಾ ತ್ವಮೋಘವಾಕ್[1] ।
ತದಾತ್ಮನಾ ತಿಷ್ಠತೋಽಸ್ಯ ಕುತಃ ಪ್ರಾರಬ್ಧಕಲ್ಪನಾ ॥ ೪೫೬ ॥

೪೫೬. 'ಅಜನು, ನಿತ್ಯನು' (ಕ. ೧-೨-೧೮) ಎಂದು ಸತ್ಯವನ್ನೇ ಹೇಳುವ ಶ್ರುತಿಯು ಹೇಳುತ್ತಿದೆ. ಆ ಆತ್ಮನ ರೂಪದಿಂದ ಇದ್ದುಕೊಂಡಿರುವ ಈ ಜ್ಞಾನಿಗೆ ಪ್ರಾರಬ್ಧಕಲ್ಪನೆ ಎಲ್ಲಿಂದ ಬಂದೀತು[2] ?

ಪ್ರಾರಬ್ಧಂ ಸಿಧ್ಯತಿ ತದಾ ಯದಾ ದೇಹಾತ್ಮನಾ ಸ್ಥಿತಿಃ ।
ದೇಹಾತ್ಮಭಾವೋ ನೈವೇಷ್ಟಃ ಪ್ರಾರಬ್ಧಂ ತ್ಯಜ್ಯತಾಮತಃ ॥ ೪೫೭ ॥

೪೫೭. ಯಾವಾಗ ದೇಹವೇ ತಾನಾಗಿರುವದೆಂಬುದಿರುವದೋ ಆಗ ಪ್ರಾರಬ್ಧವು ಸಿದ್ಧಿಸುತ್ತದೆ. ಆದರೆ ದೇಹಾತ್ಮಭಾವವು ಜ್ಞಾನಿಗಿರುವದೆಂಬುದು ಯಾರಿಗೂ ಇಷ್ಟವಿಲ್ಲ. ಆದ್ದರಿಂದ ಪ್ರಾರಬ್ಧ(ವೆಂಬ ಮಾತನ್ನು) ಬಿಟ್ಟುಬಿಡಬೇಕು.

ಶರೀರಸ್ಯಾಪಿ ಪ್ರಾರಬ್ಧಕಲ್ಪನಾ ಭ್ರಾನ್ತಿರೇವ ಹಿ
ಅಧ್ಯಸ್ತಸ್ಯ ಕುತಃ ಸತ್ತ್ವಮಸತ್ಯಸ್ಯ ಕುತೋ ಜನಿಃ ।
ಅಜಾತಸ್ಯ ಕುತೋ ನಾಶಃ ಪ್ರಾರಬ್ಧಮಸತಃ ಕುತಃ ॥ ೪೫೮ ॥

೪೫೮. ಶರೀರಕ್ಕಾದರೂ ಪ್ರಾರಬ್ಧವುಂಟೆಂಬುದು ಭ್ರಾಂತಿಯೇ. ಏಕೆಂದರೆ ಅಧ್ಯಸ್ತವಾದದ್ದು ಇರುವದೆಲ್ಲಿಂದ ಬಂತು ? ಇಲ್ಲದಿರುವದಕ್ಕೆ ಜನ್ಮವೆಲ್ಲಿಯದು ? ಹುಟ್ಟದಿರುವದಕ್ಕೆ ನಾಶವಾದರೂ ಹೇಗೆ ? ಯಾವದು ಇಲ್ಲವೇ ಇಲ್ಲವೋ ಅದಕ್ಕೆ ಪ್ರಾರಬ್ಧವು ಎಲ್ಲಿಂದ ಬರಬೇಕು ?

ಜ್ಞಾನೇನಾಜ್ಞಾನಕಾರ್ಯಸ್ಯ ಸಮೂಲಸ್ಯ ಲಯೋ ಯದಿ ।
ತಿಷ್ಠತ್ಯಯಂ ಕಥಂ ದೇಹ ಇತಿ ಶಙ್ಕಾವತೋ ಜಡಾನ್ ॥ ೪೫೯ ॥
ಸಮಾಧಾತುಂ ಬಾಹ್ಯದೃಷ್ಟ್ಯಾ ಪ್ರಾರಬ್ಧಂ ವದತಿ ಶ್ರುತಿಃ ।
ನ ತು ದೇಹಾದಿಸತ್ಯತ್ವಬೋಧನಾಯ ವಿಪಶ್ಚಿತಾಮ್ ॥ ೪೬೦ ॥

1. 'ಅಜೋ ನಿತ್ಯಃ ಶಾಶ್ವತ ಇತಿ ಬ್ರೂತೇ ಶ್ರುತಿರಮೋಘವಾಕ್' ಪಾ॥
2. ಶಂ. ಗೀ, ೬೯-೪೮.

ಯತಃ ಶ್ರುತೇರಭಿಪ್ರಾಯಃ ಪರಮಾರ್ಥೈಕಗೋಚರಃ[1] ॥ ೪೬೦ ॥

೪೫೯-೪೬೦. ಅಜ್ಞಾನಕಾರ್ಯವು ಸಮೂಲವಾಗಿ ಜ್ಞಾನದಿಂದ ಲಯವಾಗುವದಾದರೆ ಈ ದೇಹವು (ಇನ್ನೂ) ಇದ್ದುಕೊಂಡಿದೆಯಲ್ಲ, (ಇದು ಹೇಗೆ? – ಎಂದು ಶಂಕಿಸುವ ಮೂಢರಿಗೆ ಬಾಹ್ಯದೃಷ್ಟಿಯಿಂದ ಸಮಾಧಾನ ಮಾಡುವದಕ್ಕೋಸ್ಕರ ಶ್ರುತಿಯು ಪ್ರಾರಬ್ಧವನ್ನು ಹೇಳುತ್ತದೆಯೇ ಹೊರತು ಜ್ಞಾನಿಗಳಿಗೆ ದೇಹವೇ ಮುಂತಾದದ್ದು ಸತ್ಯವಾಗಿಯೂ ಇದೆಯೆಂದು ತಿಳಿಸುವದಕ್ಕಲ್ಲ. ಏಕೆಂದರೆ ಶ್ರುತಿಗೆ ಕೇವಲ ಪರಮಾರ್ಥದಲ್ಲಿಯೇ ತಾತ್ಪರ್ಯವಿರುತ್ತದೆ.

## ಬ್ರಹ್ಮದಲ್ಲಿ ಯಾವ ದ್ವೈತವೂ ಇರುವದಿಲ್ಲ

ಪರಿಪೂರ್ಣಮನಾದ್ಯನ್ತಮಪ್ರಮೇಯಮವಿಕ್ರಿಯಮ್ ।
ಏಕಮೇವಾದ್ವಯಂ ಬ್ರಹ್ಮ ನೇಹ ನಾನಾಸ್ತಿ ಕಿಞ್ಚನ ॥ ೪೬೧ ॥

೪೬೧. (ನಿಜವಾಗಿ ನೋಡಿದರೆ) ಪರಿಪೂರ್ಣವಾಗಿಯೂ ಆದಿಯೂ ಅಂತವೂ ಇಲ್ಲದ್ದಾಗಿಯೂ ಪ್ರಮಾಣಗಳಿಗೆ ಗೋಚರವಲ್ಲದ್ದಾಗಿಯೂ ಯಾವ ವಿಕಾರಗಳೂ ಇಲ್ಲದ್ದಾಗಿಯೂ ಇರುವ ತನಗೆರಡನೆಯದಿಲ್ಲದ್ದು ಬ್ರಹ್ಮವು. ಇದರಲ್ಲಿ ಒಂದಿಷ್ಟೂ ನಾನಾತ್ವವಿರುವದಿಲ್ಲ.[2]

ಸದ್ಘನಂ ಚಿದ್ಘನಂ ನಿತ್ಯಮಾನನ್ದಘನಮಕ್ರಿಯಮ್ ।
ಏಕಮೇವಾದ್ವಯಂ ಬ್ರಹ್ಮ ನೇಹ ನಾನಾಸ್ತಿ ಕಿಞ್ಚನ ॥ ೪೬೨ ॥

೪೬೨. ಬ್ರಹ್ಮವು ಸದ್ಘನವೂ ಚಿದ್ಘನವೂ ನಿತ್ಯವೂ ಆನಂದಘನವೂ[3] ನಿಷ್ಕ್ರಿಯವೂ ಆಗಿರುವ ತನಗೆರಡನೆಯದಿಲ್ಲದ ಒಂದೇ. ಇದರಲ್ಲಿ ಒಂದಿಷ್ಟೂ ನಾನಾತ್ವವಿರುವದಿಲ್ಲ.

ಪ್ರತ್ಯಗೇಕರಸಂ ಪೂರ್ಣಮನನ್ತಂ ಸರ್ವತೋಮುಖಮ್ ।
ಏಕಮೇವಾದ್ವಯಂ ಬ್ರಹ್ಮ ನೇಹ ನಾನಾಸ್ತಿ ಕಿಞ್ಚನ ॥ ೪೬೩ ॥

೪೬೩. ಬ್ರಹ್ಮವು ಒಳಗಿನ ಆತ್ಮನೂ ಏಕರಸವೂ[4] ಪೂರ್ಣವೂ ಅನಂತವೂ ಎಲ್ಲೆಲ್ಲಿಯೂ ವ್ಯಾಪಿಸಿರುವದೂ ಆಗಿರುವ ತನಗೆರಡನೆಯದಿಲ್ಲದ ಒಂದೇ, ಇದರಲ್ಲಿ ಒಂದಿಷ್ಟೂ ನಾನಾತ್ವವಿರುವದಿಲ್ಲ.

---

1. ಇದು ಎಲ್ಲಾ ಮುದ್ರಿತಪುಸ್ತಕಗಳಲ್ಲಿಯೂ ಇಲ್ಲ
2. ಕ. ೨-೧-೧೧. ಸಜಾತೀಯವಿಜಾತೀಯಸ್ವಗತಭೇದ–ಈ ಮೂರನ್ನೂ ಇಲ್ಲಿ ನಾನಾತ್ವವೆಂಬ ಮಾತಿನಲ್ಲಿ ಸಂಗ್ರಹಿಸಿದೆ.
3. ನೃ. ಉ. ೪ ; ಶಂ. ಗೀ. ೯-೫.
4. ಒಂದೇಬಗೆಯ, ತನಗಿಂತ ಬೇರೆ ಜಾತಿಯ ಯಾವದೊಂದರ ಬೆರಕೆಯೂ ಇಲ್ಲದ.

ಅಹೇಯಮನುಪಾದೇಯಮನಾಧೇಯಮನಾಶ್ರಯಮ್ ।
ಏಕಮೇವಾದ್ವಯಂ ಬ್ರಹ್ಮ ನೇಹ ನಾನಾಸ್ತಿ ಕಿಞ್ಚನ ॥೪೬೪॥

೪೬೪. ಬ್ರಹ್ಮವು ಬಿಡತಕ್ಕದ್ದಲ್ಲದ್ದೂ ತೆಗೆದುಕೊಳ್ಳತಕ್ಕದ್ದಲ್ಲದ್ದೂ[1] ಯಾವದೊಂದು ಅತಿಶಯವನ್ನು ಮಾಡುವದಕ್ಕೆ ತಕ್ಕದ್ದಲ್ಲದ್ದೂ ತನಗೆ ಮತ್ತೊಂದು ಆಶ್ರಯವಿಲ್ಲದ್ದೂ[2] ಆಗಿರುವ ತನಗೆರಡನೆಯದಿಲ್ಲದ ಒಂದೇ. ಇದರಲ್ಲಿ ಒಂದಿಷ್ಟೂ ನಾನಾತ್ವವಿರುವದಿಲ್ಲ.

ನಿರ್ಗುಣಂ ನಿಷ್ಕಲಂ ಸೂಕ್ಷ್ಮಂ ನಿರ್ವಿಕಲ್ಪಂ ನಿರಞ್ಜನಮ್ ।
ಏಕಮೇವಾದ್ವಯಂ ಬ್ರಹ್ಮ ನೇಹ ನಾನಾಸ್ತಿ ಕಿಞ್ಚನ ॥೪೬೫॥

೪೬೫ ಬ್ರಹ್ಮವು ಗುಣರಹಿತವಾದದ್ದೂ[3] ಅವಯವರಹಿತವಾದದ್ದೂ ಸೂಕ್ಷ್ಮವಾದದ್ದೂ[4] ಯಾವ ವಿಕಲ್ಪವೂ ಇಲ್ಲದ್ದೂ[5] ಇತರ ಅಂಟೂ ಇಲ್ಲದ್ದೂ[6] ಆಗಿರುವ ತನಗೆರಡನೆಯದಿಲ್ಲದ ಒಂದೇ. ಇದರಲ್ಲಿ ಒಂದಿಷ್ಟೂ ನಾನಾತ್ವವಿರುವದಿಲ್ಲ.

ಅನಿರೂಪ್ಯಸ್ವರೂಪಂ ಯನ್ಮನೋವಾಚಾಮಗೋಚರಮ್ ।
ಏಕಮೇವಾದ್ವಯಂ ಬ್ರಹ್ಮ ನೇಹ ನಾನಾಸ್ತಿ ಕಿಞ್ಚನ ॥೪೬೬॥

೪೬೬. ಬ್ರಹ್ಮವು ಇಂಥದ್ದೆಂದು ಗೊತ್ತುಪಡಿಸಲಳವಲ್ಲದ ಸ್ವರೂಪವುಳ್ಳದ್ದೂ, ಮನಸ್ಸಿಗೂ ವಾಕ್ಕುಗಳಿಗೂ ಅಗೋಚರವಾದದ್ದೂ ಆಗಿರುವ ತನಗೆ ಎರಡನೆಯದಿಲ್ಲದ ಒಂದೇ. ಇದರಲ್ಲಿ ಒಂದಿಷ್ಟೂ ನಾನಾತ್ವವಿರುವದಿಲ್ಲ.

ಸತ್ಸಮೃದ್ಧಂ ಸ್ವತಃಸಿದ್ಧಂ ಶುದ್ಧಂ ಬುದ್ಧಮನೀದೃಶಮ್ ।
ಏಕಮೇವಾದ್ವಯಂ ಬ್ರಹ್ಮ ನೇಹ ನಾನಾಸ್ತಿ ಕಿಞ್ಚನ ॥೪೬೭॥

೪೬೭. ಬ್ರಹ್ಮವು ಸದ್ರೂಪವಾದದ್ದೂ ಸಂಪೂರ್ಣವಾದದ್ದೂ (ಪ್ರಮಾಣವನ್ನು ಬಯಸದೆ) ತಾನೇ ಸಿದ್ಧವಿರುವಂಥದ್ದೂ ಶುದ್ಧವಾಗಿಯೂ ಜ್ಞಾನಸ್ವರೂಪವಾಗಿಯೂ ಉಪಮಾನರಹಿತವಾಗಿಯೂ ಇರುವ ತನಗೆರಡನೆಯದಿಲ್ಲದ ಒಂದೇ ಇದರಲ್ಲಿ ಒಂದಿಷ್ಟೂ ನಾನಾತ್ವವಿರುವದಿಲ್ಲ.

---

1. ತನಗಿಂತ ಬೇರೆಯಾದದ್ದು ಬಿಡತಕ್ಕದ್ದು ಅಥವಾ ತೆಗೆದುಕೊಳ್ಳತಕ್ಕದ್ದು ಆಗಿರುತ್ತದೆ ; ತನ್ನ ಆತ್ಮನೇ ಆಗಿರುವ ಬ್ರಹ್ಮವು ಅಂಥದ್ದಲ್ಲ.

2. ಮತ್ತೊಂದು ಆಶ್ರಯವನ್ನು ಬಯಸದೆ ತಾನೇ ಸ್ವತಂತ್ರವಾಗಿ ಇದ್ದುಕೊಂಡಿರುವದು.

3. ಯಾವ ಧರ್ಮವೂ ಇಲ್ಲದ್ದು. 4. ಅತೀಂದ್ರಿಯವಾದದ್ದು.

5. ಜಾತಿ, ದ್ರವ್ಯ, ಗುಣ, ಕ್ರಿಯೆ–ಮುಂತಾದ ಯಾವದೊಂದೂ ಇಲ್ಲದ.

6. ಅನಾತ್ಮದ ಸೋಂಕೂ ಇಲ್ಲದ.

## ಉಪದೇಶದ ಉಪಸಂಹಾರ

ನಿರಸ್ತರಾಗಾ ನಿರಪಾಸ್ತಭೋಗಾಃ[1]
ಶಾನ್ತಾಃ ಸುದಾನ್ತಾ ಯತಯೋ ಮಹಾನ್ತಃ |
ವಿಜ್ಞಾಯ ತತ್ತ್ವಂ ಪರಮೇತದನ್ತೇ
ಪ್ರಾಪ್ತಾಃ ಪರಾಂ ನಿರ್ವೃತಿಮಾತ್ಮಯೋಗಾತ್ ||೪೭೮||

೪೭೮. ರಾಗವನ್ನು ಬಿಟ್ಟು ಕಳೆದು, ಭೋಗವನ್ನು ದೂರವಿಟ್ಟು ಶಾಂತರಾಗಿ, ಅತ್ಯಂತದಾಂತರಾದ ಮಹಾಯತಿಗಳು ಈ ಪರಮತತ್ತ್ವವನ್ನು ಅರಿತುಕೊಂಡು ಕೊನೆಯಲ್ಲಿ ಆತ್ಮಯೋಗದಿಂದ ಪರಮನಿರ್ವಾಣವನ್ನು ಹೊಂದಿರುತ್ತಾರೆ.[2]

ಭವಾನಪೀದಂ ಪರತತ್ತ್ವಮಾತ್ಮನಃ
ಸ್ವರೂಪಮಾನನ್ದಘನಃ ವಿಚಾರ್ಯ[3] |
ವಿಧೂಯ ಮೋಹಂ ಸ್ವಮನಃ ಪ್ರಕಲ್ಪಿತಂ
ಮುಕ್ತಃ ಕೃತಾರ್ಥೋ ಭವತು ಪ್ರಬುದ್ಧಃ ||೪೭೯||

೪೭೯. ನೀನು ಕೂಡ ಈ ಆತ್ಮನ ಪರತತ್ತ್ವವಾದ ಆನಂದಘನವಾದ ಸ್ವರೂಪವನ್ನು ವಿಚಾರಮಾಡಿ[4] ನಿನ್ನ ಮನಸ್ಸಿನಲ್ಲಿ ಕಲ್ಪಿತವಾಗಿರುವ ಭ್ರಾಂತಿಯನ್ನು ಕೊಡವಿಕೊಂಡು ಜ್ಞಾನಿಯಾಗಿ ಮುಕ್ತನಾಗಿ ಕೃತಕೃತ್ಯನಾಗು.

ಸಮಾಧಿನಾ ಸಾಧು ವಿನಿಶ್ಚಲಾತ್ಮನಾ
ಪಶ್ಯಾತ್ಮತತ್ತ್ವಂ ಸ್ಫುಟಬೋಧಚಕ್ಷುಷಾ |
ನಿಃಸಂಶಯಂ ಸಮ್ಯಗವೇಕ್ಷಿತಶ್ಚೇ-
ಚ್ಛ್ರುತಃ ಪದಾರ್ಥೋ ನ ಪುನರ್ವಿಕಲ್ಪ್ಯತೇ ||೪೮೦||

೪೮೦. ಸಮಾಧಿಯಿಂದ ಚೆನ್ನಾಗಿ ವಿನಿಶ್ಚಲವಾದ ಅಂತಃಕರಣದಿಂದ ಸ್ಫುಟವಾದ ಜ್ಞಾನದ ಕಣ್ಣಿನಿಂದ ಆತ್ಮತತ್ತ್ವವನ್ನು ನೋಡು. ಸಂಶಯವು

1. 'ವಿನಿರಸ್ತಭೋಗಾಃ' ಪಾ||

2. ಮುಂ. ೩-೨-೬. ಇಲ್ಲಿ ವಿದೇಹಮುಕ್ತಿಯನ್ನು ಸೂಚಿಸಿದೆಯೆ?-ಎಂಬುದು ನಿಶ್ಚಯವಾಗಿ ಗೊತ್ತಾಗುವಂತಿಲ್ಲ. ಶಂ. ಗೀ. ಯಲ್ಲಿ ವಿದೇಹಮುಕ್ತಿಗೆ ಬಹಳ ಬೆಲೆ.

3. 'ವಿಚಾರ್ಯ' ಪಾ||

4. 'ವಿಚಾರ್ಯ' ಎಂಬ ಪಾಠಕ್ಕೆ 'ಸಾಕ್ಷಾತ್ಕಾರಮಾಡಿಕೊಂಡು' ಎಂದರ್ಥ.

ಉಳಿಯುದಂತೆ ಚೆನ್ನಾಗಿ ನಿಶ್ಚೈಸಿದರೆ ಶ್ರವಣಮಾಡಿದ ಪದಾರ್ಥದಲ್ಲಿ ಮತ್ತೆ ಯಾವ ವಿಕಲ್ಪವೂ ಆಗುವದಿಲ್ಲ.[1]

ಸ್ವಸ್ಯಾವಿದ್ಯಾಬನ್ಧಸಂಬನ್ಧಮೋಕ್ಷಾತ್
ಸತ್ಯಜ್ಞಾನಾನನ್ದರೂಪಾತ್ಮಲಬ್ಧೌ ।
ಶಾಸ್ತ್ರಂ ಯುಕ್ತಿರ್ದೇಶಿಕೋಕ್ತಿಃ ಪ್ರಮಾಣಂ
ಚಾನ್ತಃ ಸಿದ್ಧಾ ಸ್ವಾನುಭೂತಿಃ ಪ್ರಮಾಣಮ್ ॥ ೪೭೧ ॥

೪೭೧. ತನಗೆ ಅವಿದ್ಯೆಯ ಬಂಧದ ಸಂಬಂಧದಿಂದ ಬಿಡುಗಡೆಯಾಗಿ ಸತ್ಯಜ್ಞಾನಾನಂದರೂಪನಾದ ಆತ್ಮನನ್ನು ಪಡೆದುಕೊಂಡದ್ದಕ್ಕೆ ಶಾಸ್ತ್ರವೂ ಯುಕ್ತಿಯೂ ಆಚಾರ್ಯನ ಉಕ್ತಿಯೂ ಪ್ರಮಾಣವು; ಒಳಗೆ ಉಂಟಾದ ತನ್ನ ಅನುಭವವೂ ಪ್ರಮಾಣವು.[2]

ಬನ್ಧೋ ಮೋಕ್ಷಶ್ಚ ತೃಪ್ತಿಶ್ಚ ಚಿನ್ತಾರೋಗ್ಯಕ್ಷುಧಾದಯಃ ।
ಸ್ವೇನೈವ ವೇದ್ಯಾ ಯಜ್ಜ್ಞಾನಂ ಪರೇಷಾಮಾನುಮಾನಿಕಮ್ ॥೪೭೨॥

೪೭೨. ಬಂಧ, ಮೋಕ್ಷ, ತೃಪ್ತಿ, ಚಿಂತೆ, ಆರೋಗ್ಯ, ಹಸಿವು-ಮುಂತಾದವು ತನಗೇ ತಿಳಿಯತಕ್ಕವು.[3] ಅವುಗಳ ಅರಿವು ತನಗಿದೆಯೆಂಬುದು ಬೇರೆಯವರಿಗೆ ಅನುಮಾನದಿಂದ ತಿಳಿಯಬರತಕ್ಕದ್ದಾಗಿರುತ್ತದೆ.

ತಟಸ್ಥಿತಾ ಬೋಧಯನ್ತಿ ಗುರವಃ ಶ್ರುತಯೋ ಯಥಾ ।
ಪ್ರಜ್ಞಯೈವ ತರೇದ್ವಿದ್ವಾನೀಶ್ವರಾನುಗೃಹೀತಯಾ ॥ ೪೭೩ ॥

೪೭೩. ಗುರುಗಳು ಶ್ರುತಿಗಳಂತೆಯೇ ಹೊರಚ್ಚಾಗಿದ್ದುಕೊಂಡೇ ಉಪದೇಶಿಸುತ್ತಾರೆ. ಜಾಣನಾದವನು ಈಶ್ವರನ ಅನುಗ್ರಹದಿಂದುಂಟಾದ ತನ್ನ ಪ್ರಜ್ಞೆಯಿಂದಲೇ ಸಂಸಾರವನ್ನು ದಾಟಬೇಕು.

ಸ್ವಾನುಭೂತ್ಯಾ ಸ್ವಯಂ ಜ್ಞಾತ್ವಾ ಸ್ವಮಾತ್ಮಾನಮಖಣ್ಡಿತಮ್ ।
ಸಂಸಿದ್ಧಃ ಸುಸುಖಂ[4] ತಿಷ್ಠೇನ್ನಿರ್ವಿಕಲ್ಪಾತ್ಮನಾತ್ಮನಿ ॥ ೪೭೪ ॥

---

1. ಶ್ರವಣಾದಿಜನ್ಯಜ್ಞಾನದಲ್ಲಿ ಮತ್ತೆ ಯಾವ ವಿಕಲ್ಪವೂ ಆಗದಿರುವದಕ್ಕ ಸಮಾಧಿಯು ಆವಶ್ಯಕವೆಂಬುದು ಗ್ರಂಥಕಾರರ ಮತವು.

2. ಯೋ. ವಾ. ಉ. ೩-೩೭.

3. ೬ರಿಂದ ೫ ನೆಯ ರೆಗಿನ ಶ್ಲೋಕಗಳನ್ನು ನೋಡಿರಿ. ಶಂ. ಗೀ. ೨-೧೩, ೧೦-೬೨.

4. ಸನ್ ಸುಖಂ ಪಾ॥

೪೭೮. ತನ್ನ ಅಖಂಡಾತ್ಮನನ್ನು ತನ್ನ ಅನುಭವದಿಂದ ತಾನೇ ಅರಿತು ಕೊಂಡು ಸಂಸಿದ್ಧನಾಗಿ ನಿರ್ವಿಕಲ್ಪರೂಪದಿಂದ ತನ್ನಲ್ಲಿಯೇ ತಾನು ಸುಖದಿಂದ ನಿಂತುಕೊಳ್ಳಬೇಕು.

ವೇದಾನ್ತಸಿದ್ಧಾನ್ತನಿರುಕ್ತಿರೇಷಾ
ಬ್ರಹ್ಮೈವ ಜೀವಃ ಸಕಲಂ ಜಗಚ್ಚ
ಅಖಣ್ಡರೂಪಸ್ಥಿತಿರೇವ ಮೋಕ್ಷೋ
ಬ್ರಹ್ಮಾದ್ವಿತೀಯಂ[1] ಶ್ರುತಯಃ ಪ್ರಮಾಣಮ್ ॥ ೪೭೯ ॥

೪೭೯. ವೇದಾಂತಸಿದ್ಧಾಂತದ ಕಟ್ಟಕಡೆಯ ಮಾತಿದು : ಜೀವನೂ ಸಕಲಜಗತ್ತೂ ಬ್ರಹ್ಮವೇ ; ಅಖಂಡರೂಪದಿಂದ ನಿಲ್ಲುವದೇ ಮೋಕ್ಷವು. ಬ್ರಹ್ಮವು ಅದ್ವಿತೀಯವು. ಇದಕ್ಕೆ ಶ್ರುತಿಗಳೇ ಪ್ರಮಾಣವು.

1. 'ಬ್ರಹ್ಮಾದ್ವಿತೀಯಃ' ಎಂಬುದಕ್ಕಿಂತ ಇದೇ ಮೇಲು.

# ೧೦. ಪ್ರಕರಣದ ಉಪಸಂಹಾರ

## ಕೃತಾರ್ಥನಾದ ಶಿಷ್ಯನು ತನ್ನ ಅನುಭವವನ್ನು ತಿಳಿಸುವದು

ಇತಿ ಗುರುವಚನಾಚ್ಛ್ರುತಿಪ್ರಮಾಣಾತ್
ಪರಮವಗಮ್ಯ ಸತತ್ತ್ವಮಾತ್ಮಯುಕ್ತ್ಯಾ ।
ಪ್ರಶಮಿತಕರಣಃ ಸಮಾಹಿತಾತ್ಮಾ
ಕ್ವಚಿದಚಲಾಕೃತಿರಾತ್ಮನಿಷ್ಠಿತೋಽಭೂತ್ ॥೪೭೬॥

೪೭೬. ಹೀಗೆ ಗುರುವಚನದಿಂದಲೂ ಶ್ರುತಿಪ್ರಮಾಣದಿಂದಲೂ ತನ್ನ ಯುಕ್ತಿಯಿಂದಲೂ ಪರತತ್ತ್ವವನ್ನು ಅರಿತುಕೊಂಡು[1] ಇಂದ್ರಿಯಗಳನ್ನೆಲ್ಲ ಶಾಂತಗೊಳಿಸಿಕೊಂಡು ಅಂತಃಕರಣವನ್ನು ಸಮಾಧಿಯಲ್ಲಿಟ್ಟುಕೊಂಡು ಸ್ವಲ್ಪ ಹೊತ್ತು ಅಲುಗಾಡದ ಸ್ವರೂಪವುಳ್ಳವನಾಗಿ ಆತ್ಮನಿಷ್ಠೆಯಲ್ಲಿರುತ್ತಿದ್ದನು.

ಕಞ್ಚಿತ್ ಕಾಲಂ ಸಮಾಧಾಯ ಪರೇ ಬ್ರಹ್ಮಣಿ ಮಾನಸಮ್ ।
ವ್ಯುತ್ಥಾಯ ಪರಮಾನನ್ದಾದಿದಂ ವಚನಮಬ್ರವೀತ್ ॥೪೭೭॥

೪೭೭. ಪರಬ್ರಹ್ಮದಲ್ಲಿ ಮನಸ್ಸನ್ನು ಸ್ವಲ್ಪಹೊತ್ತು ನಿಲ್ಲಿಸಿಕೊಂಡಿದ್ದು ಆ ಪರಮಾನಂದದಿಂದ ಮೇಲಕ್ಕೆದ್ದು ಈ ಮಾತನ್ನಾಡಿದನು :

ಬುದ್ಧಿರ್ವಿನಷ್ಟಾ ಗಲಿತಾ ಪ್ರವೃತ್ತಿ-
ರ್ಬ್ರಹ್ಮಾತ್ಮನೋರೇಕತಯಾಧಿಗತ್ಯಾ ।
ಇದಂ ನ ಜಾನೇಽಪ್ಯನಿದಂ ನ ಜಾನೇ
ಕಿಂ ವಾ ಕಿಯದ್ವಾ ಸುಖಮಸ್ತ್ಯಪಾರಮ್[2] ॥೪೭೮॥

೪೭೮. ಬ್ರಹ್ಮ, ಆತ್ಮ–ಎರಡನ್ನೂ ಒಂದೆಂದು ಅರಿತುಕೊಂಡದ್ದರಿಂದ ಮನಸ್ಸು ನಷ್ಟವಾಯಿತು; ವಿಷಯದಲ್ಲಿ ಮುಂಬರಿಯುವಿಕೆಯು ತಪ್ಪಿಹೋಯಿತು ಇದು ಎಂಬುದನ್ನು ಕಾಣೆನು, ಇದಲ್ಲವೆಂಬುದನ್ನೂ ಕಾಣೆನು. ಅಪಾರವಾದ ಆನಂದವು ಎಂಥದ್ದೋ, ಅದು ಎಷ್ಟು ಇದೆಯೋ ತಿಳಿಯೆನು.

1. ಗುರು, ಶಾಸ್ತ್ರ, ತನ್ನ ಅನುಭವ– ಈ ಮೂರೂ ಮೇಳವಾದಮೇಲೆಯೇ ಸಾಕ್ಷಾತ್ಕಾರವಾಗುವದೆಂದು ಭಾವ.

2. 'ಸುಖಮಸ್ತಿ ಪಾರವರ್ಜಿತಮ್' ಎಂಬುದಕ್ಕಿಂತ ಈ ಪಾಠವೇ ಮೇಲು.

ವಾಚಾ ವಕ್ತುಮಶಕ್ಯಮೇವ ಮನಸಾ ಮನ್ತುಂ ನ ವಾ ಶಕ್ಯತೇ
ಸ್ವಾನನ್ದಾಮೃತಪೂರಪೂರಿತಪರಬ್ರಹ್ಮಾಮ್ಬುಧೇರ್ವೈಭವಮ್ ।
ಅಮ್ಭೋರಾಶಿವಿಶೀರ್ಣವಾರ್ಷಿಕಶಿಲಾಭಾವಂ ಭಜನ್ಮೇ ಮನೋ
ಯಸ್ಯಾಂಶಾಂಶಲವೇ ವಿಲೀನಮಧುನಾಽಽನನ್ದಾತ್ಮನಾ ನಿರ್ವೃತಮ್ ॥

೪೭೯. ಸಮುದ್ರದಲ್ಲಿ ಸಿಡಿದುಬಿದ್ದ ಮಳೆಗಾಲದ ಆಲಿಕಲ್ಲಿನಂತಾದ ನನ್ನ ಮನಸ್ಸು ಯಾವದರ ಅಂಶದ ಅಂಶದ ಸ್ವಲ್ಪಭಾಗದಲ್ಲಿ ಕರಗಿ ಈಗ ಆನಂದರೂಪದಿಂದ ಸುಖಹೊಂದಿತೋ ಆ ಆತ್ಮಾನಂದಾಮೃತದ ಪ್ರವಾಹದಿಂದ ತುಂಬಿರುವ ಪರಬ್ರಹ್ಮಸಾಗರದ ವೈಭವವನ್ನು ಮಾತಿನಿಂದ ಹೇಳುವದಕ್ಕೆ ಆಗುವದೇ ಇಲ್ಲ, ಮನಸ್ಸಿನಿಂದ ಆಲೋಚಿಸುವದಕ್ಕೂ ಆಗುವಂತಿಲ್ಲ.

ಕ್ವ ಗತಂ ಕೇನ ವಾ ನೀತಂ ಕುತ್ರ ಲೀನಮಿದಂ ಜಗತ್ ।
ಅಧುನೈವ ಮಯಾ ದೃಷ್ಟಂ ನಾಸ್ತಿ ಕಿಂ ಮಹದದ್ಭುತಮ್ ॥೪೮೦॥

೪೮೦. ಈ ಜಗತ್ತು ಎಲ್ಲಿ ಹೋಯಿತೋ, ಯಾರು ಅದನ್ನೊಯ್ದರೋ, ಎಲ್ಲಿ ಅಡಗಿಕೊಂಡಿತೋ (ತಿಳಿಯೆನು). ಈಗತಾನೆ ನಾನು (ಅದನ್ನು) ಕಂಡಿದ್ದೆನು. (ಈಗ) ಇಲ್ಲವಲ್ಲ! ಎಂಥ ಮಹಾಶ್ಚರ್ಯ!

ಕಿಂ ಹೇಯಂ ಕಿಮುಪಾದೇಯಂ ಕಿಮನ್ಯತ್ ಕಿಂ ವಿಲಕ್ಷಣಮ್ ।
ಅಖಣ್ಡಾನನ್ದಪೀಯೂಷಪೂರ್ಣೇ ಬ್ರಹ್ಮಮಹಾರ್ಣವೇ ॥೪೮೧॥

೪೮೧. ಅಖಂಡಾನಂದಾಮೃತವು ತುಂಬಿರುವ ಬ್ರಹ್ಮವೆಂಬ ಮಹಾಸಾಗರದಲ್ಲಿ ಬಿಡತಕ್ಕದ್ದು ಯಾವದು, ತೆಗೆದುಕೊಳ್ಳತಕ್ಕದ್ದು ಯಾವದು? ಅದಕ್ಕಿಂತ ಬೇರೆ ಯಾವದು? ಬೇರೆಯ ಜಾತಿಯದು ಯಾವದು?

ನ ಕಿಞ್ಚಿದತ್ರ ಪಶ್ಯಾಮಿ ನ ಶೃಣೋಮಿ ನ ವೇದ್ಮ್ಯಹಮ್ ।
ಸ್ವಾತ್ಮನೈವ ಸದಾನನ್ದರೂಪೇಣಾಸ್ಮಿ ವಿಲಕ್ಷಣಃ ॥೪೮೨॥

೪೮೨. ಇಲ್ಲಿ ನನಗೆ ಏನೊಂದೂ ಕಾಣಿಸುತ್ತಿಲ್ಲ, ಏನೊಂದೂ ಕೇಳಿಸುತ್ತಿಲ್ಲ, ಏನೊಂದೂ ತಿಳಿಯಬರುತ್ತಿಲ್ಲ.[1] ಸದಾನಂದರೂಪವಾದ ಆತ್ಮರೂಪದಿಂದಲೇ ವಿಲಕ್ಷಣನಾಗಿಬಿಟ್ಟಿರುವೆನಲ್ಲ!

ನಮೋ ನಮಸ್ತೇ ಗುರವೇ ಮಹಾತ್ಮನೇ
ವಿಮುಕ್ತಸಙ್ಗಾಯ ಸದುತ್ತಮಾಯ ।
ನಿತ್ಯಾದ್ವಯಾನನ್ದರಸಸ್ವರೂಪಿಣೇ
ಭೂಮ್ನೇ ಸದಾಽಪಾರದಯಾಮ್ಬುಧಾಮ್ನೇ ॥೪೮೩॥

---

೧. ಛಾಂದೋಗ್ಯದಲ್ಲಿರುವ ಭೂಮಲಕ್ಷಣದ ಸೂಚನೆಯಿದು.

೪೮೩. ಮಹಾತ್ಮನೂ ಯಾವುದರ ಸಂಗವೂ ಇಲ್ಲದವನೂ ಸಾಕ್ಷಾತ್ತಾಗಿ ನೂ ಆಗಿರುವ ನಿತ್ಯಾದ್ವಯಾನಂದರಸದ ಸ್ವರೂಪನೂ ಭೂಮವಾದ ಯಾವಾಗಲೂ ಅಪಾರದಯಾಸಮುದ್ರನೂ ಆಗಿರುವ ಗುರುವೆ, ನಿನಗೆ ನಮಸ್ಕಾರ, ನಮಸ್ಕಾರ !

ಯತ್ಕಟಾಕ್ಷಶಶಿಸಾನ್ದ್ರಚನ್ದ್ರಿಕಾ
 ಪಾತಧೂತಭವತಾಪಜಶ್ರಮಃ ।
ಪ್ರಾಪ್ತವಾನಹಮಖಣ್ಡವೈಭವಾ-
 ನನ್ದಮಾತ್ಮಪದಮಕ್ಷಯಂ ಕ್ಷಣಾತ್ ॥೪೮೪॥

೪೮೪. ಯಾವನ ಕಡೆಗಣ್ಣಿನ ನೋಟದ ಚಂದ್ರನ ಬೆಳದಿಂಗಳು ಬಿದ್ದ ಮಾತ್ರದಿಂದ ಸಂಸಾರತಾಪದ ಶ್ರಮವೆಲ್ಲವೂ ಹಾರಿಹೋಗಿ ಕ್ಷಣಮಾತ್ರದಲ್ಲಿ ನಾನು ಅಖಂಡವೈಭವದಿಂದೊಡಗೂಡಿದ ಆನಂದದ ಅಕ್ಷಯವಾದ ಆತ್ಮಪದವನ್ನು ಹೊಂದಿದೆನೋ (ಅಂಥ ಗುರುವಿಗೆ ನಮಸ್ಕಾರ) !

ಧನ್ಯೋಽಹಂ ಕೃತಕೃತ್ಯೋಽಹಂ ವಿಮುಕ್ತೋಽಹಂ ಭವಗ್ರಹಾತ್ ।
ನಿತ್ಯಾನನ್ದಸ್ವರೂಪೋಽಹಂ ಪೂರ್ಣೋಽಹಂ ತ್ವದನುಗ್ರಹಾತ್[1] ॥೪೮೫॥

೪೮೫. ನಿಮ್ಮ ಅನುಗ್ರಹದಿಂದ ನಾನು ಧನ್ಯನಾದೆನು, ನಾನು ಕೃತಕೃತ್ಯನಾದೆನು, ನಾನು ಸಂಸಾರಬಂಧದಿಂದ ಬಿಡುಗಡೆಹೊಂದಿದೆನು, ನಾನು ನಿತ್ಯಾನಂದಸ್ವರೂಪನಾದೆನು, ನಾನು ಪೂರ್ಣನಾದೆನು.

ಅಸಙ್ಗೋಽಹಮನಙ್ಗೋಽಹಮಲಿಙ್ಗೋಽಹಮಭಙ್ಗುರಃ ।
ಪ್ರಶಾನ್ತೋಽಹಮನನ್ತೋಽಹಮಮಲೋಽಹಂ ಚಿರನ್ತನಃ ॥೪೮೬॥

೪೮೬. ನಾನು ಸಂಗರಹಿತನು, ನಾನು ದೇಹರಹಿತನು, ನಾನು ಲಿಂಗಶರೀರರಹಿತನು, ನಾಶವಿಲ್ಲದವನು, ನಾನು ಅತ್ಯಂತಶಾಂತನು, ನಾನು ಅಂತರಹಿತನು, ನಾನು ನಿರ್ಮಲನು, ಅನಾದಿಕಾಲದಿಂದಿರುವವನು.

ಅಕರ್ತಾಽಹಮಭೋಕ್ತಾಽಹಮವಿಕಾರೋಽಹಮಕ್ರಿಯಃ ।
ಶುದ್ಧಬೋಧಸ್ವರೂಪೋಽಹಂ ಕೇವಲೋಽಹಂ ಸದಾಶಿವಃ ॥೪೮೭॥

೪೮೭. ನಾನು ಕರ್ತೃವಲ್ಲ, ನಾನು ಭೋಕ್ತೃವಲ್ಲ, ನಾನು ವಿಕಾರರಹಿತನು, ಕರ್ಮರಹಿತನು,[2] ನಾನು ಶುದ್ಧಚೈತನ್ಯಸ್ವರೂಪನು, ನಾನು ಅದ್ವಿತೀಯನಾದ ಸದಾಶಿವನು.

---

1. 'ತದನುಗ್ರಹಾತ್' ಎಂಬ ಪಾಠಕ್ಕಿಂತ ಇದೇ ಮೇಲು.

2. ಈ ಶ್ಲೋಕಾರ್ಥವನ್ನು ಶಂ. ಗೀ. ೯-೩೦ರಲ್ಲಿ ಉದಾಹರಿಸಿರುವಂತಿದೆ. ಇದನ್ನು ಯಾವುದಾದರೊಂದು ಗ್ರಂಥದಿಂದ ಉದಾಹರಿಸಿದೆಯೋ ಅಥವಾ ಇದು ಗ್ರಂಥಕರ್ತರದೇಯೋ ತಿಳಿಯದು.

ದ್ರಷ್ಟುಃ ಶ್ರೋತುರ್ವಕ್ತುಃ ಕರ್ತುರ್ಭೋಕ್ತುರ್ವಿಭಿನ್ನ ಏವಾಹಮ್ ।
ನಿತ್ಯನಿರನ್ತರನಿಷ್ಕ್ರಿಯನಿಸ್ಸೀಮಾಸಙ್ಗಪೂರ್ಣಬೋಧಾತ್ಮಾ ॥೪೮೮॥

೪೮೮. ನೋಡುವವನೂ ಕೇಳುವವನೂ ಮಾತನಾಡುವವನೂ ಕರ್ತೃವೂ ಭೋಕ್ತೃವೂ (ಆಗಿರುವ ಜೀವನಿ)ಗಿಂತ ನಾನು ಬೇರೆಯೇ. ನಿತ್ಯನೂ ಕಡಿವಡಿಯದವನೂ ಕರ್ಮರಹಿತನೂ ಎಲ್ಲೆ ಕಟ್ಟಿಲ್ಲದವನೂ ಸಂಗರಹಿತನೂ ಪೂರ್ಣಜ್ಞಾನಸ್ವರೂಪನೂ ಆಗಿರುವೆನು.

ನಾಹಮಿದಂ ನಾಹಮದೋಽಪ್ಯುಭಯೋರವಭಾಸಕಂ ಪರಂ ಶುದ್ಧಮ್ ।
ಬಾಹ್ಯಾಭ್ಯನ್ತರಶೂನ್ಯಂ ಪೂರ್ಣಂ ಬ್ರಹ್ಮಾದ್ವಿತೀಯಮೇವಾಹಮ್ ॥೪೮೯॥

೪೮೯. ನಾನು ಇದಲ್ಲ, ನಾನು ಅದಲ್ಲ;[1] ಇವೆರಡನ್ನೂ ಬೆಳಗುವ ಎಲ್ಲಕ್ಕೂ ಹೆಚ್ಚಿನ ಶುದ್ಧವಾದ, ಒಳಗುಹೊರಗಿಲ್ಲದ, ಪೂರ್ಣವಾದ, ಅದ್ವಿತೀಯವಾದ ಬ್ರಹ್ಮವೇ ನಾನು

ನಿರುಪಮಮನಾದಿತತ್ತ್ವಂ ತ್ವಮಹಮಿದಮದ ಇತಿ ಕಲ್ಪನಾದೂರಮ್ ।
ನಿತ್ಯಾನನ್ದೈಕರಸಂ ಸತ್ಯಂ ಬ್ರಹ್ಮಾದ್ವಿತೀಯಮೇವಾಹಮ್ ॥೪೯೦॥

೪೯೦. ಯಾವ ಉಪಮಾನವೂ ಇಲ್ಲದ, 'ನೀನು, ನಾನು, ಇದು, ಅದು' -ಎಂಬ ಕಲ್ಪನೆಗೆ ದೂರವಾಗಿರುವ[2], ನಿತ್ಯಾನಂದೈಕರಸವಾದ ಸತ್ಯವಾದ ತನಗೆರಡನೆಯದಿಲ್ಲದ ಬ್ರಹ್ಮವೇ ನಾನು.

ನಾರಾಯಣೋಽಹಂ ನರಕಾನ್ತಕೋಽಹಂ
ಪುರಾನ್ತಕೋಽಹಂ ಪುರುಷೋಽಹಮೀಶಃ ।
ಅಖಣ್ಡಬೋಧೋಽಹಮಶೇಷಸಾಕ್ಷೀ
ನಿರೀಶ್ವರೋಽಹಂ ನಿರಹಂ ಚ ನಿರ್ಮಮಃ ॥೪೯೧॥

೪೯೧. ನಾರಾಯಣನು ನಾನು, ನರಕಾಂತಕನು ನಾನು, ತ್ರಿಪುರಗಳನ್ನು ಸುಟ್ಟ (ಶಿವನು) ನಾನೇ.[3] ನಾನು ಪುರುಷನು, ಈಶ್ವರನು. ನಾನು ಅಖಂಡ

1. ಅದು, ಇದು—ಎಂದರೆ ಕಾಲದೇಶಗಳಲ್ಲಿ ದೂರ, ಹತ್ತಿರದಲ್ಲಿರುವ ವಸ್ತುಗಳು; ಅಥವಾ ಪರೋಕ್ಷ ಮತ್ತು ಪ್ರತ್ಯಕ್ಷವಸ್ತುಗಳು. ಆದ್ದರಿಂದ ನಾನು ಇದಲ್ಲ, ಅದಲ್ಲ—ಎಂದದ್ದರಿಂದ ಕಾಲದೇಶಗಳನ್ನು ಮೀರಿರುವ ಮತ್ತು ವ್ಯಾಕೃತಾವ್ಯಾಕೃತಗಳಿಗಿಂತ —ಸದಸತ್ತುಗಳಿಗಿಂತ—ವಿಲಕ್ಷಣನು ಎಂದಂತೆ ಆಯಿತು.

2. ೩೩೦ನೆಯ ಪದ್ಯವನ್ನು ನೋಡಿ.

3. ಸರ್ವಾಂತರ್ಯಾಮಿಯೂ ನಾನೇ ಎಂದರ್ಥ. ಭಂ. ಗೀ. ೬—೨೯, ೭—೨೦; [illegible]

ಚೈತನ್ಯಸ್ವರೂಪನು, ಎಲ್ಲಕ್ಕೂ ಸಾಕ್ಷಿಯು. ನನಗೆ ಮತ್ತೊಬ್ಬ ಒಡೆಯನಿಲ್ಲ. ನಾನೆಂಬುದು ಇಲ್ಲದವನು, ನನ್ನದೆಂಬುದು ಇಲ್ಲದವನು.

ಸರ್ವೇಷು ಭೂತೇಷ್ವಹಮೇವ ಸಂಸ್ಥಿತೋ
ಜ್ಞಾನಾತ್ಮನಾನ್ತರ್ಬಹಿರಾಶ್ರಯಃ ಸನ್ ।
ಭೋಕ್ತಾ ಚ ಭೋಗ್ಯಂ ಸ್ವಯಮೇವ ಸರ್ವಂ
ಯದ್ಯತ್ಪೃಥಗ್ದೃಷ್ಟಮಿದನ್ತಯಾ ಪುರಾ ॥ ೪೯೨ ॥

೪೯೨. ಚೈತನ್ಯರೂಪದಿಂದ ಒಳಗಿನಹೊರಗಿನದೆಲ್ಲದಕ್ಕೂ ಆಧಾರನಾಗಿ ಸರ್ವಭೂತಗಳಲ್ಲಿಯೂ ಇರುವವನು ನಾನೇ. ಭೋಕ್ತೃವೂ ನಾನೇ, ಭೋಗ್ಯವೂ ನಾನೇ; ಯಾವಯಾವದು ಇದು ಎಂದು ಬೇರೆಬೇರೆಯಾಗಿ ಮೊದಲು ಕಾಣುತ್ತಿತ್ತೋ ಅದೆಲ್ಲವೂ ನಾನೇ.

ಮಯ್ಯಖಣ್ಡಸುಖಾಮ್ಭೋಧೌ ಬಹುಧಾ ವಿಶ್ವವೀಚಯಃ ।
ಉತ್ಪದ್ಯನ್ತೇ ವಿಲೀಯನ್ತೇ ಮಾಯಾಮಾರುತವಿಭ್ರಮಾತ್ ॥ ೪೯೩ ॥

೪೯೩. ಅಖಂಡಾನಂದದ ಕಡಲಿನಂತಿರುವ ನನ್ನಲ್ಲಿ ಬಗೆಬಗೆಯ ವಿಶ್ವಗಳ ರೂಪದ ಅಲೆಗಳು ಮಾಯೆಯೆಂಬ ಗಾಳಿಯ ಸುರಳಿಯಿಂದ ಹುಟ್ಟುತ್ತವೆ, ಅಡಗುತ್ತವೆ.[1]

ಸ್ಥೂಲಾದಿಭಾವಾ ಮಯಿ ಕಲ್ಪಿತಾ ಭ್ರಮಾ-
ದಾರೋಪಿತಾ ತು[2] ಸ್ಫುರಣೇನ ಲೋಕೈಃ ।
ಕಾಲೇ ಯಥಾ ಕಲ್ಪಿತವತ್ಸರಾಯ
ನರ್ತ್ವಾದಯೋ ನಿಷ್ಕಲನಿರ್ವಿಕಲ್ಪೇ ॥ ೪೯೪ ॥

೪೯೪. ಕಾಲದಲ್ಲಿ ಕಲ್ಪ, ವರ್ಷ, ಆಯನ, ಋತು- ಮುಂತಾದವುಗಳು ಹೇಗೆ (ಕಲ್ಪಿತವಾ)ಗಿವೆಯೋ ಹಾಗೆ ನಿಷ್ಕಲನೂ ನಿರ್ವಿಕಲ್ಪನೂ ಆದ (ನನ್ನಲ್ಲಿ) ಸ್ಥೂಲದೇಹವೇ ಮುಂತಾದ ಭಾವಗಳು ಭ್ರಾಂತಿಯಿಂದ ತೋರುತ್ತಿರುವದರಿಂದ ಜನರು (ಅವುಗಳನ್ನು) ನನ್ನಲ್ಲಿ ಕಲ್ಪಿಸುತ್ತಿರುತ್ತಾರೆ.

ಆರೋಪಿತಂ ನಾಶ್ರಯದೂಷಕಂ ಭವೇತ್
ಕದಾಽಪಿ ಮೂಢೈರ್ಮತಿದೋಷದೂಷಿತೈಃ ।
ನಾರ್ದ್ರೀಕರೋತ್ಯೂಷರಭೂಮಿಭಾಗಂ
ಮರೀಚಿಕಾವಾರಿಮಹಾಪ್ರವಾಹಃ ॥ ೪೯೫ ॥

---

1. ಅಜ್ಞಾನದಿಂದ ತೋರಿ ಜ್ಞಾನದಿಂದ ನಾಶವಾಗುತ್ತವೆ.

2. 'ನು' ಎಂಬುದಕ್ಕಿಂತ ಈ ಪಾಠವು ಮೇಲು.

೪೯೫. ಬುದ್ಧಿಯು ದೋಷದಿಂದ ಕಲಂಕಿತರಾಗಿರುವ ಮೂಢರಿಂದ ಆರೋಪಿತವಾದದ್ದು, ಆಶ್ರಯ(ವಾದ ವಸ್ತುವಿಗೆ)[1] ಎಂದಿಗೂ ಯಾವ ದೋಷವನ್ನೂ ಉಂಟುಮಾಡುವದಿಲ್ಲ. (ಹೇಗೆಂದರೆ) ಬಿಸಿಲುಕುದುರೆಯ ನೀರಿನ ದೊಡ್ಡ ಹೊಳೆಯು ಚೌಳುನೆಲವನ್ನೇನೂ ತೋಯಿಸುವದಿಲ್ಲ.

ಆಕಾಶವಲ್ಲೇಪವಿದೂರಗೋಽಹ-
ಮಾದಿತ್ಯವದ್ ಭಾಸ್ಯವಿಲಕ್ಷಣೋಽಹಮ್ ।
ಅಹಾರ್ಯವನ್ನಿತ್ಯವಿನಿಶ್ಚಲೋಽಹ-
ಮಂಭೋಧಿವತ್ ಪಾರವಿವರ್ಜಿತೋಽಹಮ್ ॥ ೪೯೬ ॥

೪೯೬. ನಾನು ಆಕಾಶದಂತೆ (ಯಾವದೊಂದರ) ಅಂಟಿಗೂ ದೂರವಾಗಿರುವೆನು. ನಾನು ಸೂರ್ಯನಂತೆ ಬೆಳಗಲ್ಪಡುವ ವಸ್ತುಗಳಿಗಿಂತ ಅತ್ಯಂತ ಬೇರೆಯು ತೆರೆದವನಾಗಿರುತ್ತೇನೆ. ನಾನು ಬೆಟ್ಟದಂತೆ ಎಂದೆಂದಿಗೂ ಅಲುಗಾಡದವನಾಗಿರುತ್ತೇನೆ. ನಾನು ಕಡಲಿನಂತೆ ಪಾರರಹಿತನಾಗಿರುತ್ತೇನೆ.

ನ ಮೇ ದೇಹೇನ ಸಂಬನ್ಧೋ ಮೇಘೇನೇವ ವಿಹಾಯಸಃ ।
ಅತಃ ಕುತೋ ಮೇ ತದ್ಧರ್ಮಾ ಜಾಗ್ರತ್ಸ್ವಪ್ನಸುಷುಪ್ತಯಃ ॥ ೪೯೭ ॥

೪೯೭. ಆಕಾಶಕ್ಕೆ ಹೇಗೆ ಮೋಡದ ಸಂಬಂಧವಿರುವದಿಲ್ಲವೋ ಹಾಗೆ ನನಗೆ ದೇಹದ ಸಂಬಂಧವಿರುವದಿಲ್ಲ. ಆದ್ದರಿಂದ ಅದರ ಧರ್ಮಗಳಾದ[2] ಜಾಗ್ರತ್ಸ್ವಪ್ನಸುಷುಪ್ತಿಗಳು ನನಗೆ ಎಲ್ಲಿಂದ ಬಂದಾವು ?

ಉಪಾಧಿರಾಯಾತಿ ಸ ಏವ ಗಚ್ಛತಿ
ಸ ಏವ ಕರ್ಮಾಣಿ ಕರೋತಿ ಭುಙ್ಕ್ತೇ ।
ಸ ಏವ ಜೀರ್ಯನ್ ಮ್ರಿಯತೇ ಸದಾಹಂ
ಕುಲಾದ್ರಿವನ್ನಿಶ್ಚಲ ಏವ ಸಂಸ್ಥಿತಃ ॥ ೪೯೮ ॥

೪೯೮. ಉಪಾಧಿಯು ಬರುತ್ತದೆ, ಅದೇ ಹೋಗುತ್ತದೆ. ಅದೇ ಕರ್ಮಗಳನ್ನು ಮಾಡುತ್ತದೆ, (ಫಲವನ್ನು) ಭೋಗಿಸುತ್ತದೆ. ಅದೇ ಮುಪ್ಪಡರಿ ಸಾಯುತ್ತದೆ. ನಾನು ಯಾವಾಗಲೂ ಕುಲಾಚಲದಂತೆ[3] ನಿಶ್ಚಲನಾಗಿಯೇ ಇರುವೆನು.

---

1. ಆಶ್ರಯವೆಂದರೆ ಅಧಿಷ್ಠಾನ; ದೃಷ್ಟಾಂತದಲ್ಲಿ ಚೌಳುನೆಲವೇ ಆಶ್ರಯ, ಬಿಸಿಲುಕುದುರೆಯ ನೀರು ಆರೋಪಿತ.

2. ದೇಹತ್ರಯವೆಂಬ ಸಾಮಾನ್ಯಾರ್ಥದಲ್ಲಿ ದೇಹಶಬ್ದವನ್ನು ತೆಗೆದುಕೊಳ್ಳಬೇಕು; ಇಲ್ಲದಿದ್ದರೆ ೬ನೆಯ ಶ್ಲೋಕದಲ್ಲಿ ವಿಜ್ಞಾನಮಯಕೋಶಕ್ಕೇ ಅವಸ್ಥಾತ್ರಯವು ಧರ್ಮವೆಂದು ಹೇಳಿರುವದಕ್ಕೆ ಇದು ವಿರುದ್ಧವಾಗುವದು.

3. ಹಿಮವಂತ, ಪಾರಿಯಾತ್ರ— ಮುಂತಾದ ಏಳು ಕುಲಾಚಲಗಳು ಇವೆ ಎಂದು ಪೌರಾಣಿಕರ ಹೇಳಿಕೆ.

ನ ಮೇ ಪ್ರವೃತ್ತಿರ್ನ ಚ ಮೇ ನಿವೃತ್ತಿಃ
ಸದೈಕರೂಪಸ್ಯ ನಿರಂಶಕಸ್ಯ
ಏಕಾತ್ಮಕೋ ಯೋ ನಿಬಿಡೋ ನಿರನ್ತರೋ
ವ್ಯೋಮೇವ ಪೂರ್ಣಃ ಸ ಕಥಂ ನು ಚೇಷ್ಟತೇ ॥ ೪೯೯ ॥

೪೯೯. ಯಾವಾಗಲೂ ಏಕರೂಪನಾಗಿ ಅಂಶರಹಿತನಾಗಿರುವ ನನಗೆ ಪ್ರವೃತ್ತಿಯಿಲ್ಲ. ನನಗೆ ನಿವೃತ್ತಿಯೂ ಇಲ್ಲ. ಯಾವನು ಒಂದೇ ಸ್ವಭಾವದವನೋ ಎಲ್ಲೆಲ್ಲಿಯೂ ತುಂಬಿ ಕಡಿವಡೆಯದೆ ಆಕಾಶದಂತೆ ಪೂರ್ಣನಾಗಿರುವನೋ ಅವನು ಹೇಗೆತಾನೆ ಕರ್ಮವನ್ನು ಮಾಡಿಯಾನು ?

ಪುಣ್ಯಾನಿ ಪಾಪಾನಿ ನಿರಿನ್ದ್ರಿಯಸ್ಯ
ನಿಶ್ಚೇತಸೋ ನಿರ್ವಿಕೃತೇರ್ನಿರಾಕೃತೇಃ ।
ಕುತೋ ಮಮಾಖಣ್ಡಸುಖಾನುಭೂತೇ-
ರ್ಬ್ರೂತೇ ಹ್ಯನನ್ವಾಗತಮಿತ್ಯಪಿ ಶ್ರುತಿಃ ॥ ೫೦೦ ॥

೫೦೦. ಇಂದ್ರಿಯಗಳಿಲ್ಲದ, ಚಿತ್ತವಿಲ್ಲದ, ವಿಕಾರವಿಲ್ಲದ, ಆಕಾರವಿಲ್ಲದ ಅಖಂಡಾನುಭವಸ್ವರೂಪನಾದ ನನಗೆ ಪುಣ್ಯಗಳಾಗಲಿ ಪಾಪಗಳಾಗಲಿ ಎಲ್ಲಿಂದ ಬಂದಾವು ? "(ಪುಣ್ಯಪಾಪಗಳು) ಹಿಂಬಾಲಿಸದಾತನು" (ಬೃ. ೪-೩-೨೨) ಎಂದಲ್ಲವೆ, ಶ್ರುತಿಯು ಹೇಳುತ್ತಿರುವದು ?

ಛಾಯಯಾ ಸ್ಪೃಷ್ಟಮುಷ್ಣಂ ವಾ ಶೀತಂ ವಾ ಸುಷ್ಠು ದುಷ್ಠು ವಾ ।
ನ ಸ್ಪೃಶತ್ಯೇವ ಯತ್ಕಿಂಚಿತ್ ಪುರುಷಂ ತದ್ವಿಲಕ್ಷಣಮ್ ॥ ೫೦೧ ॥

೫೦೧. ನೆರಳಿನಿಂದ ಮುಟ್ಟಲ್ಪಡುವ ಉಷ್ಣವಾಗಲಿ ಶೀತವಾಗಲಿ, ಒಳ್ಳೆಯದಾಗಲಿ ಕೆಟ್ಟದ್ದಾಗಲಿ, ಅದಕ್ಕಿಂತ ವಿಲಕ್ಷಣನಾದ ಪುರುಷನನ್ನು ಸೋಂಕುವದೇ ಇಲ್ಲ.

ನ ಸಾಕ್ಷಿಣಂ ಸಾಕ್ಷ್ಯಧರ್ಮಾಃ ಸಂಸ್ಪೃಶನ್ತಿ ವಿಲಕ್ಷಣಮ್ ।
ಅವಿಕಾರಮುದಾಸೀನಂ ಗೃಹಧರ್ಮಾಃ ಪ್ರದೀಪವತ್ ॥ ೫೦೨ ॥

೫೦೨. ಮನೆಯ ಧರ್ಮಗಳು (ಅವನ್ನು ಬೆಳಗುವ ದೀಪಕ್ಕೆ ತಗಲದಿರು)ವಂತೆ ವಿಕಾರರಹಿತನೂ ಉದಾಸೀನನೂ ಆಗಿ (ತಮಗಿಂತ) ವಿಲಕ್ಷಣನಾದ ಸಾಕ್ಷಿಯನ್ನು ಸಾಕ್ಷ್ಯದ ಧರ್ಮಗಳು ಸೋಂಕುವದಿಲ್ಲ.[1]

---

[1]. ಇಲ್ಲಿ "ದೇಹೇನ್ದ್ರಿಯಮನೋಧರ್ಮಾ ನೈವಾತ್ಮಾನಂ ಸ್ಪೃಶನ್ತ್ಯಹೋ" ಎಂಬ ಅರ್ಧಶ್ಲೋಕವು ಕೆಲವು ಪುಸ್ತಕಗಳಲ್ಲಿ ಹೆಚ್ಚಾಗಿರುವದುಂಟು. ದೇಹ, ಇಂದ್ರಿಯ, ಮನಸ್ಸು– ಇವುಗಳ ಧರ್ಮಗಳು ಆತ್ಮನನ್ನು ಮುಟ್ಟುವದೇ ಇಲ್ಲ. ಆಶ್ಚರ್ಯವಿದು– ಎಂದು ಅದಕ್ಕೆ ಅನುವಾದ. ಆದರೆ ಇಲ್ಲಿಗೆ ಆ ಶ್ಲೋಕಾರ್ಥವು ಹೊಂದುಗೆಯಾಗಿಲ್ಲ ವೆಂದು ಬಿಟ್ಟಿದೆ.

ರವೇರ್ಯಥಾ ಕರ್ಮಣಿ ಸಾಕ್ಷಿಭಾವೋ
ವಹ್ನೇರ್ಯಥಾ ವಾಯಸಿ ದಾಹಕತ್ವಮ್ ।
ರಜ್ಜೋರ್ಯಥಾರೋಪಿತವಸ್ತುಸಙ್ಗ-
ಸ್ತಥೈವ ಕೂಟಸ್ಥಚಿದಾತ್ಮನೋ ಮೇ ॥ ೫೦೩ ॥

೫೦೩. ಸೂರ್ಯನು ಹೇಗೆ (ಮನುಷ್ಯರು ಮಾಡುವ) ಕರ್ಮಗಳಿಗೆ ಸಾಕ್ಷಿಯೋ, ಬೆಂಕಿಯು ಹೇಗೆ ಕಬ್ಬಿಣದಲ್ಲಿ ಸುಡುವದಾಗಿರುವದೋ, ಹಗ್ಗವು ಹೇಗೆ ತನ್ನಲ್ಲಿ ಆರೋಪಿತವಾಗಿರುವ ವಸ್ತುವಿನ ಸಂಬಂಧವುಳ್ಳದ್ದಾಗಿರುವದೋ ಅದರಂತೆ ಕೂಟಸ್ಥಚಿದ್ರೂಪನಾದ ನನಗೂ (ಅನಾತ್ಮದ ಸಾಕ್ಷಿತ್ವವಿರುತ್ತದೆ).

ಕರ್ತಾಽಪಿ ವಾ ಕಾರಯಿತಾಽಪಿ ನಾಹಂ
ಭೋಕ್ತಾಽಪಿ ವಾ ಭೋಜಯಿತಾಽಪಿ ನಾಹಮ್ ।
ದ್ರಷ್ಟಾಽಪಿ ವಾ ದರ್ಶಯಿತಾಽಪಿ ನಾಹಂ
ಸೋಽಹಂ ಸ್ವಯಂಜ್ಯೋತಿರನೀದೃಗಾತ್ಮಾ ॥ ೫೦೪ ॥

೫೦೪. ನಾನು ಮಾಡುವವನೂ ಅಲ್ಲ, ಮಾಡಿಸುವವನೂ ಅಲ್ಲ. ನಾನು ಅನುಭವಿಸುವವನೂ ಅಲ್ಲ, ಅನುಭವಿಸುವಂತೆ ಮಾಡುವವನೂ ಅಲ್ಲ. ನಾನು ನೋಡುವವನೂ ಅಲ್ಲ, ನೋಡಿಸುವವನೂ ಅಲ್ಲ. ಈ ನಾನು ಸ್ವಯಂಜ್ಯೋತಿಯೇ, ಇವಕ್ಕಿಂತ ಬೇರೆಯ ಸ್ವಭಾವವನೇ.[1]

ಚಲತ್ಯುಪಾಧೌ ಪ್ರತಿಬಿಮ್ಬಲೌಲ್ಯ-
ಮೌಪಾಧಿಕಂ ಮೂಢಧಿಯೋ ನಯನ್ತಿ ।
ಸ್ವಬಿಮ್ಬಭೂತಂ ರವಿವದ್ವಿನಿಷ್ಕ್ರಿಯಂ
ಕರ್ತಾಽಸ್ಮಿ ಭೋಕ್ತಾಽಸ್ಮಿ ಹತೋಽಸ್ಮಿ ಹೇತಿ ॥ ೫೦೫ ॥

೫೦೫. ಉಪಾಧಿಯು ಅಲುಗಾಡಿದರೆ ಪ್ರತಿಬಿಂಬದ ಚಾಂಚಲ್ಯವನ್ನು ಮೂಢಬುದ್ಧಿಗಳುಳ್ಳವರು 'ನಾನು ಕರ್ತನು, ನಾನು ಭೋಕ್ತನು, ಅಯ್ಯೋ! ನಾನು ಕೆಟ್ಟೆನು!' ಎಂದು ಅದನ್ನು ಸೂರ್ಯನಂತೆ ನಿಷ್ಕ್ರಿಯನಾದ ತಮ್ಮ ಬಿಂಬವಾಗಿರುವ (ಉಪಹಿತವಸ್ತು)ವಿಗೇ ಅದನ್ನು ಸೇರಿಸುತ್ತಿರುವರು.

ಜಲೇ ವಾಪಿ ಸ್ಥಲೇ ವಾಪಿ ಲುಠತ್ವೇಷ ಜಡಾತ್ಮಕಃ ।
ನಾಹಂ ವಿಲಿಪ್ಯೇ ತದ್ಧರ್ಮೈರ್ಘಟಧರ್ಮೈರ್ನಭೋ ಯಥಾ ॥೫೦೬॥

೫೦೬. ಈ (ಜಡ)ದೇಹವು ನೀರಿನಲ್ಲಿಯಾದರೂ ನೆಲದಲ್ಲಿಯಾದರೂ ಹೊರಳಾಡುತ್ತಿರಲಿ! ಗಡಿಗೆಯ ಧರ್ಮಗಳು ಆಕಾಶಕ್ಕೆ ಅಂಟದಿರುವಂತೆ ಇದರ ಧರ್ಮಗಳು ನನಗೆ ಅಂಟಲಾರದೆ ಇರುವವು.

1. ಐ. ಗೀ. ೨೨-೨೫.

ಕರ್ತೃತ್ವಭೋಕ್ತೃತ್ವಖಲತ್ವಮತ್ತತಾ–
ಜಡತ್ವಬದ್ಧತ್ವವಿಮುಕ್ತತಾದಯಃ ।
ಬುದ್ಧೇರ್ವಿಕಲ್ಪಾ ನ ತು ಸನ್ತಿ ವಸ್ತುತಃ
ಸ್ವಸ್ಮಿನ್ ಪರೇ ಬ್ರಹ್ಮಣಿ ಕೇವಲೇಽದ್ವಯೇ ॥೫೦೭॥

೫೦೭. ಕರ್ತೃತ್ವ, ಭೋಕ್ತೃತ್ವ, ದುರ್ಜನತ್ವ, ಮತ್ತತ್ವ, ಜಡತ್ವ, ಬದ್ಧತ್ವ, ಮುಕ್ತತ್ವ– ಮುಂತಾದವುಗಳು ಬುದ್ಧಿಯ ವಿಕಲ್ಪಗಳೇ ಹೊರತು, ಕೇವಲ ಅದ್ವಿತೀಯಪರಬ್ರಹ್ಮವಾಗಿರುವ ಆತ್ಮನಲ್ಲಿ ನಿಜವಾಗಿರುವದಿಲ್ಲ.

ಸನ್ತು ವಿಕಾರಾಃ ಪ್ರಕೃತೇ ದಶಧಾ ಶತಧಾ ಸಹಸ್ರಧಾ ವಾಽಪಿ ।
ಕಿಂ ಮೇಽಸಙ್ಗಚಿತೇಸ್ತೈರ್ನ ಘನಃ ಕ್ವಚಿದಮ್ಬರಂ[1] ಸ್ಪೃಶತಿ ॥೫೦೮॥

೫೦೮. ಪ್ರಕೃತಿಗೆ ಹತ್ತು ಬಗೆಯ, ನೂರು ಬಗೆಯ, ಸಾವಿರ ಬಗೆಯ ವಿಕಾರಗಳು ಆಗಲಿ; ಅಸಂಗಚಿದ್ರೂಪನಾದ ನನಗೆ ಅವುಗಳಿಂದಾಗಬೇಕಾದದ್ದೇನು ? ಮೋಡವು ಎಂದಿಗೂ ಆಕಾಶವನ್ನು ಸೋಂಕುವದಿಲ್ಲ.

ಅವ್ಯಕ್ತಾದಿಸ್ಥೂಲಪರ್ಯನ್ತಮೇತದ್
ವಿಶ್ವಂ ಯತ್ರಾಽಽಭಾಸಮಾತ್ರಂ ಪ್ರತೀತಮ್ ।
ವ್ಯೋಮಪ್ರಖ್ಯಂ ಸೂಕ್ಷ್ಮಮಾದ್ಯನ್ತಹೀನಂ
ಬ್ರಹ್ಮಾದ್ವೈತಂ ಯತ್ತದೇವಾಹಮಸ್ಮಿ ॥೫೦೯॥

೫೦೯. ಅವ್ಯಕ್ತವು ಮೊದಲಾಗಿ ಸ್ಥೂಲದೇಹದವರೆಗಿನ[2] ಈ ಪ್ರಪಂಚವು ಯಾವದರಲ್ಲಿ ಬರಿಯ ತೋರಿಕೆಯಾಗಿ ಕಾಣಿಸುತ್ತಿರುವದೋ, ಆಕಾಶದಂತಿರುವ ಸೂಕ್ಷ್ಮವಾದ ಕೊನೆಮೊದಲಿಲ್ಲದ ತನಗೆರಡನೆಯದಿಲ್ಲದ ಬ್ರಹ್ಮವಿರುವದಲ್ಲಿ, ಅದೇ ನಾನಾಗಿರುವೆನು.

ಸರ್ವಾಧಾರಂ ಸರ್ವವಸ್ತುಪ್ರಕಾಶಂ
ಸರ್ವಾಕಾರಂ ಸರ್ವಗಂ ಸರ್ವಶೂನ್ಯಮ್ ।
ನಿತ್ಯಂ ಶುದ್ಧಂ ನಿಶ್ಚಲಂ ನಿರ್ವಿಕಲ್ಪಂ
ಬ್ರಹ್ಮಾದ್ವೈತಂ ಯತ್ತದೇವಾಹಮಸ್ಮಿ ॥೫೧೦॥

೫೧೦. ಎಲ್ಲಕ್ಕೂ ಆಧಾರವಾಗಿ ಎಲ್ಲಾ ವಸ್ತುಗಳನ್ನೂ ಬೆಳಗುವದಾಗಿ, ಎಲ್ಲದರ ಆಕಾರವುಳ್ಳದ್ದಾಗಿ, ಎಲ್ಲೆಲ್ಲಿಯೂ ವ್ಯಾಪಿಸಿಕೊಂಡು (ತನ್ನಲ್ಲಿ) ಯಾವದೊಂದೂ ಇಲ್ಲದ, ನಿತ್ಯವೂ ಶುದ್ಧವೂ ನಿಶ್ಚಲವೂ ನಿರ್ವಿಕಲ್ಪವೂ ಆದ ತನಗೆರಡನೆಯದಿಲ್ಲದ ಬ್ರಹ್ಮವಿರುವದಲ್ಲ, ಅದೇ ನಾನಾಗಿರುವೆನು.

---

1. 'ನ ಹ್ಯಮ್ಬುದ ಡಮ್ಬರೋಽಮ್ಬರಮ್' ಎಂಬ ಪಾಠವು ಸರಿಯಲ್ಲ.

2. ಶಂ. ಗೀ. ೧೩–೧೪ ರಲ್ಲಿ " ಸರ್ವಭೃತ್ " ಎಂಬುದರ ವ್ಯಾಖ್ಯಾನವನ್ನು ನೋಡಿ

ಯತ್ರ್ರತ್ಯಸ್ತಾಶೇಷಮಾಯಾವಿಶೇಷಂ
ಪ್ರತ್ಯಗ್ರೂಪಂ ಪ್ರತ್ಯಯಾಗಮ್ಯಮಾನಮ್ ।
ಸತ್ಯಜ್ಞಾನಾನನ್ತಮಾನನ್ದರೂಪಂ
ಬ್ರಹ್ಮಾದ್ವೈತಂ ಯತ್ತದೇವಾಽಹಮಸ್ಮಿ ||೫೧೦||

೫೧೦. ಮಾಯೆಯ ವಿಶೇಷಗಳು ಯಾವವೂ ಇಲ್ಲದ, ಒಳಗಿನ ಆತ್ಮರೂಪವಾಗಿದ್ದುಕೊಂಡು, ಯಾವ ಪ್ರತ್ಯಯದಿಂದಲೂ ಅರಿಯುವದಕ್ಕಾಗದ ಸತ್ಯಜ್ಞಾನಾನಂತವೂ ಆನಂದರೂಪವೂ ಆದ ತನಗೆರಡನೆಯದಿಲ್ಲದ ಬ್ರಹ್ಮವಿದೆಯಲ್ಲ, ಅದೇ ನಾನು.

ನಿಷ್ಕ್ರಿಯೋಽಸ್ಮ್ಯವಿಕಾರೋಽಸ್ಮಿ ನಿಷ್ಕಲೋಽಸ್ಮಿ ನಿರಾಕೃತಿಃ ।
ನಿರ್ವಿಕಲ್ಪೋಽಸ್ಮಿ ನಿತ್ಯೋಽಸ್ಮಿ ನಿರಾಲಮ್ಬೋಽಸ್ಮಿ ನಿರ್ದ್ವಯಃ ||

೫೧೨. ನಿಷ್ಕ್ರಿಯನಾಗಿರುವೆನು, ವಿಕಾರರಹಿತನಾಗಿರುವೆನು, ನಿಷ್ಕಲನಾಗಿರುವೆನು, ಆಕಾರರಹಿತನಾಗಿರುವೆನು, ವಿಕಲ್ಪರಹಿತನಾಗಿರುವೆನು, ನಿತ್ಯನಾಗಿರುವೆನು, ಮತ್ತೊಂದರ ಆಶ್ರಯವಿಲ್ಲದವನಾಗಿರುವೆನು, ಎರಡನೆಯದಿಲ್ಲದವನಾಗಿರುವೆನು.

ಸರ್ವಾತ್ಮಕೋಽಹಂ ಸರ್ವೋಽಹಂ ಸರ್ವಾತೀತೋಽಹಮದ್ವಯಃ ।
ಕೇವಲಾಖಣ್ಡಬೋಧೋಽಹಮಾನನ್ದೋಽಹಂ ನಿರನ್ತರಃ |೫೧೩|

೫೧೩. ನಾನು ಸರ್ವಾತ್ಮನು, ನಾನು ಸರ್ವವೂ (ಆಗಿರುವೆನು), ನಾನು ಎಲ್ಲವನ್ನೂ ಮೀರಿದ ಅದ್ವಿತೀಯನಾಗಿರುವೆನು, ನಾನು ಕೇವಲ ಅಖಂಡಚೈತನ್ಯರೂಪನಾಗಿರುವೆನು, ನಾನು ಎಡೆಬಿಡದಿರುವ ಆನಂದವಾಗಿರುವೆನು.

ಸ್ವಾರಾಜ್ಯಸಾಮ್ರಾಜ್ಯವಿಭೂತಿರೇಷಾ
ಭವತ್ಕೃಪಾಶ್ರೀಮಹಿಮಪ್ರಸಾದಾತ್ ।
ಪ್ರಾಪ್ತಾ ಮಯಾ ಶ್ರೀಗುರವೇ ಮಹಾತ್ಮನೇ
ನಮೋ ನಮಸ್ತೇಽಸ್ತು ಪುನರ್ನಮೋಽಸ್ತು ||೫೧೪||

೫೧೪. ತಮ್ಮ ಕೃಪೆಯೆಂಬ ಲಕ್ಷ್ಮಿಯ ಮಹಿಮೆಯ ಅನುಗ್ರಹದಿಂದ ಸ್ವಾರಾಜ್ಯಸಾಮ್ರಾಜ್ಯದ ವೈಭವವು ನನಗೆ ದೊರಕಿತು. ಮಹಾತ್ಮನಾದ ಶ್ರೀಗುರುವೆ, ನಿನಗೆ ನಮಸ್ಕಾರ, ನಮಸ್ಕಾರವಿರಲಿ ! ಮತ್ತೂ ನಮಸ್ಕಾರವಿರಲಿ !

ಮಹಾಸ್ವಪ್ನೇ ಮಾಯಾಕೃತಜನಿಜರಾಮೃತ್ಯುಗಹನೇ
ಭ್ರಮನ್ತಂ ಕ್ಲಿಶ್ಯನ್ತಂ ಬಹುಲತರತಾಪೈರನುದಿನಮ್[1] ।
ಅಹಙ್ಕಾರವ್ಯಾಘ್ರವ್ಯಥಿತಮಿಮಮತ್ಯನ್ತಕೃಪಯಾ
ಪ್ರಬೋಧ್ಯ ಪ್ರಸ್ವಾಪಾತ್ ಪರಮವಿತವಾನ್ ಮಾಮಸಿ ಗುರೋ

---

1. 'ಅನುಕಲಮ್' ಎಂಬು ಪಾ||

೫೧೫. ಗುರುವೆ, ಮಹಾಸ್ವಪ್ನದಲ್ಲಿ[1] ಮಾಯೆಯಿಂದಾಗಿದ್ದ ಹುಟ್ಟು, ಮುಪ್ಪು, ಸಾವು–ಇವುಗಳ ಕಾಡಿನಲ್ಲಿ ತೊಳಲುತ್ತಾ ಬಲುಬಗೆಯ ತಾಪಗಳಿಂದ ದಿನದಿನವೂ[2] ಬಳಲುತ್ತಾ ಅಹಂಕಾರವೆಂಬ ಹುಲಿಯ ಉಪಟಳಕ್ಕೆ ಸಿಕ್ಕಿದ್ದ ಈ ನನ್ನನ್ನು ಅತ್ಯಂತಕೃಪೆಯಿಂದ ನಿದ್ರೆಯಿಂದ ಎಚ್ಚರಿಸಿ ಪೂರ್ಣವಾಗಿ ಕಾಪಾಡಿರುತ್ತೀಯೆ.

ನಮಸ್ತಸ್ಮೈ ಸದೈಕಸ್ಮೈ ಕಸ್ಮೈಚಿನ್ಮಹಸೇ ನಮಃ[3] ।
ಯದೇತದ್ವಿಶ್ವರೂಪೇಣ ರಾಜತೇ ಗುರುರಾಜ ತೇ ॥೫೧೬॥

೫೧೬. ಗುರುರಾಯನೆ, ಯಾವಾಗಲೂ ಒಂದೇ ಆಗಿ ಈ ವಿಶ್ವದ ರೂಪದಿಂದ ಬೆಳಗುತ್ತಿರುವ ಆ ಒಂದು ಬಗೆಯ ನಿನ್ನ ಜ್ಯೋತಿಗೆ ನಮಸ್ಕಾರ, ನಮಸ್ಕಾರ !

## ಗುರುವಿನ ಉಪಸಂಹಾರವಚನ

ಇತಿ ನತಮವಲೋಕ್ಯ ಶಿಷ್ಯವರ್ಯಂ
ಸಮಧಿಗತಾಽಽತ್ಮಸುಖಂ ಪ್ರಬುದ್ಧತತ್ತ್ವಮ್ ।
ಪ್ರಮುದಿತಹೃದಯಃ ಸ ದೇಶಿಕೇನ್ದ್ರಃ
ಪುನರಿದಮಾಹ ವಚಃ ಪರಂ ಮಹಾತ್ಮಾ ॥೫೧೭॥

೫೧೭. ಆತ್ಮಾನಂದವನ್ನು ಪಡೆದುಕೊಂಡು ತತ್ತ್ವವನ್ನರಿತುಕೊಂಡು ಹೀಗೆ ತಲೆಬಾಗಿದ ಶಿಷ್ಯಶ್ರೇಷ್ಠನನ್ನು ಕಂಡು ಆ ಮಹಾತ್ಮನಾದ ಗುರುವರ್ಯನು ಸಂತುಷ್ಟಾಂತರಂಗನಾಗಿ ಮರಳಿ ಈ ಮಾತನ್ನು ಹೇಳಿದನು :

ಬ್ರಹ್ಮಪ್ರತ್ಯಯಸನ್ತತಿರ್ಜಗದತೋ ಬ್ರಹ್ಮೈವ ಸತ್ ಸರ್ವತ
ಪಶ್ಯಾಧ್ಯಾತ್ಮದೃಶಾ ಪ್ರಶಾನ್ತಮನಸಾ ಸರ್ವಾಸ್ವವಸ್ಥಾಸ್ವಪಿ ।
ರೂಪಾದನ್ಯದವೇಕ್ಷಿತುಂ ಕಿಮಭಿತಶ್ಚಕ್ಷುಷ್ಮತಾಂ ವಿದ್ಯತೇ
ತದ್ವದ್ ಬ್ರಹ್ಮವಿದಃ ಸತಃ ಕಿಮಪರಂ ಬುದ್ಧೇರ್ವಿಹಾರಾಸ್ಪದಮ್ ॥

1. ಸಾಮಾನ್ಯಸ್ವಪ್ನದಲ್ಲಿರುವವನನ್ನು ಎಚ್ಚರಿಸಿದರೆ, ಅಲ್ಲಿದ್ದ ತಾಪತ್ರಯದಿಂದ ಬಿಡುಗಡೆಮಾಡಿದ್ದಕ್ಕೆ ಎಷ್ಟೋ ಕೃತಜ್ಞರಾಗಿರಬೇಕು ; ಅನಾದಿಸ್ವರೂಪವಾದ ಅವಿದ್ಯೆಯನ್ನು ಕಳೆದು ಎಚ್ಚರಿಸಿದರೆ ಇನ್ನೆಷ್ಟು ಕೃತಜ್ಞರಾಗಿರಬೇಕು ? ಎಂದು ಭಾವ. ಗೌ. ಕಾ. ೧–೧೬ರ ಸೂಚನೆ ಇಲ್ಲಿರಬಹುದು.

2. "ಅನುಕುಲವ್ಯ" ಎಂಬ ಪಾಠಕ್ಕೆ ಪ್ರತಿಯೊಂದು ಕಲೆಯಷ್ಟು ಕಾಲದಲ್ಲಿಯೂ–ಎಂದರ್ಥ.

3. "ನಮಃ" ಎಂಬುದಕ್ಕೆ ಬದಲಿರುವ 'ಮುಹುಃ' ಎಂಬ ವಾ॥ ಪಾಠ ಬೇಕಿಲ್ಲ. "ನಮಶ್ಚಿನ್ಮಹಸೇ" ಎಂಬುದೂ ಬೇಡ.

೫೨೮. ಜಗತ್ತೆಲ್ಲವೂ ಬ್ರಹ್ಮಪ್ರತ್ಯಯದ ಪ್ರವಾಹವಾಗಿರುತ್ತದೆ. ಆದ್ದರಿಂದ ಎಲ್ಲಾ ಅವಸ್ಥೆಗಳಲ್ಲಿಯೂ[1] ಅಧ್ಯಾತ್ಮದೃಷ್ಟಿಯಿಂದ ಅತ್ಯಂತಶಾಂತವಾದ ಮನಸ್ಸಿನಿಂದ ಎಲ್ಲೆಲ್ಲಿಯೂ ಸದ್ರೂಪವಾದ ಬ್ರಹ್ಮವನ್ನೇ ಕಾಣುತ್ತಿರು. ಕಣ್ಣು ಇರುವವರಿಗೆ ಯಾವ ಕಡೆಯಲ್ಲಿ ನೋಡಿದರೂ ರೂಪಕ್ಕಿಂತ ಬೇರೆ ಯಾವದಾದರೂ ಕಂಡೀತೇನು[2]? ಅದರಂತೆ ಬ್ರಹ್ಮಜ್ಞಾನಿಗೆ ಸದ್ರೂಪವಾದ ಬ್ರಹ್ಮಕ್ಕಿಂತ ಮತ್ತೇನು ಬುದ್ಧಿಯ ವ್ಯಾಪಾರಕ್ಕೆ ವಿಷಯವಾದೀತು ?

ಕಸ್ತಾಂ ಪರಾನನ್ದರಸಾನುಭೂತಿ-
ಮುತ್ಸೃಜ್ಯ ಶೂನ್ಯೇಷು ರಮೇತ ವಿದ್ವಾನ್ ।
ಚನ್ದ್ರೇ ಮಹಾಹ್ಲಾದಿನಿ ದೀಪ್ಯಮಾನೇ
ಚಿತ್ರೇನ್ದುಮಾಲೋಕಯಿತುಂ ಕ ಇಚ್ಛೇತ್ ॥೫೨೯॥

೫೨೯. ಆ ಪರಮಾನಂದದ ರಸದ ಅನುಭವವನ್ನು ಬಿಟ್ಟು ವಿವೇಕಿಯಾದ ಯಾವನುತಾನೆ ವ್ಯರ್ಥವಾದ ವಿಷಯಗಳಲ್ಲಿ ಪ್ರೀತಿಯನ್ನಿಟ್ಟುಕೊಂಡಿದ್ದಾನು ? ಪರಮಾಹ್ಲಾದವನ್ನುಂಟುಮಾಡುವ ಚಂದ್ರನು ಬೆಳಗುತ್ತಿರುವಲ್ಲಿ ಯಾವನುತಾನೆ ಚಿತ್ರದಲ್ಲಿರುವ ಚಂದ್ರನನ್ನು ನೋಡುವದಕ್ಕೆಳಸಿಯಾನು ?

ಅಸತ್ಪದಾರ್ಥಾನುಭವೇನ ಕಿಞ್ಚಿ-
ನ್ನ ಹ್ಯಸ್ತಿ ತೃಪ್ತಿರ್ನ ಚ ದುಃಖಹಾನಿಃ ।
ತದದ್ವಯಾನನ್ದರಸಾನುಭೂತ್ಯಾ
ತೃಪ್ತಃ ಸುಖಂ ತಿಷ್ಠ ಸದಾತ್ಮನಿಷ್ಠಯಾ ॥೫೩೦॥

೫೩೦. ಅಸತ್ಪದಾರ್ಥಗಳನ್ನು ಅನುಭವಿಸುವದರಿಂದ ಏನೊಂದೂ (ಪ್ರಯೋಜನ)ವಿರುವದಿಲ್ಲ; ಆದರಿಂದ ತೃಪ್ತಿಯಿಲ್ಲ, ದುಃಖನಾಶವೂ ಇಲ್ಲ. ಅಲ್ಲವೆ ? ಆದ್ದರಿಂದ ಅದ್ವಯಾನಂದರಸವನ್ನು ಅನುಭವಿಸುವದರಿಂದ ತೃಪ್ತನಾಗಿ ಸದ್ರೂಪನಾದ ಆತ್ಮನ ನಿಷ್ಠೆಯಿಂದ ಸುಖವಾಗಿದ್ದುಕೊಂಡಿರು !

ಸ್ವಮೇವ ಸರ್ವತಃ[3] ಪಶ್ಯನ್ ಮನ್ಯಮಾನಃ ಸ್ವಮದ್ವಯಮ್ ।
ಸ್ವಾನನ್ದಮನುಭುಞ್ಜಾನಃ ಕಾಲಂ ನಯ ಮಹಾಮತೇ ॥೫೩೧॥

೫೩೧. ಎಲೈ ಮಹಾಮತಿಯೆ, ಎಲ್ಲೆಲ್ಲಿಯೂ[4] ಆತ್ಮನನ್ನೇ ಕಾಣುತ್ತಾ ಅದ್ವಿತೀಯಾತ್ಮನನ್ನೇ ಮನನಮಾಡುತ್ತಾ ಆತ್ಮಾನಂದವನ್ನು ಅನುಭವಿಸುತ್ತಾ ಕಾಲವನ್ನು ಕಳೆಯುತ್ತಿರು !

---

1. ೩೨೩ನೆಯ ಶ್ಲೋಕದ ಟಿಪ್ಪಣಿಯನ್ನು ನೋಡಿರಿ. ಶಂ. ಗೀ. ೬-೩೧.
2. ಈ ದೃಷ್ಟಾಂತಕ್ಕೆ ಶಂ. ಗೀ. ೫-೧೬ನ್ನೂ ೧೮-೬೬ನ್ನೂ ನೋಡಿ.
3. "ಸರ್ವಥಾ" ಎಂಬ ಪಾಠಕ್ಕಿಂತ ಇದು ಮೇಲು.
4. ಛಾಂ. ೭-೨೫-೨ರ ಸೂಚನೆ.

ಅಖಣ್ಡಬೋಧಾತ್ಮನಿ ನಿರ್ವಿಕಲ್ಪೇ
 ವಿಕಲ್ಪನಂ ವ್ಯೋಮ್ನಿ ಪುರಪ್ರಕಲ್ಪನಮ್ ।
ತದದ್ವಯಾನನ್ದಮಯಾತ್ಮನಾ ಸದಾ
 ಶಾನ್ತಿಂ ಪರಾಮೇತ್ಯ ಭಜಸ್ವ ಮೌನಮ್ ॥ ೫೨೭ ॥

೫೨೭. ನಿರ್ವಿಕಲ್ಪನಾದ ಅಖಂಡಚಿದಾತ್ಮನಲ್ಲಿ ವಿಕಲ್ಪಗಳನ್ನು ಮಾಡುವ ದೆಂದರೆ ಆಕಾಶದಲ್ಲಿ ನಗರವನ್ನು ಕಟ್ಟುವಂತೆ. ಆದ್ದರಿಂದ ಅದ್ವಿತೀಯಾನಂದ ಮಯರೂಪದಿಂದ ಯಾವಾಗಲೂ ಪರಮಶಾಂತಿಯನ್ನು ಹೊಂದಿ ಮೌನವನ್ನು ಹೊಂದಿರು.

ತೂಷ್ಣೀಮವಸ್ಥಾ ಪರಮೋಪಶಾನ್ತಿ-
 ರ್ಬುದ್ಧೇರಸತ್ಕಲ್ಪವಿಕಲ್ಪಹೇತೋಃ ।
ಬ್ರಹ್ಮಾತ್ಮನಾ ಬ್ರಹ್ಮವಿದೋ ಮಹಾತ್ಮನೋ
 ಯತ್ರಾದ್ವಯಾನನ್ದಸುಖಂ ನಿರನ್ತರಮ್ ॥ ೫೨೮ ॥

೫೨೮. ಅಸದ್ರೂಪವಾದ ವಿಷಯಗಳ ವಿಕಲ್ಪವನ್ನು ಮಾಡುವದಕ್ಕೆ ಕಾರಣವಾದ ಬುದ್ಧಿಯ ಪರಮೋಪಶಾಂತಿಗೆ, ಬ್ರಹ್ಮಜ್ಞಾನಿಯಾದ ಮಹಾತ್ಮನಿಗೆ ಬ್ರಹ್ಮರೂಪದಿಂದಿರುವ ತೂಷ್ಣೀಮವಸ್ಥೆಯೇ[1] (ಉಪಾಯವು). ಆ ಸ್ಥಿತಿಯಲ್ಲಿ ನಿರಂತರವಾದ ಅದ್ವಯಾನಂದಸುಖವಿರುವದು.

ನಾಸ್ತಿ ನಿರ್ವಾಸನಾನ್ಮೌನಾತ್ ಪರಂ ಸುಖಕೃದುತ್ತಮಮ್ ।
ವಿಜ್ಞಾತಾತ್ಮಸ್ವರೂಪಸ್ಯ ಸ್ವಾನನ್ದರಸಪಾಯಿನಃ ॥ ೫೨೯ ॥

೫೨೯. ಆತ್ಮಸ್ವರೂಪವನ್ನರಿತುಕೊಂಡು ಆತ್ಮಾನಂದರಸವನ್ನು ಪಾನ ಮಾಡುತ್ತಿರುವವನಿಗೆ ಯಾವ ವಾಸನೆಯೂ ಇಲ್ಲದ ಮೌನಕ್ಕಿಂತ ಹೆಚ್ಚಿನ ಸುಖಕರವಾದದ್ದು ಮತ್ತೊಂದಿಲ್ಲ.[2]

ಗಚ್ಛಂಸ್ತಿಷ್ಠನ್ನುಪವಿಶಞ್ಛಯಾನೋ ವಾಽನ್ಯಥಾಽಪಿ ವಾ ।
ಯಥೇಚ್ಛಯಾ ವಸೇದ್ವಿದ್ವಾನಾತ್ಮಾರಾಮಃ ಸದಾ ಮುನಿಃ ॥ ೫೩೦ ॥

೫೩೦. ಜ್ಞಾನಿಯಾದವನು ಓಡಾಡುವಾಗಲೂ ನಿಂತಿರುವಾಗಲೂ ಕುಳಿತಿರುವಾಗಲೂ ಮಲಗಿರುವಾಗಲೂ[3] ಅಥವಾ ಮತ್ತೆ ಯಾವ ಸ್ಥಿತಿಯಲ್ಲಿರುವಾಗಲೂ ಆತ್ಮಾರಾಮನಾಗಿ ಯಾವಾಗಲೂ ತತ್ತ್ವವನ್ನೇ ಮನನಮಾಡುತ್ತಾ ಸ್ವೇಚ್ಛೆಯಿಂದಿದ್ದುಕೊಂಡಿರಬೇಕು.

---

1. ತೂಷ್ಣೀಮವಸ್ಥೆ ಅಥವಾ ಮೌನ ಎಂಬ ಅವಸ್ಥೆಯ ವಿಚಾರಕ್ಕೆ ಶಂ. ಗೀ. ೨-೫೬, ೩-೭, -೫ ಇವುಗಳನ್ನು ನೋಡಿ.

2. ಯೋ. ವಾ. ಸ್ಥಿತಿ ೪-೫೭ನ್ನು ನೋಡಿರಿ. 3. ಶಂ. ಗೀ. ೧೮-೬.

ನ ದೇಶಕಾಲಾಸನದಿಗ್ಯಮಾದಿ
ಲಕ್ಷ್ಯಾದ್ಯಪೇಕ್ಷಾಽಪ್ರತಿಬದ್ಧವೃತ್ತೇಃ ।
ಸಂಸಿದ್ಧತತ್ತ್ವಸ್ಯ ಮಹಾತ್ಮನೋಽಸ್ತಿ
ಸ್ವವೇದನೇ ಕಾ ನಿಯಮಾದ್ಯಪೇಕ್ಷಾ ॥ ೫೩೬ ॥

೫೩೬. ಜ್ಞಾನಕ್ಕೆ ಯಾವ ಪ್ರತಿಬಂಧವೂ ಇಲ್ಲದೆ[2] ತತ್ತ್ವದಲ್ಲಿ ಸಂಸಿದ್ಧಿಯನ್ನು[3] ಹೊಂದಿರುವ ಮಹಾತ್ಮನಿಗೆ ದೇಶ, ಕಾಲ, ಆಸನ, ದಿಕ್ಕು, ಯಮ- ಇವೇ ಮುಂತಾದವೂ ದೃಷ್ಟಿಸಂಸ್ಥಾಪನೆಯೇ ಮುಂತಾದವೂ ಬೇಕಿರುವದಿಲ್ಲ.[4] ತನ್ನ ಸ್ವರೂಪವನ್ನು ತಿಳಿದುಕೊಳ್ಳುವದಕ್ಕೆ ನಿಯಮವೇ ಮುಂತಾದವುಗಳೇಕೆ ಬೇಕು ?

ಘಟೋಽಯಮಿತಿ ವಿಜ್ಞಾತುಂ ನಿಯಮಃ ಕೋ ನ್ವಪೇಕ್ಷತೇ ।
ವಿನಾ ಪ್ರಮಾಣಸುಷ್ಠುತ್ವಂ ಯಸ್ಮಿನ್ ಸತಿ ಪದಾರ್ಥಧೀಃ ॥ ೫೩೭ ॥

೫೩೭. ಇದು ಗಡಿಗೆ ಎಂದು ತಿಳಿದುಕೊಳ್ಳುವದಕ್ಕೆ ಯಾವ ನಿಯಮವು ತಾನೆ ಬೇಕಾಗಿರುತ್ತದೆ ? ಅದಕ್ಕೆ ಪ್ರಮಾಣವು ಸರಿಯಾಗಿರಬೇಕಾದದ್ದು[5] ಹೊರತು (ಮತ್ತೇನೂ ಬೇಕಿರುವದಿಲ್ಲ). ಅದೊಂದಿದ್ದರೆ ಪದಾರ್ಥದ ಅರಿವು ಉಂಟಾಗುತ್ತದೆ.

ಅಯಮಾತ್ಮಾ ನಿತ್ಯಸಿದ್ಧಃ ಪ್ರಮಾಣೇ ಸತಿ ಭಾಸತೇ ।
ನ ದೇಶಂ ನಾಪಿ ವಾ ಕಾಲಂ ನ ಶುದ್ಧಿಂ ವಾಽಪ್ಯಪೇಕ್ಷತೇ[6] ॥ ೫೩೮ ॥

1. 'ನಿಯಮಾದ್ಯವಸ್ಥಾ' ಎಂಬ ಪಾ|| ಪಾಠ ಸರಿಯಲ್ಲ.

2. ಶಂ. ಗೀ. [illegible] ಮುಂತಾದ ಕಡೆಗಳಲ್ಲಿ 'ಅಪ್ರತಿಬದ್ಧವೃತ್ತಿ' ಎಂಬ ಶಬ್ದವಿದೆ. ವೃತ್ತಿಗೆ ಪ್ರತಿಬಂಧವಿಲ್ಲದಿರುವದಕ್ಕೆ ಸಮಾಧಿಯು ಬೇಕೆಂದು ಅಲ್ಲಿ ಹೇಳಿದೆ.

3. ಸುಖಾನುಭವವುಂಟಾದರೂ ದುಃಖಾನುಭವವುಂಟಾದರೂ ಬ್ರಹ್ಮಸ್ವರೂಪದ ನೆಲೆಯಿಂದಿರುವದೇ ಸಂಸಿದ್ಧಿ. ಇದನ್ನು ಅಖಂಡಾಕಾರವೃತ್ತಿಯೆಂದೂ ಕರೆಯುತ್ತಾರೆ. ಶಂ. ಗೀ. [illegible].

4. ಶಂ. ಗೀ. [illegible], ಸಾಧಕನಿಗೆ ಮಾತ್ರ ಈ ನಿಯಮಗಳು ಬೇಕೆಂದೂ ಇವೆಲ್ಲವೂ ನಾನು ಬ್ರಹ್ಮವೇ ಎಂದು ಅರಿತುಕೊಂಡವನಿಗೆ ಬೇಕಿಲ್ಲವೆಂದೂ ಅಲ್ಲಿ ಹೇಳಿದೆ.

5. ಕಣ್ಣಿನಲ್ಲಿ ದೋಷವಿದ್ದವರಿಗೆ ದ್ವಿಚಂದ್ರಜ್ಞಾನವಿರುತ್ತದೆ ; ಅದನ್ನು ಕಳೆದುಕೊಂಡವರಿಗೆ ಮಾತ್ರ ಸರಿಯಾದ ಜ್ಞಾನವಾಗುತ್ತದೆ ; ಇದರಂತೆ ಸಮಾಧಿಯಿಂದ [illegible]ದೋಷವನ್ನು ಕಳೆದುಕೊಂಡವರಿಗೆ ಮಾತ್ರ ಅಪ್ರತಿಬದ್ಧಜ್ಞಾನವಾಗುತ್ತದೆ. ಆದ್ದರಿಂದ ಪ್ರಮಾಣಸುಷ್ಠುತ್ವಕ್ಕಾಗಿ ಸಮಾಧಿಯನ್ನು ಮಾಡಬೇಕು, ಆಮೇಲೆ ಜ್ಞಾನಕ್ಕೆ ಮತ್ತೇನೂ ಬೇಕಿಲ್ಲ ಎಂದು ಭಾವ. ಶಂ. ಗೀ. [illegible].

6. 'ವಾ ನ್ಯಪೇಕ್ಷತೇ' ಪಾ||

೫೨೮. ಈ ಆತ್ಮನು ನಿತ್ಯಸಿದ್ಧನಾಗಿರುತ್ತಾನೆ. ಪ್ರಮಾಣಗಳಿಂದ ತೋರುತ್ತಾನೆಯೇ ಹೊರತು ದೇಶವನ್ನು ಬಯಸುವದಿಲ್ಲ, ಕಾಲವನ್ನು ಬಯಸುವದಿಲ್ಲ, ಶುದ್ಧಿಯನ್ನು ಬಯಸುವದಿಲ್ಲ.

ದೇವದತ್ತೋಽಹಮಿತ್ಯೇತದ್ವಿಜ್ಞಾನಂ ನಿರಪೇಕ್ಷಕಮ್ ।
ತದ್ವದ್ಬ್ರಹ್ಮವಿದೋಽಪ್ಯಸ್ಯ ಬ್ರಹ್ಮಾಹಮಿತಿ ವೇದನಮ್ ॥೫೨೯॥

೫೨೯. 'ನಾನು ದೇವದತ್ತನು' ಎಂಬ ಜ್ಞಾನವು ಯಾವದರ ಅಪೇಕ್ಷೆಯೂ ಇಲ್ಲದೆ ಆಗುವದು. ಅದರಂತೆ ಬ್ರಹ್ಮಜ್ಞಾನಿಯಾದವನೂ ನಾನು ಬ್ರಹ್ಮವು ಎಂದು ತಿಳಿದುಕೊಳ್ಳುವದಕ್ಕೂ ( ಯಾವದನ್ನೂ ಅಪೇಕ್ಷಿಸುವದಿಲ್ಲ ).

ಭಾನುನೇವ ಜಗತ್ಸರ್ವಂ ಭಾಸತೇ ಯಸ್ಯ ತೇಜಸಾ ।
ಅನಾತ್ಮಕಮಸತ್ತುಚ್ಛಂ ಕಿಂ ನು ತಸ್ಯಾವಭಾಸಕಮ್ ॥೫೩೦॥

೫೩೦. ಜಗತ್ತೆಲ್ಲವೂ ಸೂರ್ಯನಿಂದ ಬೆಳಗುವಂತೆ ಅಸದ್ರೂಪವೂ ತುಚ್ಛವೂ ಆದ ಅನಾತ್ಮ(ಪದಾರ್ಥವು) ಯಾವನ ತೇಜಸ್ಸಿನಿಂದ ತೋರುತ್ತಿರುವದೋ[1] ಅವನನ್ನು ತೋರಿಸುವದು ಮತ್ತೆ ಯಾವದಿದ್ದೀತು ?

ವೇದಶಾಸ್ತ್ರಪುರಾಣಾನಿ ಸೂತ್ರಾಣಿ ಸಕಲಾನ್ಯಪಿ ।
ಯೇನಾರ್ಥವನ್ತಿ ತಂ ಕಿಂ ನು ವಿಜ್ಞಾತಾರಂ ಪ್ರಕಾಶಯೇತ್ ॥೫೩೧॥

೫೩೧. ವೇದಶಾಸ್ತ್ರಪುರಾಣಗಳೂ ಸೂತ್ರಗಳೂ[2] ಎಲ್ಲವೂ ಯಾವದರಿಂದ ಅರ್ಥವತ್ತಾಗುವವೋ ಆ ವಿಜ್ಞಾತೃವನ್ನು ಯಾವದು ತಾನೆ ಬೆಳಗೀತು[3] ?

ಏಷ ಸ್ವಯಂಜ್ಯೋತಿರನನ್ತಶಕ್ತಿ-
ರಾತ್ಮಾಽಪ್ರಮೇಯಃ ಸಕಲಾನುಭೂತಿಃ ।
ಯಮೇವ ವಿಜ್ಞಾಯ ವಿಮುಕ್ತಬನ್ಧೋ
ಜಯತ್ಯಯಂ ಬ್ರಹ್ಮವಿದುತ್ತಮೋತ್ತಮಃ ॥೫೩೨॥

೫೩೨. ಈ ಆತ್ಮನು ಸ್ವಯಂಜ್ಯೋತಿಯು[4], ಅನಂತಶಕ್ತಿಗಳುಳ್ಳವನು ; ಅಪ್ರಮೇಯನೂ ಎಲ್ಲವನ್ನೂ ಅನುಭವಿಸುವವನೂ[5] ಆಗಿರುತ್ತಾನೆ, ಅವನನ್ನು ಅರಿತುಕೊಂಡರೇ ಬಂಧದಿಂದ ಬಿಡುಗಡೆಹೊಂದಿ ಈ ಜೀವನು ಸರ್ವೋತ್ಕೃಷ್ಟನೂ ಬ್ರಹ್ಮವಿದರಲ್ಲಿ ಅತ್ಯಂತೋತ್ತಮನೂ ಆಗುತ್ತಾನೆ.[6]

---

1. ಕಠ. ೫-೧೫. ಶ್ವೇ. ೬-೧೪ — ಈ ಉಪನಿಷತ್ತುಗಳಲ್ಲಿರುವ 'ತಸ್ಯ ಭಾಸಾ' ಎಂಬ ಶ್ರುತಿಯು ಸೂಚಕವು.

2. ಬೃ. ೨-೪-೧೦. ಈ ಉಪನಿಷತ್ತಿಗನುಸಾರವಾಗಿ 'ಸೂತ್ರಾಣಿ' ಎಂಬುದೇ ಸರಿಯಾದ ಪಾಠವೆಂದು ನಾವು ನಿಶ್ಚಯಿಸಿರುತ್ತೇವೆ.

3. ಬೃ. ೩-೭-೨೩.

4. ಬೃ. ೪-೩-೯.

5. ಬೃ. ೩-೫-೧.

6. ಮುಂ. ೩-೧-೪.

ನ ಖಿದ್ಯತೇ ನೋ ವಿಷಯೈಃ ಪ್ರಮೋದತೇ
 ನ ಸಜ್ಜತೇ ನಾಪಿ ವಿರಜ್ಯತೇ ಚ ।
ಸ್ವಸ್ಮಿನ್ ಸದಾ ಕ್ರೀಡತಿ ನನ್ದತಿ ಸ್ವಯಂ
 ನಿರನ್ತರಾನನ್ದರಸೇನ ತೃಪ್ತಃ ॥೫೩೩॥

೫೩೩. ಅವನು ವಿಷಯಗಳಿಂದ ದುಃಖಪಡುವದಿಲ್ಲ, ಹಿಗ್ಗುವದೂ ಇಲ್ಲ; ಅವುಗಳಲ್ಲಿ ಸಕ್ತನಾಗಿರುವದಿಲ್ಲ, ವಿರಕ್ತನಾಗಿರುವದೂ ಇಲ್ಲ. ಎಡೆಬಿಡದ ಆನಂದರಸದಿಂದ ತೃಪ್ತನಾಗಿ ಯಾವಾಗಲೂ ತಾನೇ ತನ್ನಲ್ಲಿಯೇ ಕ್ರೀಡಿಸುತ್ತಿರುವನು.[1]

ಕ್ಷುಧಾಂ ದೇಹವ್ಯಥಾಂ ತ್ಯಕ್ತ್ವಾ ಬಾಲಃ ಕ್ರೀಡತಿ ವಸ್ತುನಿ ।
ತಥೈವ ವಿದ್ವಾನ್ ರಮತೇ ನಿರ್ಮಮೋ ನಿರಹಂ ಸುಖೀ ॥೫೩೪॥

೫೩೪. ಹುಡುಗನು ಹಸಿವನ್ನೂ ಮೈಬಳಲಿಕೆಯನ್ನೂ ಬದಿಗಿಟ್ಟು ಆಟದ ವಸ್ತುವನ್ನಿಟ್ಟುಕೊಂಡು ಆಡುತ್ತಿರುತ್ತಾನೆ. ಹಾಗೆಯೇ ಜ್ಞಾನಿಯು ನಾನೆಂಬುದಿಲ್ಲದೆ ನನ್ನದೆಂಬುದಿಲ್ಲದೆ ಸುಖಿಯಾಗಿ (ಆತ್ಮನಲ್ಲಿ) ರತನಾಗಿರುವನು.[2]

ಚಿನ್ತಾಶೂನ್ಯಮದೈನ್ಯಭೈಕ್ಷ್ಯಮಶನಂ ಪಾನಂ ಸರಿದ್ವಾರಿಷು
 ಸ್ವಾತನ್ತ್ರ್ಯೇಣ ನಿರಙ್ಕುಶಾ ಸ್ಥಿತಿರಭೀರ್ನಿದ್ರಾ ಶ್ಮಶಾನೇ ವನೇ ।
ವಸ್ತ್ರಂ ಕ್ಷಾಲನಶೋಷಣಾದಿರಹಿತಂ ದಿಗ್ವಾಸ್ತು ಶಯ್ಯಾ ಮಹೀ
 ಸಞ್ಚಾರೋ ನಿಗಮಾನ್ತವೀಥಿಷು ವಿದಾಂ ಕ್ರೀಡಾ ಪರೇ ಬ್ರಹ್ಮಣಿ ॥

೫೩೫. ಜ್ಞಾನಿಗಳಿಗೆ ಯಾವ ಚಿಂತೆಯೂ ಇಲ್ಲದ ದೀನತೆಯಿಲ್ಲದ ಭಿಕ್ಷಾನ್ನವೇ ಊಟ; ನದಿಯ ನೀರೇ ಪಾನ; ಸ್ವತಂತ್ರವಾಗಿ ಮತ್ತೊಬ್ಬರ ಹಂಗಿಲ್ಲದೆ ಇರುವ ಸ್ಥಿತಿ; ಅಂಜಿಕೆಯಿಲ್ಲದಿರುವಿಕೆ; ಸ್ಮಶಾನದಲ್ಲಿ ಅಥವಾ ಕಾಡಿನಲ್ಲಿ ನಿದ್ರೆ; ಒಗೆಯುವದು, ಒಣಗಿಸುವದು ಮುಂತಾದದ್ದರ ಗೋಜಿಲ್ಲದ ದಿಕ್ಕೇ ಹೊದಿಕೆ; ನೆಲವೇ ಹಾಸಿಗೆ; ವೇದಾಂತಗಳ ಬೀದಿಗಳಲ್ಲಿ ಅಡ್ಡಾಟ; ಪರಬ್ರಹ್ಮದಲ್ಲಿ ಕ್ರೀಡೆ (ಇದೇ ವ್ಯವಹಾರವು).

ವಿಮಾನಮಾಲಮ್ಬ್ಯ ಶರೀರಮೇತದ್
 ಭುನಕ್ತ್ಯಶೇಷಾನ್ ವಿಷಯಾನುಪಸ್ಥಿತಾನ್ ।
ಪರೇಚ್ಛಯಾ ಬಾಲವದಾತ್ಮವೇತ್ತಾ
 ಯೋಽವ್ಯಕ್ತಲಿಙ್ಗೋಽನನುಷಕ್ತಬಾಹ್ಯಃ ॥೫೩೬॥

1. ಭಂ. ಗೀ. ೩ ೧೭.  2. ಛಾಂ. ೮-೧೨-೩.
3. ಛಾಂ. ೭-೨೫-೨ ಅಥವಾ ಮುಂ. ೩-೧-೪.

೫೩೬. ಆತ್ಮಜ್ಞಾನಿಯಾದವನು ಈ ಶರೀರವೆಂಬ ಉಪ್ಪರಿಗೆಯಲ್ಲಿ ಕುಳಿತು ಪರೇಚ್ಛೆಯಿಂದ ಒದಗಿದ ವಿಷಯಗಳನ್ನೆಲ್ಲ ಬಾಲನಂತೆ ಭೋಗಿಸುತ್ತಿರುವನು.[1] ಅವನಿಗೆ ಆಶ್ರಮಚಿಹ್ನೆಗಳು ಯಾವವೂ ಇರುವದಿಲ್ಲ[2]; ಹೊರಗಿನ ವಸ್ತುಗಳಲ್ಲಿ ಆಸಕ್ತಿಯೂ ಇರುವದಿಲ್ಲ.[3]

ದಿಗಮ್ಬರೋ ವಾಽಪಿ ಚ ಸಾಮ್ಬರೋ ವಾ
  ತ್ವಗಮ್ಬರೋ ವಾಽಪಿ ಚಿದಮ್ಬರಸ್ಥಃ ।
ಉನ್ಮತ್ತವದ್ವಾಽಪಿ ಚ ಬಾಲವದ್ವಾ
  ಪಿಶಾಚವದ್ವಾಽಪಿ ಚರತ್ಯವನ್ಯಾಮ್ ॥೫೩೭॥

೫೩೭. ಚಿದಂಬರದಲ್ಲಿರುವಾತನು ದಿಗಂಬರನಾಗಿ ಅಥವಾ ಬಟ್ಟೆಯನ್ನುಟ್ಟು, ಇಲ್ಲದಿದ್ದರೆ ನಾರುಬಟ್ಟೆಯನ್ನುಟ್ಟು, ಹುಚ್ಚನಂತೆಯಾಗಲಿ ಬಾಲನಂತೆ ಆಗಲಿ, ಪಿಶಾಚಿಯಂತೆಯಾಗಲಿ ಭೂಮಿಯಲ್ಲಿ ತಿರುಗುತ್ತಿರುವನು.[4]

ಕಾಮಾನ್ನೀ ಕಾಮರೂಪೀ ಸಂಶ್ಚರತ್ಯೇಕಚರೋ ಮುನಿಃ ।
ಸ್ವಾತ್ಮನ್ಯೇವ ಸದಾ ತುಷ್ಟಃ ಸ್ವಯಂ ಸರ್ವಾತ್ಮನಾ ಸ್ಥಿತಃ ॥೫೩೮॥

೫೩೮. ಮುನಿಯಾದವನು[5] ತನ್ನ ಆತ್ಮನಿಂದಲೇ ಯಾವಾಗಲೂ ತುಷ್ಟನಾಗಿ ತಾನೇ ಸರ್ವರ ಆತ್ಮನಾಗಿರುತ್ತಾ ಕಾಮಾನ್ನಿಯೂ[6] ಕಾಮರೂಪಿಯೂ ಆಗಿ ಒಂಟಿಯಾಗಿ ಸಂಚರಿಸುತ್ತಿರುವನು.

ಕ್ವಚಿನ್ಮೂಢೋ ವಿದ್ವಾನ್ ಕ್ವಚಿದಪಿ ಮಹಾರಾಜವಿಭವಃ
  ಕ್ವಚಿದ್ಭ್ರಾನ್ತಃ ಸೌಮ್ಯಃ ಕ್ವಚಿದಜಗರಾಚಾರಕಲಿತಃ ।
ಕ್ವಚಿತ್ಪಾತ್ರೀಭೂತಃ ಕ್ವಚಿದವಮತಃ ಕ್ವಾಪ್ಯವಿದಿತ-
  ಶ್ಚರತ್ಯೇವಂ ಪ್ರಾಜ್ಞಃ ಸತತಪರಮಾನನ್ದಸುಖಿತಃ ॥೫೩೯॥

---

1. ಜ್ಞಾನಿಯಾದವನಿಗೆ ತನ್ನಿಚ್ಛೆಯಿಂದಾದ ಪ್ರಾರಬ್ಧಕರ್ಮವಿಲ್ಲದಿದ್ದರೂ ಅನಿಚ್ಛಾಪರೇಚ್ಛಾಪ್ರಾರಬ್ಧಗಳು ಇರಬಹುದೆಂದು ಭಾವ; ಶಂ. ಗೀ. ೩-೨೦.

2. ಜಾ. ೬.

3. 'ವಿಷಯರೂಪವಾಗಿ ಅವನ ಅಂತಃಕರಣವೃತ್ತಿಯು ಪರಿಣಮಿಸುವದಿಲ್ಲ' ಶಂ ಗೀ. ೬-೫.

4. ತುರೀಯಾತೀತೋಪನಿಷತ್ತು; 'ಸರ್ವದಾನುನ್ಮತ್ತೋ ಬಾಲೋನ್ಮತ್ತಪಿಶಾಚವದೇಕಾಕೀ ಸಂಚರನ್'.

5. ಪರಮಾತ್ಮನನ್ನು ಅರಿತ ಜ್ಞಾನಿಯು.

6. ಎಲ್ಲರ ಆತ್ಮನಾಗಿರುವದರಿಂದ ಸರ್ವಭೂತಗಳ ರೂಪವೂ ಅನ್ನವೂ ಇವನದೇ ಆಗಿರುತ್ತದೆ ಎಂದು ಭಾವ. ತೈ. ೩-೧೦.

೫೩೯. ಕೆಲವು ವೇಳೆ ಮೂಢನಂತೆ ಕೆಲವು ವೇಳೆ ವಿದ್ವಾಂಸನಂತೆ, ಮಹಾರಾಜನ ವೈಭವದಿಂದ ಮೆರೆಯುವನಂತೆ, ಕೆಲವು ವೇಳೆ ಭ್ರಾಂತನಾಗಿ, ಕೆಲವು ವೇಳೆ ಶಾಂತನಾಗಿ, ಕೆಲವು ವೇಳೆ ಅಜಗರವೃತ್ತಿಯನ್ನವಲಂಬಿಸಿದವನಾಗಿ, ಕೆಲವು ವೇಳೆ ಯೋಗ್ಯನೆಂದು ಸನ್ಮಾನವನ್ನು ಹೊಂದಿ, ಕೆಲವು ವೇಳೆ ಅಪಮಾನವನ್ನು ಹೊಂದಿ ಎಲ್ಲಿಯೂ ಒಬ್ಬರಿಗೂ (ತನ್ನ ನಿಜವು) ತಿಳಿಯದಂತೆ ಇರುತ್ತಾ– ಹೀಗೆ ಪ್ರಾಜ್ಞನು ಸತತವಾಗಿ ಪರಮಾನಂದದಿಂದ ಸುಖಿಸುತ್ತಾ ಸಂಚರಿಸುತ್ತಿರುವನು.

ನಿರ್ಧನೋಽಪಿ ಸದಾ ತುಷ್ಟೋಽಪ್ಯಸಹಾಯೋ ಮಹಾಬಲಃ ।
ನಿತ್ಯತೃಪ್ತೋಽಪ್ಯಭುಞ್ಜಾನೋಽಪ್ಯಸಮಃ ಸಮದರ್ಶನಃ ॥೫೪೦॥

೫೪೦. ಧನವಿಲ್ಲದವನಾದರೂ ಯಾವಾಗಲೂ ತುಷ್ಟನಾಗಿ, ಒಬ್ಬರ ಸಹಾಯವೂ ಇಲ್ಲದಿದ್ದರೂ ಮಹಾಬಲನಾಗಿ, ಭೋಜನಮಾಡದಿದ್ದರೂ ನಿತ್ಯತೃಪ್ತನಾಗಿ ಅಸಮನೂ ಸಮದರ್ಶಿಯೂ ಆಗಿರುವನು.

ಅಪಿ ಕುರ್ವನ್ನಕುರ್ವಾಣಶ್ಚಾಭೋಕ್ತಾ ಫಲಭೋಗ್ಯಪಿ ।
ಶರೀರ್ಯಪ್ಯಶರೀರ್ಯೇಷ ಪರಿಚ್ಛಿನ್ನೋಽಪಿ ಸರ್ವಗಃ ॥೫೪೧॥

೫೪೧. ಇವನು ಕರ್ಮಗಳನ್ನು ಮಾಡುತ್ತಿದ್ದರೂ[2] ಮಾಡದೆ ಫಲವನ್ನು ಅನುಭವಿಸುತ್ತಿದ್ದರೂ ಅಭೋಕ್ತೃವಾಗಿ, ಶರೀರಿಯಾದರೂ ಅಶರೀರಿಯಾಗಿ ಪರಿಚ್ಛಿನ್ನನಾಗಿದ್ದರೂ ಸರ್ವವ್ಯಾಪಿಯಾಗಿರುವನು.

ಅಶರೀರಂ ಸದಾ ಸನ್ತಮಿಮಂ ಬ್ರಹ್ಮವಿದಂ ಕ್ವಚಿತ್ ।
ಪ್ರಿಯಾಪ್ರಿಯೇ ನ ಸ್ಪೃಶತಸ್ತಥೈವ ಚ ಶುಭಾಶುಭೇ ॥೫೪೨॥

೫೪೨. ಯಾವಾಗಲೂ ಅಶರೀರನಾಗಿರುವ ಈ ಬ್ರಹ್ಮಜ್ಞಾನಿಯನ್ನು ಪ್ರಿಯಾಪ್ರಿಯಗಳೂ[3] ಹಾಗೆಯೇ ಶುಭಾಶುಭಗಳೂ[4] ಎಂದಿಗೂ ಮುಟ್ಟದೆ ಇರುವವು.

ಸ್ಥೂಲಾದಿಸಂಬನ್ಧವತೋಽಭಿಮಾನಃ
ಸುಖಂ ಚ ದುಃಖಂ ಚ ಶುಭಾಶುಭೇ ಚ ।
ವಿಧ್ವಸ್ತಬನ್ಧಸ್ಯ ಸದಾತ್ಮನೋ ಮುನೇಃ
ಕುತಃ ಶುಭಂ ವಾಽಪ್ಯಶುಭಂ ಫಲಂ ವಾ ॥೫೪೩॥

1. ಭ. ಗೀ. ೪-೨೨.
2. ಮಾಡುವಂತೆ ಲೌಕಿಕರಿಗೆ ಕಂಡರೂ.
3. ಛಾಂ. ೮-೧೨-೧.
4. ತೈ. ೨-೯, ಬೃ. ೪.೪-೨೨.

೫೪೩. ಸ್ಥೂಲದೇಹವೇ ಮುಂತಾದದ್ದರ ಸಂಬಂಧವುಳ್ಳ ಅಭಿಮಾನಿಗೆ ಸುಖದುಃಖಗಳೂ ಪುಣ್ಯಪಾಪಗಳೂ ಉಂಟಾಗುತ್ತವೆ. ಬಂಧವನ್ನು ನಾಶಪಡಿಸಿಕೊಂಡು ಸದ್ರೂಪನಾಗಿರುವ ಮುನಿಗೆ ಪುಣ್ಯವಾಗಲಿ ಪಾಪವಾಗಲಿ (ಅವುಗಳ) ಫಲವಾಗಲಿ ಎಲ್ಲಿಂದ (ಬಂದಾವು) ?

ತಮಸಾ ಗ್ರಸ್ತವದ್ ಭಾನಾದಗ್ರಸ್ತೋಽಪಿ ರವಿರ್ಜನೈಃ ।
ಗ್ರಸ್ತ ಇತ್ಯುಚ್ಯತೇ ಭ್ರಾನ್ತ್ಯಾ ಹ್ಯಜ್ಞಾತ್ವಾ ವಸ್ತುಲಕ್ಷಣಮ್ ॥೫೪೪॥
ತದ್ವದ್ದೇಹಾದಿಬನ್ಧೇಭ್ಯೋ ವಿಮುಕ್ತಂ ಬ್ರಹ್ಮವಿತ್ತಮಮ್ ।
ಪಶ್ಯನ್ತಿ ದೇಹಿವನ್ಮೂಢಾಃ ಶರೀರಾಭಾಸದರ್ಶನಾತ್ ॥೫೪೫॥

೫೪೪-೫೪೫. ಸೂರ್ಯನು ರಾಹುವಿನಿಂದ (ನಿಜವಾಗಿ) ಗ್ರಸ್ತನಾಗದೆ ಇದ್ದರೂ ಗ್ರಸ್ತನಾದಂತೆ ತೋರುವದರಿಂದ ಜನರು ವಸ್ತುಸ್ವರೂಪವನ್ನರಿಯದೆ (ಅವನು) ಗ್ರಸ್ತನಾಗಿರುತ್ತಾನೆ ಎಂದು ಭ್ರಾಂತಿಯಿಂದ ಹೇಳುವರಷ್ಟೆ ? ಅದರಂತೆ ದೇಹವೇ ಮುಂತಾದ ಬಂಧಗಳಿಂದ ವಿಮುಕ್ತನಾಗಿರುವ ಬ್ರಹ್ಮವಿತ್ತಮನಿಗೆ ಶರೀರವಿದ್ದಂತೆ ತೋರುವದರಿಂದ ಮೂಢರು (ಅವನನ್ನು) ಶರೀರಿ ಎಂಬಂತೆ ಕಾಣುತ್ತಿರುವರು.

ಅಹಿನಿರ್ಲ್ವಯನೀವಾಯಂ ಮುಕ್ತದೇಹಸ್ತು ತಿಷ್ಠತಿ ।
ಇತಸ್ತತಶ್ಚಾಲ್ಯಮಾನೋ ಯತ್ಕಿಞ್ಚಿತ್ ಪ್ರಾಣವಾಯುನಾ ॥೫೪೬॥

೫೪೬. ಆದರೆ ಈ ಮುಕ್ತನ ದೇಹವು (ಬಿಟ್ಟ) ಹಾವಿನ ಪೊರೆಯಂತೆ[1] ಒಂದಿಷ್ಟು ಪ್ರಾಣವಾಯುವಿನಿಂದ ಅತ್ತಿತ್ತ ಹಾರಾಡುತ್ತಾ ಇದ್ದುಕೊಂಡಿರುತ್ತದೆ.

ಸ್ರೋತಸಾ ನೀಯತೇ ದಾರು ಯಥಾ ನಿಮ್ನೋನ್ನತಸ್ಥಲಮ್ ।
ದೈವೇನ ನೀಯತೇ ದೇಹೋ ಯಥಾ ಕಾಲೋಪಭುಕ್ತಿಷು ॥೫೪೭॥

೫೪೭. ಹೇಗೆ ಹೊಳೆಯ ನೀರಿನಿಂದ (ಅದರಲ್ಲಿ ಬಿದ್ದಿರುವ) ಕಟ್ಟಿಗೆಯು ತಗ್ಗುತಿಟ್ಟುನೆಲಕ್ಕೆ ಒಯ್ಯಲ್ಪಡುತ್ತಿರುವದೋ ಅದರಂತೆ ದೇಹವು ಆಯಾಕಾಲದ ಉಪಭೋಗಗಳ ಕಡೆಗೆ ಅದೃಷ್ಟದಿಂದ ಒಯ್ಯಲ್ಪಡುತ್ತಿರುವದು.

ಪ್ರಾರಬ್ಧಕರ್ಮಪರಿಕಲ್ಪಿತವಾಸನಾಭಿಃ
ಸಂಸಾರಿವಚ್ಚರತಿ ಭುಕ್ತಿಷು ಮುಕ್ತದೇಹಃ ।
ಸಿದ್ಧಃ ಸ್ವಯಂ ವಸತಿ ಸಾಕ್ಷಿವದತ್ರ ತೂಷ್ಣೀಂ
ಚಕ್ರಸ್ಯ ಮೂಲಮಿವ ಕಲ್ಪವಿಕಲ್ಪಶೂನ್ಯಃ ॥೫೪೮॥

೫೪೮. ಪ್ರಾರಬ್ಧಕರ್ಮಗಳಿಂದಾಗಿರುವ ವಾಸನೆಗಳಿಂದ[2] ಮುಕ್ತನ ದೇಹವು (ಆಯಾ ಭೋಗಗಳಲ್ಲಿ ಸಂಸಾರಿಯ ದೇಹದಂತೆ ಚರಿಸುತ್ತಿರುವದು.

---

1. ೃ. ೪-೪-೭. 2. ಅವಿದ್ಯಾಸಂಸ್ಕಾರದಿಂದ ; ಶ್ಲೋ. ... 

(ಆ) ನಿಷ್ಪನ ಪಾತ್ರ ತಾನುತಾನು ಬಂಡಿಯ ಗಾಲಿಯೊಳಗಿನ ಅಚ್ಚಿನಂತೆ ಸಂಕಲ್ಪವಿಕಲ್ಪಗಳಿಲ್ಲದೆ ಅದಕ್ಕೆ ಸಾಕ್ಷಿಯಾಗಿ ಸುಮ್ಮನಿರುತ್ತಾನೆ.[2]

ನೈವೇನ್ದ್ರಿಯಾಣಿ ವಿಷಯೇಷು ನಿಯುಙ್ಕ್ತ ಏಷ
ನೈವಾಪಯುಙ್ಕ್ತ ಉಪದರ್ಶನಲಕ್ಷಣಸ್ಥಃ ।
ನೈವ ಕ್ರಿಯಾಫಲಮಪೀಷದಪೇಕ್ಷತೇ ನ
ಸ್ವಾನನ್ದಸಾನ್ದ್ರರಸಪಾನಸುಮತ್ತಚಿತ್ತಃ ॥ ೫೪೯ ॥

೫೪೯. ಆತ್ಮಾನಂದದ ಗಟ್ಟಿರಸವನ್ನು ಪಾನಮಾಡಿ ಮದಿಸಿದ ಚಿತ್ತವುಳ್ಳವನಾಗಿರುವ ಇವನು ಉಪದ್ರಷ್ಟ್ರುವಿನ[3] ರೂಪದಿಂದ ಇದ್ದುಕೊಂಡಿರುವದರಿಂದ ಇಂದ್ರಿಯಗಳನ್ನು ವಿಷಯಗಳಲ್ಲಿ ತೊಡಗಿಸುವದೇ ಇಲ್ಲ, (ತೊಡಗಿದವುಗಳನ್ನು) ಹಿಂದಕ್ಕೆಳೆಯುವದೂ ಇಲ್ಲ, ಕರ್ಮಫಲವನ್ನು ಒಂದಿಷ್ಟೂ ಕಣ್ಣೆತ್ತಿ ನೋಡದೆಯೇ ಇರುತ್ತಾನೆ.[4]

ಲಕ್ಷ್ಯಾಲಕ್ಷ್ಯಗತಿಂ ತ್ಯಕ್ತ್ವಾ ಯಸ್ತಿಷ್ಠೇತ್ ಕೇವಲಾತ್ಮನಾ ।
ಶಿವ ಏವ ಸ್ವಯಂ ಸಾಕ್ಷಾದಯಂ ಬ್ರಹ್ಮವಿದುತ್ತಮಃ ॥ ೫೫೦ ॥

೫೫೦. ಲಕ್ಷ್ಯದಲ್ಲಿಡತಕ್ಕದ್ದು, ಇಡದೆ ಇರತಕ್ಕದ್ದು[5]– ಎಂಬ ಎರಡು ವ್ಯಾಪಾರಗಳನ್ನು ಬಿಟ್ಟು, ಕೇವಲ ಆತ್ಮರೂಪದಿಂದಲೇ ಇರುತ್ತಿರುವ ಈ ಬ್ರಹ್ಮವಿದ್ವರಿಷ್ಠನು ತಾನೇ ಸಾಕ್ಷಾಚ್ಛಿವನೇ ಆಗಿರುವನು.

ಜೀವನ್ನೇವ ಸದಾ ಮುಕ್ತಃ ಕೃತಾರ್ಥೋ ಬ್ರಹ್ಮವಿತ್ತಮಃ ।
ಉಪಾಧಿನಾಶಾದ್ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ನಿರ್ದ್ವಯಮ್ ॥ ೫೫೧ ॥

೫೫೧. ಬದುಕಿರುವಾಗಲೇ ನಿತ್ಯಮುಕ್ತನಾಗಿ ಕೃತಾರ್ಥನಾಗಿರುವ ಬ್ರಹ್ಮವಿದುತ್ತಮನು ಮೊದಲೂ ಬ್ರಹ್ಮವೇ ಆಗಿದ್ದು ಉಪಾಧಿಯಾದ (ಶರೀರವು) ನಾಶವಾಗಲು ಅದ್ವಿತೀಯವಾದ ಬ್ರಹ್ಮವನ್ನೇ ಸೇರಿಕೊಳ್ಳುವನು.[6]

ಶೈಲೂಷೋ ವೇಷಸದ್ಭಾವಾಭಾವಯೋಶ್ಚ ಯಥಾ ಪುಮಾನ್ ।
ತಥೈವ ಬ್ರಹ್ಮವಿಚ್ಛ್ರೇಷ್ಠಃ ಸದಾ ಬ್ರಹ್ಮೈವ ನಾಪರಃ ॥ ೫೫೨ ॥

1. ಚಕ್ರದ 'ಮೂಲ'ವೆಂದು ಗ್ರಂಥದಲ್ಲಿರುವದು ಕೀಲವೆಂದಿರಬೇಕೋ ಆ ಶಬ್ದವನ್ನೇ ಆ [illegible] ಅರ್ಥದಲ್ಲಿ ಪ್ರಯೋಗಿಸಿದೆಯೋ ತಿಳಿಯದು.
2. ಬ್ರಹ್ಮದಲ್ಲಿ ನೆಲೆನಿಂತು ತೂಷ್ಣೀಮವಸ್ಥೆಯಲ್ಲಿರುತ್ತಾನೆ.
3. 'ಉಪದ್ರಷ್ಟೃ'ವೆಂದರೆ ಸಾಕ್ಷಿ; ಶಂ. ಗೀ. [illegible]
4. ಇವನು ದೃಗ್ರೂಪನಾಗಿರುವದರಿಂದ ದೃಶ್ಯವಾದ ಭೋಗವು ಅವನಿಗಿಲ್ಲ.
5. ಪರಮಹಂಸಪರಿವ್ರಾಜಕೋಪನಿಷತ್ : 'ದೇವಾನ್ತರಧ್ಯಾನಶೂನ್ಯೋ ಲಕ್ಷ್ಯಾಲಕ್ಷ್ಯನಿವರ್ತಕಃ ||'
6. ಶಂ. ಗೀ. ೫.೦೭, ಬೃ. ೪.೪.೬.

೫೫೨. ನಟನು ವೇಷವಿರುವಾಗಲೂ ಇಲ್ಲದಾಗಲೂ ಹೇಗೆ ಪುರುಷನೇ ಆಗಿರುವನೋ, ಆದರಂತೆ ಬ್ರಹ್ಮವಿದ್ಶ್ರೇಷ್ಠನಾದವನು ಯಾವಾಗಲೂ ಬ್ರಹ್ಮವೇ, ಬೇರೆಯಲ್ಲ.

ಪತ್ರ ಕ್ವಾಪಿ ವಿಶೀರ್ಣಂ ಸತ್ಪರ್ಣಮಿವ ತರೋರ್ವಪುಃ ಪತನಾತ್ ।
ಬ್ರಹ್ಮೀಭೂತಸ್ಯ ಯತೇಃ ಪ್ರಾಗೇವ ಹಿ ತಚ್ಚಿದಗ್ನಿನಾ ದಗ್ಧಮ್ ॥೫೫೩॥

೫೫೩. ಬ್ರಹ್ಮೀಭೂತನಾದ ಯತಿಯ ದೇಹವು ಮರದಿಂದ ಉದುರಿದ ಎಲೆಯಂತೆ ಎಲ್ಲಿಯಾದರೂ ಕಳಚಿಬೀಳಲಿ! ಅದು ಮೊದಲೇ ಜ್ಞಾನಾಗ್ನಿಯಿಂದ ಸುಟ್ಟುಹೋಗಿರುವದಷ್ಟೆ?

ಸದಾತ್ಮನಿ ಬ್ರಹ್ಮಣಿ ತಿಷ್ಠತೋ ಮುನೇಃ
ಪೂರ್ಣಾದ್ವಯಾನನ್ದಮಯಾತ್ಮನಾ ಸದಾ ।
ನ ದೇಶಕಾಲಾದ್ಯುಚಿತಪ್ರತೀಕ್ಷಾ
ತ್ವಙ್ಮಾಂಸವಿಟ್ಪಿಣ್ಡವಿಸರ್ಜನಾಯ ॥೫೫೪॥

೫೫೪. ಸದ್ರೂಪವಾದ ಬ್ರಹ್ಮದಲ್ಲಿ ಪೂರ್ಣವಾದ ಅದ್ವಯಾನಂದರೂಪದಿಂದ ಯಾವಾಗಲೂ ನೆಲೆನಿಂತಿರುವ ಮುನಿಗೆ ಚರ್ಮಮಾಂಸಮಲಗಳ ಮುದ್ದೆಯಾಗಿರುವ ಶರೀರವನ್ನು ಬಿಡುವದಕ್ಕೆ ದೇಶ, ಕಾಲ- ಮುಂತಾದ ಯೋಗ್ಯ ಸಂದರ್ಭಗಳನ್ನು ಕಾದಿರಬೇಕಾದದ್ದಿರುವದಿಲ್ಲ.[1]

ದೇಹಸ್ಯ ಮೋಕ್ಷೋ ನೋ ಮೋಕ್ಷೋ ನ ದಣ್ಡಸ್ಯ ಕಮಣ್ಡಲೋಃ ।
ಅವಿದ್ಯಾಹೃದಯಗ್ರನ್ಥಿಮೋಕ್ಷೋ ಮೋಕ್ಷೋ ಯತಸ್ತತಃ ॥೫೫೫॥

೫೫೫. ದೇಹವನ್ನು ಬಿಡುವದು ಮೋಕ್ಷವಲ್ಲ, ದಂಡವನ್ನು ಅಥವಾ ಕಮಂಡಲುವನ್ನು ಬಿಡುವದೂ ಮೋಕ್ಷವಲ್ಲ. ಅವಿದ್ಯಾಹೃದಯಗ್ರಂಥಿಯ ಮೋಕ್ಷವೇ ಮೋಕ್ಷವಷ್ಟೆ[2]?

ಕುಲ್ಯಾಯಾಮಥ ನದ್ಯಾಂ ವಾ ಶಿವಕ್ಷೇತ್ರೇಽಪಿ ಚತ್ವರೇ ।
ಪರ್ಣಂ ಪತತಿ ಚೇತ್ತೇನ ತರೋಃ ಕಿಂ ನು ಶುಭಾಶುಭಮ್ ॥೫೫೬॥

೫೫೬. ಎಲೆಯು ಕಾಲುವೆಯಲ್ಲೇ ಬೀಳಲಿ, ನದಿಯಲ್ಲಿಯೇ ಬೀಳಲಿ, ಶಿವಕ್ಷೇತ್ರದಲ್ಲಿ ಬೀಳಲಿ[3], ಬೀದಿಯ ಚೌಕದಲ್ಲಾದರೂ ಬೀಳಲಿ; ಆದರಿಂದ ಮರಕ್ಕೆ ಪುಣ್ಯವಾಗಲಿ ಪಾಪವಾಗಲಿ ಉಂಟಾದೀತೇನು?

1. ಆದರೆ ಉಪಾಸಕರಿಗೆ ಇದು ಅವಶ್ಯ.

2. ಪ. ಸಾ ೭೩.

3, ಪ. ಸಾ. ೮೧.

ಪತ್ರಸ್ಯ ಪುಷ್ಪಸ್ಯ ಫಲಸ್ಯ ನಾಶವದ್
ದೇಹೇನ್ದ್ರಿಯಪ್ರಾಣಧಿಯಾಂ ವಿನಾಶಃ ।
ನೈವಾತ್ಮನಃ ಸ್ವಸ್ಯ ಸದಾತ್ಮಕಸ್ಯಾಽಽ-
ನನ್ದಾಕೃತೇರ್ವೃಕ್ಷವದಸ್ತಿ ಚೈಷಃ ॥೫೫೭॥

೫೫೭. ಮರದ ಎಲೆ, ಹೂ, ಅಥವಾ ಹಣ್ಣು ನಾಶವಾಗುವಂತೆಯೇ ದೇಹ, ಇಂದ್ರಿಯಗಳು, ಪ್ರಾಣ, ಬುದ್ಧಿ-ಇವುಗಳ ನಾಶವೂ (ಆಗುವದು). ಸದ್ರೂಪವಾದ, ಆನಂದರೂಪನಾಗಿಯೇ ಇರುವ, ಆತ್ಮನಾದ ತನಗೇನೂ (ನಾಶ)ವಿಲ್ಲ. ಅವನು ಮರದಂತೆ[1] ನಿಶ್ಚಲನಾಗಿಯೇ ಇರುತ್ತಾನೆ.

ಪ್ರಜ್ಞಾನಘನ ಇತ್ಯಾತ್ಮಲಕ್ಷಣಂ ಸತ್ಯಸೂಚಕಮ್ ।
ಅನೂದ್ಯೌಪಾಧಿಕಸ್ಯೈವ ಕಥಯನ್ತಿ ವಿನಾಶನಮ್ ॥೫೫೮॥
ಅವಿನಾಶೀ ವಾ ಅರೇಽಯಮಾತ್ಮೇತಿ ಶ್ರುತಿರಾತ್ಮನಃ ।
ಪ್ರಬ್ರವೀತ್ಯವಿನಾಶಿತ್ವಂ ವಿನಶ್ಯತ್ಸು ವಿಕಾರಿಷು ॥೫೫೯॥

೫೫೮-೫೫೯. "ಅರಿವಿನ ಗಟ್ಟಿಯೇ" (ಬೃ.೪-೫-೧೩) ಎಂದು ಆತ್ಮನು ಸತ್ಯನೆಂಬುದನ್ನು ಸೂಚಿಸುವ ಲಕ್ಷಣವನ್ನು ಅನುವಾದಮಾಡಿಕೊಂಡು[2] ಉಪಾಧಿಯಿಂದೊಡಗೂಡಿದ (ಆತ್ಮನೇ) ನಾಶವಾಗುವನೆಂದು ಹೇಳಿದ ಬಳಿಕ ಶ್ರುತಿಯು "ಎಲೆ, ಈ ಆತ್ಮನು ಅವಿನಾಶಿಯೇ" (ಬೃ. ೪-೫-೧೪) ಎಂದು ವಿಕಾರವುಳ್ಳ (ದೇಹಾದಿಗಳು) ನಾಶವಾದರೂ ಆತ್ಮನು ನಾಶವಾಗುವದಿಲ್ಲವೆಂದು ಹೇಳುತ್ತಿರುವದು.

ಪಾಷಾಣವೃಕ್ಷತೃಣಧಾನ್ಯಕಡಂಕರಾದ್ಯಾ
ದಗ್ಧಾ ಭವನ್ತಿ ಹಿ ಮೃದೇವ ಯಥಾ ತಥೈವ ।
ದೇಹೇನ್ದ್ರಿಯಾಸುಮನಆದಿಸಮಸ್ತದೃಶ್ಯಂ
ಜ್ಞಾನಾಗ್ನಿದಗ್ಧಮುಪಯಾತಿ ಪರಾತ್ಮಭಾವಮ್ ॥೫೬೦॥

೫೬೦. ಕಲ್ಲು, ಮರ, ಹುಲ್ಲು, ಕಾಳು, ಹೊಟ್ಟು[3]- ಮುಂತಾದವುಗಳು ಸುಟ್ಟುಹೋದರೆ ಮಣ್ಣೇ ಆಗುವಂತೆ ದೇಹ, ಇಂದ್ರಿಯ, ಪ್ರಾಣ, ಮನಸ್ಸು, ಮುಂತಾದ ದೃಶ್ಯವೆಲ್ಲವೂ ಜ್ಞಾನಾಗ್ನಿಯಿಂದ ಸುಟ್ಟುಹೋದಮೇಲೆ ಪರಮಾತ್ಮಸ್ವರೂಪವನ್ನೇ ಹೊಂದುತ್ತವೆ.

---

1. ಶ್ವೇ. ೩.೯, ನಾರಾ. ೧೩.

2. ಚೈತನ್ಯಕ್ಕೆ ನಾಶವು ಸಂಭವಿಸುವದಿಲ್ಲವಾದ್ದರಿಂದ ಆತ್ಮನು ಸತ್ಯನೆಂಬುದನ್ನು ಈ ವಿಶೇಷಣದಿಂದ ಸೂಚಿಸಿದಂತಾಗಿದೆ ಎಂದು ಭಾವ.

3. 'ಕಟಂಕರಾದ್ಯಾಃ' ಎಂಬ ಪಾಠಕ್ಕೆ ಚಾಪೆ, ಚಟ್ಟಿ- ಮುಂತಾದವುಗಳು ಎಂದು ಅರ್ಥ.

ವಿಲಕ್ಷಣಂ ಯಥಾ ಧ್ವಾನ್ತಂ ಲೀಯತೇ ಭಾನುತೇಜಸಿ ।
ತಥೈವ ಸಕಲಂ ದೃಶ್ಯಂ ಬ್ರಹ್ಮಣಿ ಪ್ರವಿಲೀಯತೇ ॥ ೫೬೧ ॥

೫೬೧. ಸೂರ್ಯನ ಬೆಳಕಿನಲ್ಲಿ ಹೇಗೆ ಅದಕ್ಕೆ ವಿಲಕ್ಷಣವಾದ ಸ್ವಭಾವದ ಕತ್ತಲೆಯು ಅಡಗಿಹೋಗುವದೋ, ಅದರಂತೆಯೇ ದೃಶ್ಯವೆಲ್ಲವೂ ಬ್ರಹ್ಮದಲ್ಲಿ ಲಯವಾಗುತ್ತದೆ.

ಘಟೇ ನಷ್ಟೇ ಯಥಾ ವ್ಯೋಮ ವ್ಯೋಮೈವ ಭವತಿ ಸ್ಫುಟಮ್ ।
ತಥೈವೋಪಾಧಿವಿಲಯೇ ಬ್ರಹ್ಮೈವ ಬ್ರಹ್ಮವಿತ್ ಸ್ವಯಮ್ ॥ ೫೬೨ ॥

೫೬೨. ಗಡಿಗೆ ನಾಶವಾದರೆ ಆಕಾಶವು ಹೇಗೆ ಸ್ಫುಟವಾಗಿ ಆಕಾಶವೇ ಆಗುವದೋ ಅದರಂತೆಯೇ ಉಪಾಧಿಯಾದ (ಶರೀರವು) ನಾಶವಾಗಲು ಬ್ರಹ್ಮಜ್ಞಾನಿಯು ಸ್ವಯಂ ಬ್ರಹ್ಮವೇ ಆಗುವನು.

ಕ್ಷೀರಂ ಕ್ಷೀರೇ ಯಥಾ ಕ್ಷಿಪ್ತಂ ತೈಲಂ ತೈಲೇ ಜಲಂ ಜಲೇ ।
ಸಂಯುಕ್ತಮೇಕತಾಂ ಯಾತಿ ತಥಾಽಽತ್ಮನ್ಯಾತ್ಮವನ್ಮುನಿಃ ॥ ೫೬೩ ॥

೫೬೩. ಹಾಲಿನಲ್ಲಿ ಹಾಕಿದ ಹಾಲು, ಎಣ್ಣೆಯಲ್ಲಿ ಸುರಿದ ಎಣ್ಣೆ, ನೀರಿನಲ್ಲಿ ಬಿದ್ದ ನೀರು– ಹೇಗೆ ಅದರಲ್ಲಿ ಸೇರಿಕೊಂಡು ಒಂದಾಗಿಬಿಡುವವೋ[1] ಅದರಂತೆ ಆತ್ಮಜ್ಞಾನಿಯಾದ ಮುನಿಯು ಪರಮಾತ್ಮನಲ್ಲಿ ಒಂದಾಗಿಬಿಡುವನು.

ಏವಂ ವಿದೇಹಕೈವಲ್ಯಂ ಸನ್ಮಾತ್ರತ್ವಮಖಣ್ಡಿತಮ್ ।
ಬ್ರಹ್ಮಭಾವಂ ಪ್ರಪದ್ಯೈಷ ಯತಿರ್ನಾವರ್ತತೇ ಪುನಃ ॥ ೫೬೪ ॥
ಸದಾತ್ಮೈಕತ್ವವಿಜ್ಞಾನದಗ್ಧಾವಿದ್ಯಾದಿವರ್ಷ್ಮಣಃ ।
ಅಮುಷ್ಯ ಬ್ರಹ್ಮಭೂತತ್ವಾದ್ ಬ್ರಹ್ಮಣಃ ಕುತ ಉದ್ಭವಃ ॥ ೫೬೫ ॥

೫೬೪– ೬೫. ಹೇಗೆ ಅಖಂಡಸನ್ಮಾತ್ರತ್ವವೆಂಬ ವಿದೇಹಕೈವಲ್ಯವೆಂಬ ಬ್ರಹ್ಮಭಾವವನ್ನು[3] ಪಡೆದ ಈ ಯತಿಯು ಮರಳಿ ಸಂಸಾರಕ್ಕೆ ಬರುವದಿಲ್ಲ.[4] ಏಕೆಂದರೆ ಸದ್ರೂಪವಾದ ಬ್ರಹ್ಮವೂ ನಾನೂ ಒಂದೆಂಬ ಅರಿವಿನಿಂದ ಅವಿದ್ಯೆಯೇ ಮುಂತಾದ ರೂಪವನ್ನು ಸುಟ್ಟುಹಾಕಿ (ಇವನು) ಬ್ರಹ್ಮವಾಗಿರುತ್ತಾನೆ. ಬ್ರಹ್ಮವು ಮತ್ತೆ ಹುಟ್ಟುವದೆಂಬುದೆಲ್ಲಿ ಬಂತು[5] ?

---

1. ಶಂ. ಗೀ. ೭– .., ಅ. ಬಿಂ. ೮..೩.

2. ಪ. ಸಾ. ೫..

3. ಶಂ. ಗೀ. ೭–೨೮, ೧೨.೧೩, ೧೩-೩ ಮುಂತಾದ ಅನೇಕ ಸ್ಥಳಗಳಲ್ಲಿ ವಿದೇಹ ಮುಕ್ತಿಯ ಉಲ್ಲೇಖವಿದೆ.

4. ಶಂ. ಗೀ. ೬.೫–೬.        5. ಶಂ. ಗೀ. ೧೪– .

ಮಾಯಾಕೢಪ್ತೌ ಬನ್ಧಮೋಕ್ಷೌ ನ ಸ್ತಃ ಸ್ವಾತ್ಮನಿ ವಸ್ತುತಃ ।
ಯಥಾ ರಜ್ಜ್ವಾಂ ನಿಷ್ಕ್ರಿಯಾಯಾಂ ಸರ್ಪಾಭಾಸವಿನಿರ್ಗಮೌ ॥ ೫೬ ॥

೫೬. ಬಂಧಮೋಕ್ಷಗಳು ಮಾಯಾಕಲ್ಪಿತವಾಗಿರುವದರಿಂದ ಆತ್ಮನಲ್ಲಿ ನಿಜವಾಗಿ ಇರುವದಿಲ್ಲ. ಯಾವ ಕ್ರಿಯೆಯೂ ಇಲ್ಲದ ಹಗ್ಗದಲ್ಲಿ ಹಾವು ತೋರಿಕೊಳ್ಳುವದು, (ಹಾವು) ಹೋಗುವದು – ಇವು ಹೇಗೆ (ನಿಜವಾಗಿಲ್ಲವೋ ಆದಂತೆಯೇ ಇದು).

ಆವೃತೇಃ ಸದಸತ್ತ್ವಾಭ್ಯಾಂ ವಕ್ತವ್ಯೇ ಬನ್ಧಮೋಕ್ಷಣೇ ।
ನಾವೃತಿರ್ಬ್ರಹ್ಮಣಃ ಕಾಚಿದನ್ಯಾಭಾವಾದನಾವೃತಮ್ ॥ ೫೭ ॥
ಯದ್ಯಸ್ತ್ಯದ್ವೈತಹಾನಿಃ ಸ್ಯಾದ್ದ್ವೈತಂ ನೋ ಸಹತೇ ಶ್ರುತಿಃ

೫೭ ಆವರಣವಿರುವದು, ಇಲ್ಲದಿರುವದು – ಇವುಗಳಿಂದಲೇ (ತಾನೆ), ಬಂಧಮೋಕ್ಷಗಳನ್ನು ಹೇಳಬೇಕು ? ಬ್ರಹ್ಮಕ್ಕೆ ಯಾವ ಆವರಣವೂ ಇರುವದಿಲ್ಲ ; ಏಕೆಂದರೆ ಮತ್ತೊಂದು ಪದಾರ್ಥವೇ ಇಲ್ಲದ್ದರಿಂದ ಅದಕ್ಕೆ ಯಾವ ಆವರಣವೂ ಇರಲಾರದು.[1] (ಆವರಣವು) ಇದ್ದರೆ ಅದ್ವೈತವು ಹೋಗುತ್ತದೆ (ಅದರೆ) ಶ್ರುತಿಯು ದ್ವೈತವನ್ನು ಸಹಿಸುವದಿಲ್ಲ.

ಬನ್ಧಂ ಚ ಮೋಕ್ಷಂ ಚ ಮೃಷೈವ ಮೂಢಾ
ಬುದ್ಧೇರ್ಗುಣಂ ವಸ್ತುನಿ ಕಲ್ಪಯನ್ತಿ ।
ದೃಗಾವೃತಿಂ ಮೇಘಕೃತಾಂ ಯಥಾ ರವೌ
ಯತೋಽದ್ವಯಾಸಙ್ಗಚಿದೇಕಮಕ್ಷರಮ್ ॥ ೫೮ ॥

೫೮. ಬುದ್ಧಿಯ ಗುಣವಾದ ಬಂಧವನ್ನೂ ಮೋಕ್ಷವನ್ನೂ ಮೂಢರು ಮೋಡದಿಂದಾಗಿರುವ ಕಣ್ಣಿನ ಮರೆಯನ್ನು ಸೂರ್ಯನಲ್ಲಿ ಕಲ್ಪಿಸುವಂತೆ[2] ಆತ್ಮವಸ್ತುವಿನಲ್ಲಿ ಸುಳ್ಳಾಗಿಯೇ ಕಲ್ಪಿಸುತ್ತಿರುವರು. ಏಕೆಂದರೆ (ಆತ್ಮವಸ್ತು) ಅದ್ವಿತೀಯವೂ ಸಂಗರಹಿತವೂ ಚಿನ್ಮಾತ್ರವೂ ಆದ ಅಕ್ಷರ (ಬ್ರಹ್ಮ)ವೇ.

ಅಸ್ತೀತಿ ಪ್ರತ್ಯಯೋ ಯಶ್ಚ ಯಶ್ಚ ನಾಸ್ತೀತಿ ವಸ್ತುನಿ ।
ಬುದ್ಧೇರೇವ ಗುಣಾವೇತೌ ನ ತು ನಿತ್ಯಸ್ಯ ವಸ್ತುನಃ ॥ ೫೯ ॥

೫೯. ವಸ್ತುವಿನ ವಿಷಯದಲ್ಲಿ ಇದೆಯೆಂಬ ಪ್ರತ್ಯಯವಿದೆಯಲ್ಲ (ಅದು), ಇಲ್ಲ ಎಂಬ (ಪ್ರತ್ಯಯವಿದೆ)ಯಲ್ಲ (ಅದು) – ಇವೆರಡೂ ಬುದ್ಧಿಯ ಗುಣಗಳೇ ಹೊರತು ನಿತ್ಯವಸ್ತುವಿನವಲ್ಲ.

---

1. ಛಾಂ ೬–೨೪– .

2. 'ಘನಚ್ಛನ್ನದೃಷ್ಟಿಃ' ಎಂಬ ಹಸ್ತಾಮಲಕಸ್ತೋತ್ರದಲ್ಲಿ ಈ ಅಭಿಪ್ರಾಯವಿದೆ.

